# SCHOOL METHOD

BY


**HANUMANT GOVINDRAO DESHPANDE, B. A.,**

S. T. C. (HONOURS),

HEAD-MASTER, TRAINING SCHOOL, DHARWAR.


# ಶಿಕ್ಷಣ ಪದ್ಧತಿ.


ಗ್ರಂಥಕರ್ತೃ

**ಹನುಮಂತ ಗೋವಿಂದರಾವ ದೇಶಪಾಂಡೆ ಬಿ. ಎ.**

ಹೆಡ್‌ಮಾಸ್ತರ ಟ್ರೇನಿಂಗಸ್ಕೂಲ ಧಾರವಾಡ.



(೧ನೇ ಆವೃತ್ತಿ ೫೦೦ ಪ್ರತಿಗಳು)

(Price: Re. 1-4-0). ಬೆಲೆ ೧ ರೂ. ೪ ಆಣೆ.

# ಮುನ್ನುಡಿ



ಈಚೆಗೆ ಶಿಕ್ಷಣ ಶಾಸ್ತ್ರದಲ್ಲಿ ಹೊಸ ಹೊಸ ವಿಚಾರಗಳು ತಲೆದೋರಿರುವದರಿಂದ ಈ ವಿಷಯದ ಮೇಲೆ ಕನ್ನಡದಲ್ಲಿ ಒಂದು ಹೊಸ ಪುಸ್ತಕವನ್ನು ಬರೆಯುವದು ಅವಶ್ಯವಾಯಿತು. ಅದಕ್ಕೆ ತಕ್ಕ ಅನುಕೂಲವೂ ದೊರೆಯಿತು. ಅದೇನೆಂದರೆ—೧೯೩೩ನೇ ಇಸವಿಯ ಆರಂಭದಲ್ಲಿ ನಾವು ಟ್ರೇನಿಂಗ ಕಾಲೇಜಕ್ಕೆ ಬಂದನಂತರ ಅಲ್ಲಿಯ ವರ್ಗಗಳಿಗೆ ಶಿಕ್ಷಣ ಪದ್ಧತಿಯ ವಿಷಯವನ್ನು ಕಲಿಸಬೇಕಾಯಿತು. ಅದಕ್ಕಾಗಿ ಇಂಗ್ರೇಜಿಯಲ್ಲಿ ಬರೆಯಲ್ಪಟ್ಟ ಹಲವು ಹೊಸ ಪುಸ್ತಕಗಳನ್ನು ಓದಿ ನಮ್ಮ ಪ್ರಾಥಮಿಕ ಶಾಲೆಗಳ ಶಿಕ್ಷಕರ ಶಿಕ್ಷಣಕ್ಕೆ ಅನುಗುಣವಾಗುವಂತೆ ಈ ವಿಷಯದಲ್ಲಿ ಅವಶ್ಯಕಂಡ ಸುಧಾರಣೆಗಳನ್ನು ಮಾಡಿ, ಟಿಪ್ಪಣಿಗಳನ್ನು ಬರೆದಿಟ್ಟು, ಒಂದೊಂದು ವಿಷಯದ ವಿವರಣೆಯನ್ನು ವರ್ಗದಲ್ಲಿ ಮಾಡಿದಬಳಿಕ ವಿದ್ಯಾರ್ಥಿಗಳಿಗೆ ಮನನ ಮಾಡುವದರ ದೆಸೆಯಿಂದ ಅವೇ ಟಿಪ್ಪಣಿಗಳನ್ನು ಹೇಳಿ ಬರೆಯಿಸುವ ಅಗತ್ಯವು ಒದಗಿತು. ಹೀಗೆ ಒಂದು ವರ್ಷದವರೆಗೆ ಈ ವಿಷಯವನ್ನು ಸಾಗಿಸಿದನಂತರ ಟಿಪ್ಪಣಿಗಳನ್ನು ಸಾದ್ಯಂತವಾಗಿ ಬರೆದುಕೊಳ್ಳಲಿಕ್ಕೆ ವಿದ್ಯಾರ್ಥಿಗಳಿಗೆ ಬಹಳಕಾಲವೂ ಶ್ರಮವೂ ಹತ್ತುವದರಿಂದ ಅವೇ ಟಿಪ್ಪಣಿಗಳನ್ನು ಅವಶ್ಯವಿದ್ದಲ್ಲಿ ವಿಸ್ತರಿಸಿ ಪುಸ್ತಕರೂಪದಿಂದ ಅಚ್ಚುಹಾಕಿಸಿದರೆ ಹೆಚ್ಚು ಅನುಕೂಲವಾಗುವದೆಂದು ತಿಳಿದು ಈ ಪುಸ್ತಕವನ್ನು ಪ್ರಕಟಿಸಿರುವೆವು. ಈ ಪುಸ್ತಕದಿಂದ ವಿದ್ಯಾರ್ಥಿಗಳಿಗೆ ಶಿಕ್ಷಣಶಾಸ್ತ್ರವನ್ನು ಅಭ್ಯಾಸಿಸಲಿಕ್ಕೆ ಸೌಲಭ್ಯವುಂಟಾಗಿರುವದಲ್ಲದೆ ಇದು ಪ್ರಾಥಮಿಕ ಶಿಕ್ಷಕರಿಗೂ ಅನುಭವವಿಲ್ಲದ ಹೊಸ ಶಿಕ್ಷಕರಿಗೂ ಯೋಗ್ಯ ಮಾರ್ಗದರ್ಶಕವಾಗಿರುವದೆಂದು ನಂಬಿದ್ದೇವೆ.

ಪಾಶ್ಚಾತ್ಯದೇಶಗಳಲ್ಲಿ ಶಿಕ್ಷಣ ಪದ್ಧತಿಯ ವಿಷಯಕ್ಕೆ ಇಲ್ಲಿಯವರೆಗೆ ಆದ ಸುಧಾರಣೆಗಳ ವಿವೇಚನವನ್ನು ಈ ಪುಸ್ತಕದಲ್ಲಿ ಸಂಕ್ಷಿಪ್ತವಾಗಿ ಮಾಡಿದ್ದೇವೆ. ಬೇರೆ ಬೇರೆ ವಿಷಯಗಳನ್ನು ಹೇಗೆ ಕಲಿಸಬೇಕೆಂಬ ಬಗ್ಗೆ ವಿಸ್ತೃತವಾದ ವಿವೇಚನವು ಮಾಡಲ್ಪಟ್ಟಿದೆ. ಮುಖ್ಯವಾಗಿ ವ್ಯಾಕರಣ, ನಿಬಂಧಲೇಖನ, ಗಣಿತ, ಇತಿಹಾಸ, ಭೂಗೋಲ ಮೊದಲಾದ ವಿಷಯಗಳನ್ನು ಕಲಿಸುವ ಹೊಸ ಪದ್ಧತಿಯನ್ನು ಸವಿಸ್ತಾರವಾಗಿ ವಿವರಿಸಿದ್ದೇವೆ. ನಮಗೆ ಈಚೆಯ ೧೪ ವರ್ಷಗಳಲ್ಲಿ ಪ್ರಾಥಮಿಕ ಶಾಲೆಗಳ ನಿಕಟಪರಿಚಯದಿಂದ ಉಂಟಾದ ಅನುಭವದ ಲಾಭವನ್ನು ಮಾಡಿ ಕೊಡುವದೂ ಪ್ರಸ್ತುತ ಪುಸ್ತಕದ ಉದ್ದೇಶಗಳಲ್ಲೊಂದಾಗಿದೆ. ಆದ್ದರಿಂದ ಈ ಪುಸ್ತಕನ್ನು ಓದಿ ಇಲ್ಲಿ ಉಲ್ಲೇಖಿಸಿದ ಪದ್ಧತಿಯಂತೆ ಶಿಕ್ಷಣವನ್ನು ಸಾಗಿಸಿದರೆ ಬಾಲಕರ ಬುದ್ಧಿ ಶಕ್ತಿಗಳ ವಿಕಾಸವೂ ಹೊಸ

ವಿಷಯಗಳನ್ನಾಕಲನಮಾಡುವ ಪಾಟವವೂ ಉಂಟಾಗುವದಲ್ಲದೆ ಅವರಲ್ಲಿ ಉದಾರ ನಾಗರಿಕತ್ವದ ಭಾವನೆಯು ಅಂಕುರಿಸುವದೆಂದು ನಂಬಿದ್ದೇವೆ.

ಪುಸ್ತಕದಲ್ಲಿ ಕೆಲವು ಅಚ್ಚಿನ ದೋಷಗಳು ಇರುವವು. ಅವುಗಳನ್ನು ಓದುವಾಗ ತಿದ್ದ ಬಹುದಾದ್ದರಿಂದ ಒಪ್ಪೋಲೆಯನ್ನು ಜೋಡಿಸಿಲ್ಲ. ಅದಕ್ಕಾಗಿ ವಾಚಕರು ಕ್ಷಮಿಸುವರೆಂದು ನಂಬಿದ್ದೇವೆ.

ಟ್ರೇನಿಂಗ ಸ್ಕೂಲ ಧಾರವಾಡ. ⎱ **ಹನುಮಂತ ಗೋವಿಂದರಾವ**
ಸಪ್ಟಂಬರ ೧೯೨೬ ⎰ **ದೇಶಪಾಂಡೆ.**

# ಅನುಕ್ರಮಣಿಕೆ.

# ಶಿಕ್ಷಣಪದ್ಧತಿ.

## (೧) ಶಿಕ್ಷಣದ ಉದ್ದೇಶ.

ಹುಡುಗರನ್ನು ಇಲ್ಲವೆ ಹುಡಿಗೆಯರನ್ನು ಶರೀರದಿಂದಲೂ ಮನಸ್ಸಿನಿಂದಲೂ ನೀತಿಯಿಂದಲೂ ಮಾದರೀತೆಗೆದುಕೊಳ್ಳುವ ಮನುಷ್ಯರನ್ನು ಇಲ್ಲವೆ ಹೆಂಗಸರನ್ನು ಮಾಡುವದು ಶಿಕ್ಷಣದ ಸಾಮಾನ್ಯವಾದ ಉದ್ದೇಶವು. ಮಾನಸಿಕ ಶಿಕ್ಷಣದ ಅಂತಿಮ ಉದ್ದೇಶವು ಹೊಸಶೋಧಗಳನ್ನು ಮಾಡುವಂಥ ಮತ್ತು ಸ್ವತಂತ್ರವಾಗಿ ವಿಚಾರ ಮಾಡುವ ಶಕ್ತಿಯುಳ್ಳಂಥ ಜನರನ್ನು ಉಂಟುಮಾಡುವದೂ ನೈತಿಕ ಶಿಕ್ಷಣದ ಅಂತಿಮ ಧ್ಯೇಯವು ಸಮಾಜದಲ್ಲಿ ಸುಧಾರಣೆಯನ್ನು ಉಂಟುಮಾಡುವಂಥ ಮತ್ತು ಅದಕ್ಕೆ ಅನುಕೂಲವಾದ ನಿಯಮಗಳನ್ನು ಹಾಕಿಕೊಡುವಂಥ ಜನರನ್ನು ಹುಟ್ಟಿಸುವದೂ ಆಗಿರುವದು.

ಗಂಡಸರು ಮತ್ತು ಹೆಂಗಸರು ಸಶಕ್ತರೂ ವಿಚಾರಶೀಲರೂ ನೀತಿವಂತರೂ ಇದ್ದರೆ ರಾಷ್ಟ್ರವು ಉನ್ನತಿಯನ್ನು ಹೊಂದುವದು. ಆದ್ದರಿಂದ ಶಿಕ್ಷಕರು ಶಿಕ್ಷಣದ ಈ ಮೂರೂ ಅಂಗಗಳಿಗೆ ಸರಿಯಾದ ಲಕ್ಷವನ್ನು ಪೂರೈಸುವದು ಅವಶ್ಯವು.

ಶಿಕ್ಷಕನು ತೋಟಿಗನಂತೆ ಇರುವನು. ತೋಟಿಗನು ಗೊಬ್ಬರಹಾಕಿ ಹದಮಾಡಿದ ಭೂಮಿಯಲ್ಲಿ ಬೀಜವನ್ನು ನಟ್ಟು ದಿನಾಲು ನೀರುಹಾಕಿ ಮೊಳಕೆಒಡೆದು ಸಸಿಯಾದಮೇಲೆ ಅವಕ್ಕೆ ರೋಗವು ತಗಲದಂತೆಯೂ ಹುಳಗಳು ಹತ್ತದಂತೆಯೂ ಜೋಕೆಮಾಡುವನು. ಕೆಲವು ವರ್ಷಗಳು ಗತಿಸಿ ಹೋದಮೇಲೆ ಆ ಸಸಿಯು ಉತ್ತಮ ವೃಕ್ಷವಾಗಿ ನೆರಳನ್ನೂ ಫಲಗಳನ್ನೂ ಕೊಡುವದು. ಬೀಜದಲ್ಲಿ ಒಂದು ಪ್ರಕಾರದ ವಿಶೇಷ ಶಕ್ತಿಇಲ್ಲದೆ ಕೇವಲ ತೋಟಿಗನ ಪ್ರಯತ್ನದಿಂದಲೇ ಅದು ಎಂದೂ ದೊಡ್ಡ ವೃಕ್ಷವಾಗಲಾರದು. ಉದಾಹರಣಾರ್ಥ-- ಹುಲ್ಲಿಗೆ ಎಷ್ಟು ನೀರು-ಗೊಬ್ಬರಗಳನ್ನು ಹಾಕಿದರೂ ಅದು ದೊಡ್ಡ ವೃಕ್ಷವಾಗಲಾರದು. ಅದರಂತೆ ಶಿಕ್ಷಕನು ಹುಡುಗರಲ್ಲಿದ್ದ ಮಾನಸಿಕಶಕ್ತಿಯನ್ನು ಅನುಕೂಲವಾದ ಸಂಗತಿಗಳಿಂದ ವೃದ್ಧಿಪಡಿಸಿ ಪ್ರತಿಕೂಲವಾದ ಸಂಗತಿಗಳನ್ನು ಹೊಡೆದೋಡಿಸಿ ಶಿಕ್ಷಣದ ನಿಜವಾದ ಉದ್ದೇಶವು ಈಡೇರುವಂತೆ ಪ್ರಯತ್ನಿಸತಕ್ಕದ್ದು. ದೇವರು ಬೀಜರೂಪದಿಂದ ಬಾಲಕರಲ್ಲಿ ಇಟ್ಟ ಮಾನಸಿಕ ಶಕ್ತಿಯ ವಿಕಾಸವು ಯೋಗ್ಯಶಿಕ್ಷಣದಿಂದಲೇ ಆಗುವದು. ಇದರಂತೆ ಸಹಾನುಭೂತಿ, ಸ್ವಾರ್ಥತ್ಯಾಗ, ದಯೆ, ಪ್ರೇಮ ಮೊದಲಾದ ಉಚ್ಚಭಾವನೆಗಳ ಅಂಕುರವಾದರೂ ಸಣ್ಣಮಕ್ಕಳ ಅಂತಃಕರಣದಲ್ಲಿ ಇರುವದು. ಈ ಮನೋವಿಕಾರಗಳ ವಿಕಾಸವು ಪೂರ್ಣವಾಯಿತೆಂದರೆ ಗೌತಮಬುದ್ಧ, ಏಕನಾಥ, ತುಕಾರಾಮ, ಪುರಂದರದಾಸ ಮೊದಲಾದ ಸಾಧುಗಳಂಥ ಜನರು ದೃಷ್ಟಿಗೆ ಬೀಳಹತ್ತುವರು,

ಪ್ರತಿಒಬ್ಬ ಬಾಲಕನಲ್ಲಿ ಬುದ್ಧಿಯೂ ಮನೋವೃತ್ತಿಯೂ ಶಾರೀರಿಕಶಕ್ತಿಯೂ ಅಂಕುರರೂಪದಿಂದ ಇರುವವು. ಇವೆಲ್ಲವುಗಳ ಸರಿಯಾದ ಬೆಳವಣಿಗೆಗೆ ವಿಕಾಸವೆನ್ನುವರು. ಶಾರೀರಿಕಶಕ್ತಿಯು ಬೆಳೆಯಬೇಕಾದರೆ ಯೋಗ್ಯವಾದ ವ್ಯಾಯಾಮವು ಅವಶ್ಯವು. ಮನುಷ್ಯನಬುದ್ಧಿಯು ಎಷ್ಟು ತೀಕ್ಷ್ಣವಿದ್ದರೂ ಅವನ ಅಂತಃಕರಣವು ಎಷ್ಟು ದೊಡ್ಡದಿದ್ದರೂ ಶರೀರಸಂಪತ್ತು ಇಲ್ಲದೆ ಅವುಗಳ ಉಪಯೋಗವಾಗಲಾರದು. ನಮ್ಮ ದೇಶದಲ್ಲಿ ಬುದ್ಧಿವಂತರೂ ಸಮಾಜಸುಧಾರಕರೂ ಆದ ಎಷ್ಟೋಜನರು ಅಕಾಲದಲ್ಲಿಯೇ ಮರಣಹೊಂದುವದನ್ನು ನೋಡುತ್ತೇವೆ. ಹೀಗಾಗುವದರಿಂದ ದೇಶಕ್ಕೆ ಬಹಳ ಹಾನಿಯಾಗುತ್ತದೆ. ಆದ್ದರಿಂದಲೇ ನಮ್ಮ ಪ್ರಾಚೀನ ಋಷಿಗಳ "ಧರ್ಮಾರ್ಥಕಾಮಮೋಕ್ಷಾಣಾಂ। ಮೂಲಮುಕ್ತಂ ಕಲೇವರಂ।" (ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಾಧಿಸಲಿಕ್ಕೆ ಸುದೃಢವಾದ ದೇಹವು ಬೇಕು.) "ಶರೀರಮಾದ್ಯಂ ಖಲು ಧರ್ಮಸಾಧನಂ" (ಧರ್ಮವನ್ನು ಗಳಿಸುವಂಥ ಸಾಧನವು ಈ ಶರೀರವು) ಎಂಬ ವಚನಗಳು ಶರೀರಸಂಪತ್ತಿಯ ಮಹತ್ವವನ್ನು ಹೇಳುತ್ತವೆ.

ಮನುಷ್ಯನಿಗೆ ಪೃಥ್ವಿಯಲ್ಲಿ ಶ್ರೇಷ್ಠತೆಯುಂಟಾಗಲಿಕ್ಕೆ ಅವನ ಬುದ್ಧಿಯೇ ಕಾರಣವು. ಬುದ್ಧಿಶಕ್ತಿಯಿಂದ ಮನುಷ್ಯನು ಅನೇಕ ಶೋಧಗಳನ್ನು ಮಾಡಿ ಜಗತ್ತಿನ ಮೇಲೆ ಅಪರಿಮಿತ ಉಪಕಾರವನ್ನು ಮಾಡಿದ್ದಾನೆ. ಮತ್ತು ಮನುಷ್ಯಪ್ರಾಣಿಗಳ ಸುಖವನ್ನು ಹೆಚ್ಚಿಸಿದ್ದಾನೆ. ಆದ್ದರಿಂದ ಪ್ರತಿ ಒಬ್ಬ ಬಾಲಕನಲ್ಲಿ ಬೀಜರೂಪದಿಂದಿರುವ ಬುದ್ಧಿಯ ವಿಕಾಸವನ್ನು ಸಾಧಿಸುವದು ಶಿಕ್ಷಕನ ಕರ್ತವ್ಯವು.

ವ್ಯವಹಾರದಲ್ಲಿ ಬುದ್ಧಿ ಮತ್ತು ಶರೀರಸಂಪತ್ತುಗಳಿಗಿಂತ ನಡತೆಗೆ ಒಳ್ಳೇ ಮಹತ್ವವುಂಟು. ಶೀಲವಿಲ್ಲದವನು ಸ್ವಾರ್ಥಬುದ್ಧಿಯಿಂದ ಬೇಕಾದಂಥ ದುಷ್ಕೃತ್ಯಗಳನ್ನು ಮಾಡಲಿಕ್ಕೆ ಹಿಂಜರಿಯುವದಿಲ್ಲ. ಅಂಥವನು ತನ್ನ ಬುದ್ಧಿಯನ್ನು ಎರಡನೇಯವರನ್ನು ಮೋಸಗೊಳಿಸಲಿಕ್ಕೆ ಉಪಯೋಗಿಸುತ್ತಾನೆ. ಇಂಥವನು ಹೆಚ್ಚು ಬುದ್ಧಿವಂತನಿದ್ದರೆ ಅವನಿಂದ ಸಮಾಜಕ್ಕೆ ಹೆಚ್ಚು ಅಂಜಿಕೆ ಇರುವದು. ಶೀಲದಿಂದಲೇ ಮನುಷ್ಯನಿಗೆ ಮನುಷ್ಯತ್ವ ಉಂಟಾಗುವದು. ಅದು ಇಲ್ಲದಿದ್ದರೆ ಅವನು ಪಶುತುಲ್ಯನಾಗುವನು. ಸುಶೀಲನಾದವನು ತನ್ನ ಕರ್ತವ್ಯವನ್ನು ಮಾಡುವನಲ್ಲದೆ ಎಲ್ಲರಕೂಡ ಪ್ರೀತಿಯಿಂದಲೂ ಸಹಾನುಭೂತಿಯಿಂದಲೂ ನಡೆದು ಅವರ ಕಲ್ಯಾಣವನ್ನು ಸಾಧಿಸುವನು. ಚಿಕ್ಕಮಕ್ಕಳಲ್ಲಿ ಶೀಲವು ಉಂಟಾಗಬೇಕಾದರೆ ಆರಂಭದಿಂದ ಅವರಿಗೆ ಒಳ್ಳೇಚಟಗಳು ಹತ್ತುವಂತೆ ಮಾಡಬೇಕು. ಹಿರಿಯರ ಆಜ್ಞೆಯಂತೆ ನಡೆಯುವದು, ಸತ್ಯವನ್ನು ಹೇಳುವದು, ಸಹಾನುಭೂತಿಯನ್ನು ತೋರಿಸುವದು ಇವೇ ಮೊದಲಾದ ಗುಣಗಳು ಚಿಕ್ಕಂದಿನಲ್ಲಿಯೇ ಮಕ್ಕಳಲ್ಲಿ ಉಂಟಾಗಬೇಕು. ಆತ್ಮಸಂಯಮನದ ಚಟವು ಮೊದಲಿನಿಂದ ಹತ್ತಬೇಕು. ಬಾಲಕರು ದೊಡ್ಡವರಾದಮೇಲೆ ಸುಖದಿಂದ ಇರಬೇಕೆಂದು

ಅಪೇಕ್ಷಿಸುವ ಪಾಲಕರು ಮತ್ತು ಶಿಕ್ಷಕರು ಅವರಿಗೆ ಉತ್ತಮವಾದ ಚಟಗಳು ಹತ್ತುವಂತೆ ಯತ್ನಿಸಬೇಕು.

ಸಣ್ಣಮಕ್ಕಳ ಸ್ವಭಾವವು ಗೃಹಶಿಕ್ಷಣ ಮತ್ತು ಪರಿಸ್ಥಿತಿ ಇವುಗಳಮೇಲೆ ಅವಲಂಬಿಸಿದೆ. ಅವರಲ್ಲಿ ಅನುಕರಣಶಕ್ತಿಯು ವಿಶೇಷವಾಗಿರುವವರಿಂದ ತಮ್ಮಸುತ್ತಲು ಇದ್ದ ಜನರ ನಡೆ-ನುಡಿಗಳನ್ನು ಅವರು ಅನುಕರಣಮಾಡುವರು. ಆಗಿನಿಂದಲೇ ಬಾಲಕರ ಶಿಕ್ಷಣವು ಪ್ರಾರಂಭವಾಗುವದು. ಮಕ್ಕಳು ತಮ್ಮ ಓರಿಗೆಯುವರ ಕೂಡ ಆಡಹತ್ತಿದಮೇಲೆ ಅವರ ಸಹವಾಸದ ಪರಿಣಾಮವು ಅವರ ಸ್ವಭಾವದಮೇಲೆ ಕೆಲಮಟ್ಟಿಗೆ ಆಗುವದು. ಮುಂದೆ ಸಾಲೆಗೆ ಹೋಗಹತ್ತಿದಮೇಲೆ ಸಾಲೆಯುಲ್ಲಿಯ ಶಿಕ್ಷಣವು ಪ್ರಾರಂಭವಾಗುವದು. ಇದರ ಮೇಲಿಂದ ನೋಡಲು ತಾಯಿಯೇ ಮೊದಲನೇ ಶಿಕ್ಷಕಳೆಂದು ಹೇಳಬಹುದು. ಶಿವಾಜಿ, ವಾಶಿಂಗ್ಟನ್, ನೆಪೋಲಿಯನ್ ಮೊದಲಾದ ಪ್ರಸಿದ್ಧ ಪುರುಷರ ಚರಿತ್ರೆಗಳನ್ನು ಓದಿದರೆ ತಾಯಿಯಿಂದ ದೊರೆತ ಶಿಕ್ಷಣದ ಮಹತ್ವವು ಎಷ್ಟೆಂಬದು ಗೊತ್ತಾಗುವದು. ಎಂಥ ಹಟಮಾರಿ ಹುಡುಗನಿದ್ದರೂ ಸಣ್ಣವನಿದ್ದಾಗ ತಾಯಿಯ ಮಾತನ್ನು ಎಂದೂ ಮೀರುವದಿಲ್ಲ. ಆದ್ದರಿಂದಲೇ ಅವರಿಗೆ ಚಿಕ್ಕ ವಯಸ್ಸಿನಲ್ಲಿಯೇ ಯೋಗ್ಯವಾದ ನಡೆ-ನುಡಿಗಳನ್ನು ಕಲಿಸುವದು ತಾಯಿಯ ಕರ್ತವ್ಯವು. ಆಕೆಯು ದಯೆ, ಪರೋಪಕಾರ, ದೇವರಮೇಲೆ ವಿಶ್ವಾಸ, ಮುಂತಾದ ಉಚ್ಚ ಮನೋವೃತ್ತಿಗಳ ಪರಿಪೋಷಣವನ್ನು ಮಾಡಬೇಕು. ತಂದೆಯಿಂದಾದರೂ ಬಾಲಕನು ಶಿಕ್ಷಣವನ್ನು ಹೊಂದುವನು. ಹೀಗೆ ತಾಯಿ–ತಂದೆಗಳಿಂದ ದೊರೆತ ಶಿಕ್ಷಣಕ್ಕೆ ಗೃಹಶಿಕ್ಷಣವೆನ್ನುವರು.

ಪಾಲಕರು ಎಷ್ಟು ಸುಶಿಕ್ಷಿತರಿದ್ದರೂ ಮಕ್ಕಳನ್ನು ಸಾಲೆಗೆ ಕಳಿಸುವದು ರೂಢವಾಗಿದೆ. ಆದ್ದರಿಂದ ಶಿಕ್ಷಕರು ಬಾಲಕರ ನೈತಿಕ, ಮಾನಸಿಕ, ಶಾರೀರಿಕ ಶಕ್ತಿಗಳು ಸರಿಯಾಗಿ ವಿಕಾಸ ಹೊಂದುವಂತೆ ಶಿಕ್ಷಣವನ್ನು ಕೊಡುವದು ಅವರ ಕರ್ತವ್ಯವು.

## (೨) ಮಾನಸಿಕ ಶಿಕ್ಷಣ.

ಬಾಲಕರ ಜ್ಞಾನವು ಹೆಚ್ಚಾಗಿ, ಸ್ವತಂತ್ರರೀತಿಯಿಂದ ವಿಚಾರಮಾಡುವ ಚಟವು ಅವರಿಗೆ ಹತ್ತಬೇಕೆಂತಲೂ ಅವರ ವಿಷಯಗ್ರಹಣಶಕ್ತಿಯು ಬೆಳೆಯಬೇಕೆಂತಲೂ ಮಾನಸಿಕ ಶಿಕ್ಷಣವನ್ನು ಕೊಡುವದುಂಟು. ಮನುಷ್ಯನ ಬುದ್ಧಿ ಮತ್ತು ಸ್ವಭಾವಗಳು ಅವನ ಮನಸ್ಸಿನ ವಿಕಾಸದ ಮೇಲೆಯೇ ಅವಲಂಬಿಸಿವೆ. ಅಂದರೆ ಮನಸ್ಸು ವಿಕಾಸಹೊಂದಿದಂತೆ ಅವನ ಬುದ್ಧಿಯು ಪರಿಣತಸ್ಥಿತಿಯನ್ನು ಹೊಂದುವದು. ಶಿಕ್ಷಕನು ಸಣ್ಣಮಕ್ಕಳ ಮನಸ್ಸಿನ ವಿಕಾಸವು ಯಾವ ಯಾವ ಪ್ರಕಾರದಿಂದ ಆಗುವದೆಂಬದನ್ನು ಅರಿತುಕೊಂಡು ತನ್ನ ಕೆಲಸಕ್ಕೆ ಪ್ರಾರಂಭಿಸಿದರೆ ಶಿಕ್ಷಣದ ಉದ್ದೇಶವು

ಸಫಲವಾಗುವದು. ಮನಸ್ಸಿನ ವ್ಯಾಖ್ಯೆಯನ್ನು ಸರಿಯಾಗಿ ಹೇಳುವದು ದುಸ್ತರವಾದರೂ ಅದು ಮನುಷ್ಯನಿಗೆ ದೇವರಿಂದ ದೊರೆತ ಅದ್ಭುತಶಕ್ತಿಯೆಂದು ಅನ್ನಬಹುದು. ಮನಸ್ಸಿನಿಂದಲೇ ನಮಗೆ ಸುಖ-ದುಃಖಾದಿ ಭಾವನೆಗಳು ಉಂಟಾಗುತ್ತವೆ. ಜ್ಞಾನವು ಹುಟ್ಟುತ್ತದೆ. ಮತ್ತು ಕೆಲಸಮಾಡುವ ಪ್ರವೃತ್ತಿಯು ಉಂಟಾಗುತ್ತದೆ. ಜ್ಞಾನೇಂದ್ರಿಯಗಳಿಂದ ಮನಸ್ಸಿಗೆ ಜಗತ್ತಿನ ಜ್ಞಾನವುಂಟಾಗುತ್ತದೆ. ಈ ಜ್ಞಾನದ ಪರಿಣಾಮವು ಮನಸ್ಸಿನಮೇಲೆ ಆಗುತ್ತದೆ. ಮತ್ತು ಬೇಕಾದಾಗ ಅದರ ಸ್ಮೃತಿಯು (ನೆನಪು) ಉಂಟಾಗುವದು. ಸ್ಮೃತಿಯಿಂದ ಕಲ್ಪನಾಶಕ್ತಿಯೂ ನಿರ್ಣಯಶಕ್ತಿಯೂ ವಿಚಾರಶಕ್ತಿಯೂ ಉಂಟಾಗುವವು. ಸಂವೇದನ, ಬೋಧ, ಸ್ಮರಣೆ, ಕಲ್ಪನೆ, ಮತ್ತು ವಿಚಾರ ಇವೆಲ್ಲ ಜ್ಞಾನದ ಭಾಗಗಳು. ಭಾವನೆಗಳೆಂದರೆ ಹಸಿವೆ-ನೀರಡಿಕೆ, ಸುಖ-ದುಃಖ, ಶ್ರಮ, ಪಶ್ಚಾತ್ತಾಪ, ಪ್ರೀತಿ, ದ್ವೇಷ ಮುಂತಾದವುಗಳು. ಪ್ರವೃತ್ತಿಯಲ್ಲಿ ಮನಸ್ಸಿನ ಕೃತಿಯೂ, ಪ್ರಯತ್ನವೂ, ನಿಶ್ಚಯವೂ ಸಮಾವೇಶವಾಗುತ್ತವೆ. ಮನಸ್ಸಿನ ಈ ಮೂರು ವ್ಯಾಪಾರಗಳು ಪ್ರತ್ಯೇಕವಾಗಿ ಎಂದೂ ನಡೆಯುವದಿಲ್ಲ. ಪ್ರಯಾಗದಲ್ಲಿ ತ್ರಿವೇಣೀ ಸಂಗಮವಾದಮೇಲೆ ಮೂರೂ ನದಿಗಳ ನೀರು ಕೂಡಿಕೊಂಡು ಹರಿಯುವಂತೆ ಮನಸ್ಸಿನ ಮೂರೂ ವ್ಯಾಪಾರಗಳು ಮಿಶ್ರವಾಗಿ ನಡೆಯುತ್ತವೆ. ಉದಾ:— ಬಾಲಕನ ಮುಂದೆ ಒಂದು ಸುಂದರವಾದ ಬಣ್ಣದ ಚಿತ್ರವನ್ನು ಹಿಡಿಯಲು ಅವನು ಅದನ್ನು ನೋಡಿ ಆನಂದಬಡುತ್ತಾನೆ. ಮತ್ತು ಆ ಚಿತ್ರವನ್ನು ಹೆಚ್ಚು ಲಕ್ಷಪೂರ್ವಕವಾಗಿ ನೋಡುವ ಪ್ರವೃತ್ತಿಯು ಅವನಲ್ಲಿ ಉಂಟಾಗುವದು. ಆಮೇಲೆ ಇದು ಇಂಥಾದ್ದರ ಚಿತ್ರವೆಂದು ಹೇಳುವನು ಈ ಮೂರೂ ವ್ಯಾಪಾರಗಳಲ್ಲಿ ಭಾವನೆಯು ಮುಖ್ಯವಾದರೂ ಅದರ ಸಂಗಡ ಪ್ರವೃತ್ತಿಯೂ ಜ್ಞಾನವೂ ಉಂಟಾಗುವವು.

ಶರೀರಕ್ಕೂ ಮನಸ್ಸಿಗೂ ಇರುವ ಸಂಬಂಧ—ಯಾವಸಂಗತಿಗಳಿಂದ ಶರೀರದ ಮೇಲೆ ಅಪಾಯಕಾರಕ ಪರಿಣಾಮವಾಗುವದೋ ಆ ಸಂಗತಿಗಳಿಂದ ಮನಸ್ಸಿನ ಮೇಲಾದರೂ ಅಪಾಯಕಾರಕ ಪರಿಣಾಮವಾಗುವದು. ಕೆಟ್ಟಹವೆ, ಸತ್ವಹೀನವಾದ ಅನ್ನ, ಬೆಳಕಿಲ್ಲದ ಮನೆ ಇವುಗಳಿಂದ ಶರೀರದಮೇಲೆ ಅಪಾಯಕಾರಕ ಪರಿಣಾಮವಾದಂತೆ ಮನಸ್ಸಿನ ಮೇಲಾದರೂ ಆಗುವದು. ಒಂದೇ ಪಾಠವನ್ನು ಬಹಳ ಹೊತ್ತು ನಡಿಸಿದರೆ ಮುದುಗರ ಲಕ್ಷವು ಪಾಠದಕಡೆಗೆ ಉಳಿಯುವದಿಲ್ಲ. ಮನಸ್ಸಿನ ವ್ಯಾಪಾರವು ಉತ್ತಮರೀತಿಯಿಂದ ನಡೆಯಬೇಕಾದರೆ ಉತ್ತಮವಾದ ಶರೀರಸಂಪತ್ತು ಅವಶ್ಯವಾಗಿರುವದು. ಶರೀರವು ನಿರೋಗಿಯಾಗಿದ್ದಾಗ ಮನಸ್ಸು ಪ್ರಸನ್ನವಾಗಿರುವದು. ಆದ್ದರಿಂದ ಬಾಲಕರ ಶರೀರವು ನಿರೋಗಿಯಾಗಿರುವಂತೆ ಶಿಕ್ಷಕರು ಎಲ್ಲ ಸಂಗತಿಗಳ ಕಡೆಗೆ ಲಕ್ಷಕೊಡತಕ್ಕದ್ದು. ಶಾಲೆಯ ಮನೆಯು ಸಾಕಷ್ಟು ಬೆಳಕುಳ್ಳದ್ದೂ ಹವೆಯಾಡಲಿಕ್ಕೆ ದ್ವಾರಗಳುಳ್ಳದ್ದೂ ಮಳೆಗಾಳಿಗಳಿಂದ ಆಚ್ಛಾದಿತವಾದದ್ದೂ ಇರತಕ್ಕದ್ದು.

ಇದರಂತೆ ಪಾಠಗಳಾದರೂ ಹೆಚ್ಚು ಉದ್ದವಿರಬಾರದು. ನಿಯಮಿತವೇಳೆಯಾದ ಕೂಡಲೆ ವಿಷಯಾಂತರವನ್ನು ಮಾಡುವದಲ್ಲದೆ ವಿಶ್ರಾಂತಿಯ ಕಾಲವನ್ನು ಬಾಲಕರಿಗೆ ಕೊಡಬೇಕು. ಅವರಿಗೆ ಬೇಸರಬರಬಾರದೆಂದು ಗಾಯನ, ಡ್ರಿಲ್, ಚಿತ್ರಕಲೆ ಮೊದಲಾದ ಮನೋರಂಜಕ ಸಂಗತಿಗಳನ್ನು ಸೇರಿಸಬೇಕು, ಹುಡುಗರು ಸಣ್ಣವರಿರುವಾಗ ಅವರಲ್ಲಿ ಭಾವನಾಶಕ್ತಿಯು ಹೆಚ್ಚು ಇರುವದು. ಜ್ಞಾನ ಮತ್ತು ಪ್ರವೃತ್ತಿಗಳು ಕಡಿಮೆ ಇರುವವು. ಯಾವದಾದರೊಂದು ಸಂಗತಿಯನ್ನು ತಿಳುಕೊಳ್ಳುವಾಗ ನಾವು ಅದರ ಕಡೆಗೆ ಪೂರ್ಣ ಲಕ್ಷಕೊಡಬೇಕಾಗುವದು. ಏಕಾಗ್ರಚಿತ್ತದಿಂದ ಲಕ್ಷಕೊಡುವ ವ್ಯಾಪಾರಕ್ಕೆ "ಅವಧಾನ" ವೆನ್ನುವರು. ಅವಧಾನವು ಎರಡು ಪ್ರಕಾರವಾಗಿರುವದು. ೧ ಐಚ್ಛಿಕ. ೨ ಅನೈಚ್ಛಿಕ.ಬುದ್ಧಿಪುರಃಸರವಾಗಿ ಕೊಡುವ ಅವಧಾನಕ್ಕೆ ಐಚ್ಛಿಕ ಅವಧಾನವೆನ್ನುವರು. ಬಿಗಿಯಾದ ಲೆಕ್ಕವನ್ನು ಶಿಕ್ಷಕರು ತಿಳಿಸುವಾಗ ಪ್ರೌಢವಿದ್ಯಾರ್ಥಿಗಳು ಏಕಾಗ್ರಚಿತ್ತದಿಂದ ಅದನ್ನು ತಿಳುಕೊಳ್ಳಲಿಕ್ಕೆ ಹವಣಿಸುವರು. ಇದೇ ಐಚ್ಛಿಕ ಅವಧಾನದ ಉದಾಹರಣೆಯು. ಸುಂದರವಾದ ಚಿತ್ರವನ್ನಾಗಲಿ ಆಟದ ಒಡವೆಗಳನ್ನಾಗಲಿ ಹುಡುಗರ ಮುಂದೆ ಹಿಡಿದ ಕೂಡಲೆ ಅವರ ಚಿತ್ತವು ಆ ವಸ್ತುವಿನ ಕಡೆಗೆ ಹೋಗುವದು ಇದೇ ಅನೈಚ್ಛಿಕ ಅವಧಾನದ ಉದಾಹರಣೆಯು. ಬಾಲಕರಲ್ಲಿ ಪ್ರವೃತ್ತಿಯು ಕಡಿಮೆ ಇರುವದರಿಂದ ಐಚ್ಛಿಕ ಅವಧಾನವನ್ನು ಅವರು ಕೊಡಲಾರರು; ಆದ್ದರಿಂದ ಸಣ್ಣ ಮಕ್ಕಳಿಗೆ ಕಲಿಸುವಂಥ ಶಿಕ್ಷಕರು ಶಿಕ್ಷಣದಲ್ಲಿ ಅನೈಚ್ಛಿಕ ಅವಧಾನದ ಉಪಯೋಗವನ್ನು ಮಾಡಿಕೊಳ್ಳಬೇಕು. ಅಂದರೆ ಹುಡುಗರಿಗೆ ಯಾವ ಸಂಗತಿಗಳ ಮೇಲೆ ಪ್ರೀತಿಯುಂಟೋ ಅವುಗಳನ್ನು ಆದಷ್ಟು ಹೆಚ್ಚಿಗೆ ಒದಗಿಸಿಕೊಡತಕ್ಕದ್ದು. ಬಾಲಕರ ಲಕ್ಷವು ಪಾಠದ ಕಡೆಗೆ ಉಳಿಯುವದಕ್ಕಾಗಿ ಶಿಕ್ಷಕರು ಕೆಳಗಿನ ಸೂಚನೆಗಳನ್ನು ನೆನಪಿಡತಕ್ಕದ್ದು.

೧. ಬಾಲಕರಿಗೆ ಕಲಿಸುವಂಥ ಪಾಠಗಳು ಯಾವಾಗಲೂ ಮನೋರಂಜಕವಾಗಿರಬೇಕು.

೨. ಚಿತ್ರ ಮತ್ತು ಉಪಕರಣಗಳ ಉಪಯೋಗವನ್ನು ಮಾಡತಕ್ಕದ್ದು.

೩. ಬಾಲಕರಿಗೆ ಕೆಲಸಮಾಡುವ ಉತ್ಸಾಹ ಹೆಚ್ಚಿರುವದರಿಂದ ಪಾಠಗಳ ಸಂಬಂಧದ ಎಲ್ಲ ಕೆಲಸಗಳನ್ನು ಅವರಿಂದಲೇ ಮಾಡಿಸಿಕೊಳ್ಳತಕ್ಕದ್ದು.

೪. ಹುಡುಗರಿಗೆ ಗೊತ್ತಿದ್ದ ಸಂಗತಿಗಳಿಂದ ಗೊತ್ತಿಲ್ಲದ ಸಂಗತಿಗಳನ್ನು ಕಲಿಸತಕ್ಕದ್ದು.

೫. ಪಾಠಗಳಲ್ಲಿ ಪ್ರಶ್ನಗಳ ಉಪಯೋಗವನ್ನು ಆದಷ್ಟು ಮಟ್ಟಿಗೆ ಮಾಡಬೇಕು.

೬. ಗುಣಗಳನ್ನು ಕೊಡುವದು ಅಥವಾ ಮೇಲುನಂಬರ ಕೊಡುವದು ಹುಡು ಗರ ಲಕ್ಷ್ಯ ಉಳಿಯುವದಕ್ಕೆ ಉಪಯುಕ್ತವಾಗಿರುವದು.

ಬಾಲಕರ ಮನಸ್ಸಿನ ವಿಕಾಸದ ಮೆಟ್ಟುಗಳು ನಾಲ್ಕು ಇರುತ್ತವೆ. ಅವುಯಾವವೆಂದರೆ:-

(ಅ) ಹುಟ್ಟಿದಂದಿನಿಂದ ಮೊದಲಿನ ಮೂರುವರ್ಷಗಳು:—ಈ ಅವಧಿಯಲ್ಲಿ ಮಕ್ಕಳ ಜ್ಞಾನೇಂದ್ರಿಯುಗಳು ತೀಕ್ಷ್ಣವಾಗಿರುವವು. ಹೊಸಹೊಸ ಬಣ್ಣದ ಒಡವೆಗಳನ್ನು ತೆಗೆದುಕೊಳ್ಳಲಿಕ್ಕೆ ಅವು ಅಪೇಕ್ಷಿಸುತ್ತವೆ. ಅವರಲ್ಲಿ ಬಿನ್ನ ಭಾವವು ಉಂಟಾಗುತ್ತದೆ ಅಂಜಿಕೆ, ಸಿಟ್ಟು, ಪ್ರೀತಿ ಮೊದಲಾದ ಗುಣಗಳು ಗೋಚರವಾಗುತ್ತವೆ.

(ಬ) ನಾಲ್ಕನೇವರ್ಷದಿಂದ ಏಳನೇವರ್ಷದವರೆಗೆ ಹುಡುಗನಿಗೆ ಮಾತಾಡ ಲಿಕ್ಕೂ ಅಡ್ಡಾಡಲಿಕ್ಕೂ ಬರುವದು. ಜ್ಞಾನೇಂದ್ರಿಯುಗಳು ಹೆಚ್ಚು ತೀಕ್ಷ್ಣವಾಗುವವು. ಜಗತ್ತಿನಲ್ಲಿಯ ಸಂಗತಿಗಳನ್ನು ತಿಳಿದುಕೊಳ್ಳುವ ಕುತೂಹಲವು ಹೆಚ್ಚಾಗುವದು. ಆಶೆ, ಸಿಟ್ಟು ಮೊದಲಾದ ಭಾವನೆಗಳು ಹೆಚ್ಚಾಗುತ್ತವೆ. ಈ ಅವಧಿಯಲ್ಲಿ ಮಕ್ಕಳಿಗೆ ಬಾಲೋದ್ಯಾನ ಪದ್ಧತಿ ಯಿಂದ ಶಿಕ್ಷಣ ಕೊಡುವದು ಉತ್ತಮವಾದದ್ದು.

(ಕ) ಎಂಟುವರ್ಷದಿಂದ ಹದಿನಾರುವರ್ಷದವರೆಗೆಃ—ಈ ಅವಧಿಯಲ್ಲಿ ಸ್ಮರ ಣಶಕ್ತಿಯು ತೀವ್ರವಾಗಿರುವದು. ವಿಚಾರ, ನಿರ್ಣಯ, ಅನುಮಾನ ಮೊದಲಾದ ಉಚ್ಚ ಮಾನಸಿಕ ವ್ಯಾಪಾರಗಳು ಬೆಳೆಯುತ್ತವೆ. ಸಿಟ್ಟು ಅಂಜಿಕೆ ಮೊದಲಾದ ಭಾವನೆಗಳು ಕಡಿಮೆಯಾಗುತ್ತವೆ. ಅವರ ಬದ ಲಾಗಿ ಆದರ, ಸ್ನೇಹ, ಭೂತದಯೆ, ಸ್ವಾಭಿಮಾನ ಈ ಭಾವನೆಗಳು ಬೆಳೆಯಹತ್ತುತ್ತವೆ. ಇದೇ ಪ್ರಾಥಮಿಕ-ಶಿಕ್ಷಣದ ಕಾಲವಾಗಿರುವದು.

(ಇ) ಹದಿನೈದರಿಂದ ಇಪ್ಪತ್ತುವರ್ಷದವರೆಗೆಃ— ಈ ಅವಧಿಯಲ್ಲಿ ಎಲ್ಲ ಮಾನಸಿಕ ವ್ಯಾಪಾರಗಳು ಪೂರ್ಣತೆಯನ್ನು ಹೊಂದುತ್ತದೆ. ವಿವೇಕ ಬುದ್ಧಿಯು ಹೆಚ್ಚಾಗುತ್ತದೆ. ಕರ್ತವ್ಯಾಕರ್ತವ್ಯಗಳ ಜ್ಞಾನವಾಗು ತ್ತದೆ.

## (೩) ನೀತಿಶಿಕ್ಷಣ.

ಪ್ರಾಥಮಿಕ ಶಾಲೆಗಳಲ್ಲಿ ನೀತಿಶಿಕ್ಷಣದ ವಿಷಯವಾಗಿ ಹೆಚ್ಚು ಲಕ್ಷ ಪೂರೈಸು ವದಿಲ್ಲೆಂಬ ಸಂಗತಿಯು ದುಃಖದಾಯಕವು, ಮಾನಸಿಕ ಹಾಗು ಶಾರೀರಿಕ ಶಿಕ್ಷಣಕ್ಕಿಂ

ತಲೂ ನೀತಿಶಿಕ್ಷಣವು ಹೆಚ್ಚು ಮಹತ್ವವುಳ್ಳದ್ದು. ಮನುಷ್ಯನ ಶರೀರವು ಎಷ್ಟು ಸದೃಢ ವಿದ್ದರೂ ಬುದ್ಧಿಯು ಎಷ್ಟು ತೀವ್ರವಿದ್ದರೂ ಶೀಲವಿಲ್ಲದೆ ಅವುಗಳ ಉಪಯೋಗವು ಸರಿಯಾಗಿ ಆಗುವದಿಲ್ಲ. ಶೀಲವಿಲ್ಲದ ಬುದ್ಧಿವಂತನು ಸಮಾಜಕ್ಕೆ ಘಾತಕನಾಗುವನು. ಯಾವ ರಾಷ್ಟ್ರದಲ್ಲಿ ಸುಶೀಲರಾದ ಜನರು ಹೆಚ್ಚಿರುವರೋ ಆ ರಾಷ್ಟ್ರವು ಘನತೆಗೇರು ವದು. ಆದ್ದರಿಂದ ಮಕ್ಕಳು ಸುಶೀಲರಾಗುವಂತೆ ಮಾಡುವದು ಶಿಕ್ಷಕರ ಕರ್ತವ್ಯವು. ನೀತಿಶಿಕ್ಷಣ ಕೊಡುವದೆಂದರೆ ಚಿಕ್ಕಮಕ್ಕಳು ಸನ್ಮಾರ್ಗದಿಂದಲೂ ಪ್ರಾಮಾಣಿಕತನ ದಿಂದಲೂ ನಡೆದುಕೊಳ್ಳುವ ಚಟವು ಅವರಿಗೆ ಹತ್ತುವಂತೆ ಮಾಡುವದು, ಅವರಲ್ಲಿ ಸುವಿಚಾರಗಳು ಹುಟ್ಟುವಂತೆ ಮಾಡುವದು, ಅವರ ಅಂತಃಕರಣದಲ್ಲಿ ಉಚ್ಚಭಾವ ನೆಗಳು ಉಂಟಾಗುವಂತೆ ಮಾಡುವದು, ಮತ್ತು ಆತ್ಮಸಂಯಮನವನ್ನು ಪಾಲಿ ಸುವದು.

ಇನ್ನು ಬಾಲಕರ ನೀತಿಯು ಆನುವಂಶಿಕ ಸಂಸ್ಕಾರ, ಗೃಹಶಿಕ್ಷಣ, ಮತ್ತು ಪರಿ ಸ್ಥಿತಿ ಇವುಗಳಮೇಲೆ ಅವಲಂಬಿಸಿರುವದು ಸಿಜವು. ಉದಾ—ದಮ್ಮು, ಬಿಳಪು, ಕೆಮ್ಮು ಮುಂತಾದ ರೋಗಗಳು ಕೆಲವು ಕುಟುಂಬಗಳಲ್ಲಿ ಹಿರಿಯರಿಂದ ಚಿಕ್ಕವರಿಗೆ ಬಂದ ದ್ದನ್ನು ನೋಡುತ್ತೇವೆ. ಅದರಂತೆಯೇ ಸದ್ಗುಣ ಅಥವಾ ದುರ್ಗುಣಗಳೂ ಕೆಲ ಮಟ್ಟಿಗೆ ಹಿರಿಯರಿಂದ ಕಿರಿಯರಿಗೆ ಬರುವದುಂಟು. ಇದಕ್ಕೇ ಆನುವಂಶಿಕ ಸಂಸ್ಕಾರವೆನ್ನುವರು. ಹುಡುಗರಿಗೆ ನೀತಿಶಿಕ್ಷಣವನ್ನು ಕೊಡುವ ಪ್ರಸಂಗಗಳು ಶಿಕ್ಷಕನಿಗಿಂತ ತಂದೆ-ತಾಯಿಗಳಿಗೆ ಹೆಚ್ಚು ಅನುಕೂಲವಾಗಿ ಒದಗುವವು. ಸಾಲೆ ಯಲ್ಲಿಯ ಶಿಕ್ಷಣಕ್ಕಿಂತ ಮೊದಲು ಗೃಹಶಿಕ್ಷಣವು ಪ್ರಾರಂಭವಾಗುವದು. ಮತ್ತು ಮಕ್ಕಳು ಈ ವಿಷಯದಲ್ಲಿ ಪ್ರಾಥಮಿಕ ಸಂಸ್ಕಾರಗಳನ್ನು ತಂದೆ-ತಾಯಿಗ ಳಿಂದಲೇ ಹೊಂದುವರು. ತಂದೆ-ತಾಯಿಗಳ ಹಾಗು ಕುಟುಂಬದಜನರ ಸಹ ವಾಸದಿಂದ ಉಂಟಾದ ಪರಿಣಾಮವು ಸಾಲೆಯಲ್ಲಿಯ ಶಿಕ್ಷಣದಿಂದ ಅಳಿದು ಹೋಗುವದಿಲ್ಲವಾದ್ದರಿಂದ ನೀತಿಶಿಕ್ಷಣವನ್ನು ಕೊಡಲಿಕ್ಕೆ ಉತ್ತಮವಾದ ಸ್ಥಾನವೆಂ ದರೆ ಕುಟುಂಬವು- ಕುಟುಂಬದ ಜನರು ಪರಸ್ಪರ ಪ್ರೀತಿಯಿಂದ ನಡೆದುಕೊಳ್ಳುತ್ತಿ ದ್ದರೆ ದಯೆ, ಪ್ರೇಮ, ಸೌಜನ್ಯ ಮೊದಲಾದ ಗುಣಗಳು ಹುಡುಗರಲ್ಲಿ ಉಂಟಾಗು ವವು. ಈಗಿನ ಪದ್ಧತಿಯಂತೆ ಬಾಲಕರು ಶಿಕ್ಷಕರ ಸಹವಾಸದಲ್ಲಿ ಆರುತಾಸು ಇರುವರು. ಮತ್ತು ಒಂದು ವರ್ಗದಲ್ಲಿ ೩೦ ರಿಂದ ೪೦ ರವರೆಗೆ ಹುಡುಗರಿರು ವರು. ಇವರೆಲ್ಲರ ಆಚಾರ ವಿಚಾರ ಭಾವನೆಗಳ ಕಡೆಗೆ ಲಕ್ಷವನ್ನು ಇಟ್ಟು ಅವರಿಗೆ ಸರಿಯಾದ ಸಂಸ್ಕಾರವುಂಟಾಗುವಂತೆ ಮಾಡುವದು ಕಠಿಣವಾದ ಕೆಲಸವು. ತಂದೆ-ತಾಯಿಗಳು ಸುಶಿಕ್ಷಿತರಿದ್ದರೆ ಈ ಕೆಲಸವನ್ನು ಬಹು ಸುಲಭವಾಗಿ ಮಾಡುವರು. ಇದಲ್ಲದೆ ಹುಡುಗನು ದೊಡ್ಡವನಾದ ಹಾಗೆ ಸಮಾಜದಲ್ಲಿ ಅನೇಕ ಕೆಲಸಗ ಳನ್ನು ಮಾಡಬೇಕಾಗುವದು, ಮತ್ತು ಕುಟುಂಬದ ಜನರಲ್ಲದಂಥ ಇತರರಗೂಡ

ಮೇಲಿಂದ ಮೇಲೆ ವ್ಯವಹಾರ ಮಾಡಬೇಕಾಗುವದು. ಈ ಪ್ರಸಂಗಗಳಿಂದ ಬಾಲಕರು ಸದ್ಗುಣಗಳನ್ನಾಗಲಿ ದುರ್ಗುಣಗಳನ್ನಾಗಲಿ ಪರಿಸ್ಥಿತಿ ಇದ್ದಂತೆ ಕಲಿಯಬಹುದು. ಮೇಲೆ ಹೇಳಿದಂತೆ ಆನುವಂಶಿಕ ಸಂಸ್ಕಾರ, ಗೃಹಶಿಕ್ಷಣ, ಪರಿಸ್ಥಿತಿ ಇವು ಅನುಕೂಲ ವಿದ್ದರೆ ಹುಡುಗರ ಶೀಲವು ಉತ್ತಮತರದ್ದಾಗುವದೆಂಬವಕ್ಕೆ ಸಂದೇಹವಿಲ್ಲ. ಅವು ಕೆಲವುಟ್ಟಿಗೆ ಪ್ರತಿಕೂಲವಾಗಿದ್ದರೂ ಸಾಲೆಯಲ್ಲಿ ನೈತಿಕ ಶಿಕ್ಷಣವನ್ನು ಕೊಡುವದ ರಿಂದ ಅವರು ಸುಧಾರಿಸುವರೆಂಬವಕ್ಕೆ ಸಂಶಯುವಿಲ್ಲ.

ಸಾಲೆಯಲ್ಲಿ ನೀತಿಶಿಕ್ಷಣವನ್ನು ಕೊಡುವ ಸಾಧನಗಳು ಐದು ಇರುವವು. (೧) ಸಾಲೆಯಲ್ಲಿಯ ಶಿಸ್ತು (ವ್ಯವಸ್ಥೆ), (೨) ಶಿಕ್ಷಕನ ವರ್ತನ, (೩) ವ್ಯವಸ್ಥಿತ ಆಟಗಳು, (೪) ಧಾರ್ಮಿಕ ಶಿಕ್ಷಣ, (೫) ನೀತಿಪಾಠಗಳು.

(೧) ಹುಡುಗರು ಚಿಕ್ಕವರಿರುವಾಗ ಚಲೋ ಅಥವಾ ಕೆಟ್ಟ ಚಟಗಳನ್ನು ಸಂಪಾದಿಸುವದು ಕೆಲಮಟ್ಟಿಗೆ ಸಾಲೆಯ ವ್ಯವಸ್ಥೆಗೆ ಸಂಬಂಧಿಸಿದೆ. ಯಾವ ಶಾಲೆ ಯಲ್ಲಿ ದಕ್ಷರಾದ ಶಿಕ್ಷಕರಿರುವರೋ ಮತ್ತು ಸರಿಯಾದ ವ್ಯವಸ್ಥೆಯಿರುವದೋ ಅಂಥಲ್ಲಿ ಹುಡುಗರು ಹೊತ್ತುಹೊತ್ತಿಗೆ ಶಾಲೆಗೆ ಬಂದು, ತಮ್ಮ ಕೆಲಸವನ್ನು ಎಚ್ಚರದಿಂದ ಮಾಡುವರು ಮತ್ತು ಅಂಥ ಸಾಲೆಯ ವಿದ್ಯಾರ್ಥಿಗಳಿಗೆ ಅವಿಶ್ವಾಸ, ಸುಳ್ಳು, ದುಃಶಬ್ದ ಮೊದಲಾದವುಗಳು ಗೊತ್ತಿರುವದಿಲ್ಲ. ಅವ್ಯವಸ್ಥಿತ ಶಾಲೆಯಲ್ಲಿದ್ದ ವಿದ್ಯಾರ್ಥಿಗಳು ದುಶ್ಚಟಗಳಿಗೆ ಈಡಾಗಿ ತಮ್ಮ ಅಭ್ಯಾಸವನ್ನು ಹಾಳುಮಾಡಿಕೊಳ್ಳುವರು. ಸ್ವಚ್ಛ ತೆಯ ಕಡೆಗೂ ದುರ್ಲಕ್ಷ ಮಾಡುವರು. ಎರಡನೇಯವರ ಉತ್ತರಗಳನ್ನು ನೋಡಿ ಅದರಂತೆ ತಾವೂ ಹಚ್ಚುವರು. ಎರಡನೇಯವರನ್ನು ಕೇಳಿಕೊಂಡು ಉತ್ತರ ಕೊಡು ವರು. ಹೀಗಾಗಿ ಅವರಲ್ಲಿ ಪ್ರಾಮಾಣಿಕತನವು ಇಲ್ಲದಂತಾಗುವದು. ಇಂಥ ಶಾಲೆ ಗಳಲ್ಲಿ ಕಲಿತ ವಿದ್ಯಾರ್ಥಿಗಳು ಮುಂದಿನ ಆಯುಷ್ಯದಲ್ಲಿ ಇಂಥ ಕೆಟ್ಟ ಚಟಗಳ ಪರಿ ಣಾಮವನ್ನು ಹೊಂದಲೇಬೇಕಾಗುವದು. ಶಾಲೆಯಲ್ಲಿಯ ವ್ಯವಸ್ಥೆಯಿಂದ ಸ್ವಚ್ಛತೆ, ಉದ್ಯೋಗಪ್ರೀತಿ, ಸತ್ಯತೆ, ಆಜ್ಞಾಧಾರಕತ್ವ, ವಿನಯ ಮೊದಲಾದ ಗುಣಗಳು ಉಂಟಾ ದರೆ ವಿದ್ಯಾರ್ಥಿಗಳು ಸುಶೀಲರಾದ ನಾಗರಿಕರಾಗುವರು. ಹುಡುಗರು ಕೆಟ್ಟ ಕೆಲಸ ಗಳನ್ನು ಮಾಡಿದರೆ ಅವರಿಗೆ ಯೋಗ್ಯ ಶಾಸನವನ್ನು ಮಾಡದೆ ಬಿಡಬಾರದು. ತಪ್ಪಿಗೆ ಸರಿಯಾದ ಶಿಕ್ಷೆಯಾಗುವದೆಂಬ ತಿಳುವಳಿಕೆಯಿಂದ ಎಷ್ಟೋ ವಿದ್ಯಾರ್ಥಿಗಳು ಸುಧಾ ರಿಸುವರು. ಮತ್ತು ಆತ್ಮಸಂಯಮನ ಮಾಡಲಿಕ್ಕೆ ಕಲಿಯುವರು. ಆದ್ದರಿಂದ ಪ್ರತಿಯೊಬ್ಬ ಶಿಕ್ಷಕನು ಪಕ್ಷಪಾತರಹಿತನೂ ನ್ಯಾಯವಂತನೂ ದೃಢನಿಶ್ಚಯುವುಳ್ಳವನೂ ವ್ಯವಸ್ಥೆಯನ್ನು ಕಾಯ್ದುಕೊಳ್ಳುವವರಲ್ಲಿ ದಕ್ಷನೂ ಇರತಕ್ಕದ್ದು.

(೨) ಶಿಕ್ಷಕನ ಉಪದೇಶಕ್ಕಿಂತಲೂ ಅವನ ಆಚರಣೆಯು ಹುಡುಗರ ಮನ ಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನು ಉಂಟುಮಾಡುವದು. ಆದ್ದರಿಂದ ಶಿಕ್ಷಕನ

ವರ್ತನವು ಶುದ್ಧವಾದದ್ದೂ ಅನುಕರಣೀಯವಾದದ್ದೂ ಇರಬೇಕು. ಸತ್ಯವನ್ನು ನುಡಿಯಬೇಕು, ಉದ್ಯೋಗವನ್ನು ಮಾಡಬೇಕು, ಎಂದು ಉಪದೇಶ ಮಾಡುವ ಶಿಕ್ಷಕನು ತದ್ವಿಪರೀತವಾಗಿ ನಡೆದರೆ ಆ ಉಪದೇಶದ ಪರಿಣಾಮವು ಎಳ್ಳಷ್ಟಾದರೂ ಆಗದು. ಹುಡುಗರ ನಿರೀಕ್ಷಣವು ಬಹಳ ತೀಕ್ಷ್ಣವಿರುವದರಿಂದ ಅವರು ಶಿಕ್ಷಕನ ಗುಣದೋಷಗಳನ್ನು ಕಂಡುಹಿಡಿಯುವರು. ಯಾವನು ಈ ನೇಮುಗಳಿಗೆ ಸರಿಯಾಗಿ ನಡೆಯಲಿಚ್ಛಿಸುವದಿಲ್ಲವೋ ಅಂಥವನು ಶಿಕ್ಷಕನ ಕೆಲಸವನ್ನು ಮಾಡಬಾರದು.

(೩) ವ್ಯವಸ್ಥಿತವಾದ ಆಟವು ನೀತಿಶಿಕ್ಷಣದ ಒಂದು ಉತ್ತಮವಾದ ಸಾಧನ ವಾಗಿರುವದು. ಪ್ರಸಂಗಾವಧಾನ, ಒಕ್ಕಟ್ಟು, ಧೈರ್ಯ, ಆಜ್ಞಾಧಾರಕತ್ವ ಈ ಗುಣಗಳು ವ್ಯವಸ್ಥಿತವಾದ ಆಟಗಳಿಂದ ವಿದ್ಯಾರ್ಥಿಗಳಲ್ಲಿ ಸೇರುವವು. ವ್ಯವಸ್ಥಿತ ಆಟಗಳೆಂದರೆ ಫುಟಬಾಲ್, ಕ್ರಿಕೆಟ್, ಹಾಕಿ ಮುಂತಾದವುಗಳು. ನಮ್ಮಲ್ಲಿ ಆಡುವ ತಿಪ್ಪಿ, ಖೋ ಮೊದಲಾದ ಆಟಗಳನ್ನು ಹೊಸದಾಗಿ ಪ್ರಸಿದ್ಧಮಾಡಿದ ನಿಯಮ ಗಳಂತೆ ಗೊಂದಲವನ್ನೆಬ್ಬಿಸದೆ ಆಡಿದರೆ ಕೆಲಮಟ್ಟಿಗೆ ಇಷ್ಟಪರಿಣಾಮವಾಗ ಬಹುದು.

(೪) ದೇವರಮೇಲೆ ವಿಶ್ವಾಸವನ್ನಿಡುವದು, ಪುಣ್ಯದ ಕೆಲಸಗಳನ್ನು ಮಾಡು ವದು, ಪರಪೀಡೆಯಾಗದಂತೆ ವರ್ತಿಸುವದು ಈ ಪ್ರಕಾರದ ಸ್ವಭಾವವು ಚಿಕ್ಕ ಮಕ್ಕಳಲ್ಲಿ ಉಂಟಾಗುವಂತೆ ಶಿಕ್ಷಕರು ಪ್ರಯತ್ನಿಸತಕ್ಕದ್ದು. ಆದರೆ ವಿಶಿಷ್ಟಧರ್ಮ ಗಳ ಆಚಾರಗಳನ್ನು ಕಲಿಸುವದು ಯೋಗ್ಯವಾದದ್ದಲ್ಲ. ಬೇರೆಬೇರೆ ಧರ್ಮಗಳಲ್ಲಿ ಆಗಿಹೋದ ಸಾಧು-ಸಜ್ಜನರ ಚರಿತ್ರೆಗಳನ್ನು ಮನೋರಂಜನವಾಗುವಂತೆ ವರ್ಣಿ ಸುವದರಿಂದ ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಸುಪರಿಣಾಮವಾಗುವದು. ಎಷ್ಟೋ ಶಾಲೆಗಳಲ್ಲಿ ಶಾಲೆಯ ಕೆಲಸವು ಪ್ರಾರಂಭವಾಗುವ ಮೊದಲು ಪ್ರಾರ್ಥನೆಯನ್ನು ಮಾಡುವ ರೂಢಿಯುಂಟು. ಮಂಜುಳವಾದ ಧ್ವನಿಯಿಂದ ದೇವರ ಪ್ರಾರ್ಥನೆ ಮಾಡು ವದರಿಂದ ಬಾಲಕರ ಮನಸ್ಸು ಪ್ರಸನ್ನವಾಗುವದು; ಮತ್ತು ಪಾಠಗಳನ್ನು ಕಲಿ ಯಲಿಕ್ಕೆ ಅವರಲ್ಲಿ ಉತ್ಸಾಹವು ಹೆಚ್ಚಾಗುವದು. ದೇವರ ಮೇಲೆ ವಿಶ್ವಾಸವಿಟ್ಟು ಮನಃಪೂರ್ವಕವಾಗಿ ಕೆಲಸ ಮಾಡುವ ಚಟವು ಮೊದಲಿನಿಂದಲೇ ಶಾಲೆಯಲ್ಲಿ ಉಂಟಾಗಬೇಕು.

(೫) ಚಿಕ್ಕ ಹುಡುಗರಿಗೆ ಅಂದರೆ ೬ ರಿಂದ ೧೧ ವರ್ಷದವರೆಗೆ ಮನೋ ರಂಜಕವಾದ ಕಥೆಗಳನ್ನು ಹಾವಭಾವಗಳಿಂದ ನಾಟಕ ಮಾಡಿದಂತೆ ಹೇಳ ಬೇಕು. ಇಂಥ ಕಥೆಗಳು ಇಸಾಪನೀತಿ, ಪಂಚತಂತ್ರ ಮೊದಲಾದ ಪುಸ್ತಕ ಗಳಲ್ಲಿ ಇರುವವು. ಕಥೆಗಳು ಸಣ್ಣವಾಗಿದ್ದು ಕೆಲವೊಂದು ನೀತಿಯ ಮಾತನ್ನು ಸ್ಪಷ್ಟವಾಗಿ ಉಪದೇಶಿಸುವಂಥವಿರಬೇಕು. ಆದರೆ ಬರೇ ನೀತಿಯ ಬೋಧವನ್ನಷ್ಟೇ

ಮಾಡಬೇಕಲ್ಲದೆ ವಿಶೇಷವಾದ ವಿವೇಚನೆಯನ್ನು ಮಾಡಕೂಡದು. ಹಾಗೆ ಮಾಡುವದರಿಂದ ಬಾಲಕರಲ್ಲಿ ಉಪದೇಶವನ್ನು ಕೇಳುವದರ ವಿಷಯವಾಗಿ ಬೇಸರವುಂಟಾಗುವದು. ಹುಡುಗರು ದೊಡ್ಡವರಾದ ಮೇಲೆ ಅಂದರೆ ೧೨ ರಿಂದ ೧೭ ವರ್ಷಗಳ ವರೆಗೆ ಅವರ ಭಾವನೆಗಳು ಪ್ರಬಲವಾಗುತ್ತವೆ. ಈ ಅವಧಿಯಲ್ಲಿ ರಾಮಾಯಣ, ಮಹಾಭಾರತದೊಳಗಿನ ಕಥೆಗಳು ಉಪಯುಕ್ತವಾಗಿರುವವು. ಆ ಕಥೆಗಳನ್ನು ಕಥಾಸಂಗ್ರಹವೆಂಬ ಪುಸ್ತಕದಲ್ಲಿ ಸಂಗ್ರಹಿಸಿರುವದರಿಂದ ಅವುಗಳನ್ನು ವಿದ್ಯಾರ್ಥಿಗಳಿಗೆ ಓದಗೊಡಬೇಕು.

## (೪) ಶಾರೀರಿಕ ಶಿಕ್ಷಣ.

ನಮ್ಮ ಆಯುಷ್ಯವು ಸುಖಕರವಾಗಬೇಕಾದರೆ ಉತ್ತಮವಾದ ಶರೀರಸಂಪತ್ತು ಅವಶ್ಯವು. ನಮ್ಮ ಕರ್ತವ್ಯಗಳನ್ನು ಸರಿಯಾಗಿ ಜರುಗಿಸಲಿಕ್ಕೆ ಆರೋಗ್ಯವಿಲ್ಲದೆ ಸಾಗುವದಿಲ್ಲ. ಅಶಕ್ತನೂ ರೋಗಿಷ್ಟನೂ ಆದ ಮನುಷ್ಯನು ಕುಟುಂಬಕ್ಕಾಗಲಿ, ಸಮಾಜಕ್ಕಾಗಲಿ, ಏನೂ ಹಿತಮಾಡನು. ದೇವರು ಮನುಷ್ಯನ ಸುಖಕ್ಕಾಗಿ ಹುಟ್ಟಿಸಿದ ಅನೇಕ ಸುಖೋಪಭೋಗಗಳ ಉಪಯೋಗವನ್ನು ಮಾಡಿಕೊಳ್ಳಲಿಕ್ಕೆ ಶರೀರ ಸಂಪತ್ತು ಬೇಕು. ಸೃಷ್ಟಿಯಲ್ಲಿರುವ ಅನೇಕ ರಮಣೀಯ ವಸ್ತುಗಳ ನೋಟವನ್ನು ನೋಡುವದರಿಂದ ಎಲ್ಲರಿಗೂ ಆನಂದವಾಗುವದುಂಟು. ಆದರೆ ರೋಗಿಗಳಿಗೆ ಇವುಗಳಿಂದ ತಲೆಬೇಸರವು ಹೆಚ್ಚಾಗುವದು. ಆರೋಗ್ಯವಿಲ್ಲದವನಿಗೆ ಆತ್ಮಸಂಯಮನವನ್ನು ಪಾಲಿಸುವದು ಅಸಾಧ್ಯವು. ಐಶ್ವರ್ಯವಾಗಲಿ ಬುದ್ಧಿಯಾಗಲಿ ವಿಪುಲವಾಗಿದ್ದು ಆರೋಗ್ಯವಿಲ್ಲದಿದ್ದರೆ ಅವೆಲ್ಲವು ವ್ಯರ್ಥವಾಗುವವು. ಹುಡುಗರು ದೊಡ್ಡವರಾದಮೇಲೆ ಮಾಡತಕ್ಕ ಅನೇಕ ಕರ್ತವ್ಯಗಳನ್ನು ಮಾಡಲಿಕ್ಕೆ ಅವರಲ್ಲಿ ಯೋಗ್ಯತೆ ಉಂಟಾಗುವಂತೆ ಮಾಡುವದೇ ಶಿಕ್ಷಣದ ಉದ್ದೇಶವು. ಹುಡುಗರ ಶಾರೀರಿಕ ಶಿಕ್ಷಣದ ವಿಷಯದಲ್ಲಿ ಮುಂದಿನ ಸಂಗತಿಗಳ ಕಡೆಗೆ ಶಿಕ್ಷಕರು ಲಕ್ಷಗೊಡತಕ್ಕದ್ದು. ಅವು ಯಾವವೆಂದರೆ-(೧) ಶಾಲೆಯಲ್ಲಿಯ ಅಭ್ಯಾಸದಿಂದ ಮತ್ತು ವ್ಯವಸ್ಥೆಯಿಂದ ಹುಡುಗರ ಆರೋಗ್ಯವು ಕೆಡದಂತೆ ಎಚ್ಚರ ಪಡಬೇಕು. (೨) ಅವರ ಶರೀರವು ಸುದೃಢವಾಗಲಿಕ್ಕೆ ಆಟ, ಡ್ರಿಲ್ಲು, ತಾಲೀಮು ಮೊದಲಾದ ಉಪಾಯಗಳನ್ನು ಯೋಜಿಸಬೇಕು. (೩) ಬಾಲಕರ ಇಂದ್ರಿಯಗಳು ತೀಕ್ಷ್ಣವಾಗಲಿಕ್ಕೆ ಕಾಗದ ಕತ್ತರಿಸುವದು, ಮಣ್ಣಿನ ಆಕೃತಿಗಳನ್ನು ಮಾಡುವದು, ಹೊಲಿಗೆಯ ಕೆಲಸ ಮೊದಲಾದ ಕೈಗೆಲಸಗಳನ್ನು ಮಾಡಿಸಬೇಕು.

ಈ ಮೂರು ಮಾತುಗಳ ವಿಷಯಕ್ಕೆ ವಿಚಾರಿಸುವ.

೧. ಹುಡುಗರ ಕಣ್ಣಿಗೆ ತ್ರಾಸವಾಗದಂತೆ ಸಾಲೆಯಮನೆಯಲ್ಲಿ ಸಾಕಷ್ಟು ಬೆಳಕು ಇರಬೇಕು. ಮತ್ತು ಸ್ವಚ್ಛ ಹವೆಯ ಪೂರೈಕೆಯಾದರೂ ತಕ್ಕಷ್ಟು ಇರಬೇಕು. ಹುಡುಗರು ಕೂಡ್ರತಕ್ಕ ಬಾಕುಗಳು ಅವರ ಎತ್ತರ ಪ್ರಮಾಣಕ್ಕೆ ಅನುಸರಿಸಿ ಇರಬೇಕು. ಬೆನ್ನಿಗೆ ಆನಿಕೆಇಲ್ಲದ ಬಾಕುಗಳನ್ನು ಉಪಯೋಗಿಸಬಾರದು. ಪ್ರಾಥಮಿಕ ಶಾಲೆಗಳಲ್ಲಿ ಹುಡುಗರು ಪೂರ್ವದ ಪದ್ಧತಿಗನುಸರಿಸಿ ನೆಲದಮೇಲೆಯೇ ಕೂಡ್ರುವದು ತಕ್ಕದ್ದು. ಬೆಳಕು ಉತ್ತರದಿಕ್ಕಿನಿಂದ ಮತ್ತು ಹುಡುಗರ ಎಡಭಾಗದಿಂದ ಬರಬೇಕು. ಕರಿಹಲಿಗೆಯನ್ನು ವರ್ಗದಲ್ಲಿ ಎಲ್ಲರಿಗೂ ಕಾಣುವಂತೆ ಇಡಬೇಕು. ಮತ್ತು ಅದರ ಮೇಲೆ ಬರೆಯುತಕ್ಕ ಅಕ್ಷರಗಳು ದೊಡ್ಡವೂ ದುಂಡವಾದವೂ ಇರಬೇಕು. ಆರಂಭದ ಬಾಲಕರ ಪಾಠಗಳು ಅರ್ಧತಾಸಿಗಿಂತ ಹೆಚ್ಚು ಅವಧಿಯುಳ್ಳವು ಇರಬಾರದು. ಮತ್ತು ನಡುನಡುವೆ ವಿಶ್ರಾಂತಿಯು ದೊರೆಯಬೇಕು. ವೇಳಾಪತ್ರಿಕೆಯಲ್ಲಿ ಮಾನಸಿಕಶ್ರಮ ವನ್ನುಂಟುಮಾಡುವ ವಿಷಯುಗಳನ್ನು ಒಂದೇಸಮನೆ ಇಡಬಾರದು. ಚಿತ್ರಕಲೆ, ಹಾಡು, ಆಟ ಮೊದಲಾದ ವಿಷಯುಗಳನ್ನು ನಡುವೆ ಸೇರಿಸಬೇಕು. ಸಣ್ಣ ಹುಡುಗರಿಗೆ ಗೃಹಪಾಠಗಳನ್ನು ಕೊಡಬಾರದು. ಹುಡುಗರು ಬರೆಯುವಾಗ ಮತ್ತು ಓದುವಾಗ ಬಹಳ ಬಗ್ಗದಂತೆ ಎಚ್ಚರಪಡಬೇಕು. ಹಳ್ಳಿಪಳ್ಳಿಗಳಲ್ಲಿ ವಿಸ್ತೀರ್ಣವಾದ ಬೈಲು ಪ್ರದೇಶಗಳಿರುವದರಿಂದ ಅಲ್ಲಿ ಹುಡುಗರಿಗೆ ತಿರುಗಾಡಲಿಕ್ಕೂ ವ್ಯಾಯಾಮ ಮಾಡಲಿಕ್ಕೂ ಅನುಕೂಲವಿರುವದು. ಆದರೆ ದಟ್ಟ ವಸತಿಯುಳ್ಳ ಪಟ್ಟಣಗಳಲ್ಲಿ ಅಂಥ ಸ್ಥಳಗಳು ಇಲ್ಲದಿರುವದರಿಂದ ಬಾಲಕರ ವ್ಯಾಯಾಮಕ್ಕೆ ಅನುಕೂಲವಿರುವದಿಲ್ಲ. ಬೆಳಕಿಲ್ಲದ ಸಂಕುಚಿತವಾದ ಶಾಲೆಗಳಲ್ಲಿ ಪ್ರತಿದಿವಸ ಬಹಳಹೊತ್ತು ಕಳೆಯುವದರಿಂದ ಬಾಲಕರಿಗೆ ಕ್ಷಯರೋಗ ಉಂಟಾಗುವದೆಂದು ಕೇಳುತ್ತೇವೆ. ಈ ಅಪಾಯವನ್ನು ತಪ್ಪಿಸುವದಕ್ಕಾಗಿ ಸಾಲೆಯಸುತ್ತಲು ಆಡಲಿಕ್ಕೂ ತೋಟಮಾಡಲಿಕ್ಕೂ ಸಾಕಷ್ಟು ಬೈಲು ಸ್ಥಳವಿರಬೇಕು. ಗಂಡುಹುಡುಗರಂತೆ ಹೆಣ್ಣುಹುಡಿಗೆಯರಾದರೂ ಆಟಗಳನ್ನು ಆಡಬೇಕು.

೨. ಆಟವಾಡುವ ಪ್ರವೃತ್ತಿಯೂ ಅದರಮೇಲಿನ ಪ್ರೀತಿಯೂ ಬಾಲಕರ ಕಲ್ಯಾಣಕ್ಕಾಗಿಯೇ ಇರುವವು. ಆಟದಿಂದ ಬಾಲಕರ ಕೈಕಾಲುಗಳು ವ್ಯಾಯಾಮಹೊಂದಿ ಸುದೃಢವಾಗುತ್ತವೆ. ಮತ್ತು ಕಣ್ಣಿಗೆ ಪದಾರ್ಥಗಳ ಆಕಾರ, ಬಣ್ಣ, ಅಂತರ ಮೊದಲಾದವುಗಳ ಜ್ಞಾನವಾಗುತ್ತದೆ. ಬಾಲಕರು ತಮ್ಮಲ್ಲಿ ಸ್ವಾಭಾವಿಕವಾಗಿರತಕ್ಕ ಅನುಕರಣಶಕ್ತಿಯನ್ನು ಉಪಯೋಗಿಸಿ ಕೋಲಿಗೆ ಕುದುರೆಯೆಂದು ಹೆಸರಿಟ್ಟು ಅದರಮೇಲೆ ಕೂತು ತಿರುಗುವದೂ ಕಲ್ಲುಗಳ ರಾಶಿಯಿಂದ ಮನೆಯನ್ನು ಕಟ್ಟುವದೂ ಮುಂತಾದ ಅನೇ

ಕೃತಿಗಳನ್ನು ನೋಡಿದರೆ ಆಟಗಳಿಂದ ಬಾಲಕರ ಕಲ್ಪನಾಶಕ್ತಿಯು ಹ್ಯಾಗೆ ಜಾಗ್ರತವಾಗುವದೆಂಬದು ಗೊತ್ತಾಗುವದು. ಶರೀರವೃದ್ಧಿಗೆ ಶುದ್ಧವಾದ ಹವೆಯೂ ಸ್ವಚ್ಛವಾದ ನೀರೂ ಪೌಷ್ಟಿಕವಾದ ಆಹಾರವೂ ಹ್ಯಾಗೆ ಅವಶ್ಯವೋ ಹಾಗೆ ಆಟವಾದರೂ ಅವಶ್ಯವು. ಆಟಗಳು ಮೂರು ಪ್ರಕಾರದವಿರುವವು. (೧) ಬಾಲೋದ್ಯಾನದ ಆಟಗಳು (೨) ಮನೋರಂಜನದ ಸಲುವಾಗಿ ಆಡತಕ್ಕ ಆಟಗಳು. (೩) ನೈತಿಕ ಶಿಕ್ಷಣವನ್ನು ಕೊಡುವಂಥ ಮತ್ತು ವ್ಯಾಯಾಮವನ್ನುಂಟುಮಾಡುವಂಥ ಆಟಗಳು.

ಬಾಲಕರ ಆಟಗಳ ವಿಷಯವಾಗಿ ವಿಚಾರಮಾಡಿದರೆ ಅವರಲ್ಲಿ ಕಲ್ಪನೆ, ಅನುಕರಣ, ಚಪಲತೆ, ಪ್ರೀತಿ ಇವು ಇರುವವೆಂದು ಕಂಡುಬರುವದು. ಶಿಕ್ಷಕರು ಈ ಗುಣಗಳನ್ನು ಉಪಯೋಗಿಸಿಕೊಂಡು ಹುಡುಗರಿಗೆ ಹೊಸವಿಷಯಗಳನ್ನು ಆಟಗಳ ಮುಖಾಂತರವಾಗಿ ಕಲಿಸಬೇಕು. ತಾವು ಆಟದಲ್ಲಿದ್ದೇವೆಂಬ ಭಾವನೆಯನ್ನು ಹುಡುಗರಲ್ಲಿ ಹುಟ್ಟಿಸಬೇಕು. ಪ್ರೌಢವಿದ್ಯಾರ್ಥಿಗಳಂತೆ ಬಾಲಕರನ್ನು ಒಂದೇ ಸ್ಥಳದಲ್ಲಿ ಬಹಳ ಹೊತ್ತು ಕೂಡ್ರಿಸಿ ಹೊಸಪಾಠಗಳನ್ನು ಕೊಡಹತ್ತಿದರೆ ಅವರು ಬೇಸರಗೊಳ್ಳುವರು. ಅವರಲ್ಲಿದ್ದ ಕಲ್ಪನಾಶಕ್ತಿ ಮತ್ತು ಚಪಲತೆಗಳ ಪೋಷಣವಾಗುವದಿಲ್ಲ. ಹುಡುಗರು ಒದರಾಡಬೇಕು; ಕೈಯಿಂದ ಏನಾದರೂ ಮಾಡುತ್ತಿರಬೇಕು; ಅತ್ತಿತ್ತ ಓಡಾಡುತ್ತಿರಬೇಕು; ಎಂಬವು ಸೃಷ್ಟಿಯ ನಿಯಮಗಳು. ಈ ನಿಯಮಗಳನ್ನು ಅನುಲಕ್ಷಿಸಿ ಬೇರೆ ಬೇರೆ ಆಟಗಳನ್ನೂ, ಹಾಡುಗಳನ್ನೂ, ವ್ಯವಸಾಯಗಳನ್ನೂ ಏರ್ಪಡಿಸಬೇಕು.

ಎರಡು ಪಾಠಗಳು ಮುಗಿದಕೂಡಲೆ ಬಾಲಕರಿಗೆ ವಿಶ್ರಾಂತಿಯನ್ನು ಕೊಡಬೇಕು. ಆಗ ಅವರು ತಮ್ಮ ಮನಸ್ಸಿಗೆ ಬಂದಂತೆ ಆಡಬಹುದು. ಸ್ವಲ್ಪ ಹೊತ್ತಾದರೂ ಆಡುವದರಿಂದ ಮನಸ್ಸಿಗೆ ಉತ್ಸಾಹ ಉಂಟಾಗುತ್ತವೆ. ಮತ್ತು ಹೊಸ ಪಾಠ ಕಲಿಯಲಿಕ್ಕೆ ಔತ್ಸುಕ್ಯವುಂಟಾಗುವದು.

ಸಾಲೆಯಲ್ಲಿ ಕವಾಯಿತು ಕಲಿಸುವದರಿಂದ ವ್ಯವಸ್ಥೆಯನ್ನು ಕಾಯ್ದುಕೊಳ್ಳಲಿಕ್ಕೆ ಅನುಕೂಲವಾಗುವದಲ್ಲದೆ ಬಾಲಕರ ಎಲ್ಲ ಸ್ನಾಯುಗಳಿಗೂ ಚಲನವಲನೆಯುಂಟಾಗುವದು. ಓಡುವದು, ಹಾರುವದು, ಜಿಗಿಯುವದು ಇವುಗಳಿಂದ ಶ್ವಾಸೋಚ್ಛ್ವಾಸವೂ ರುಧಿರಾಭಿಸರಣವೂ ತೀವ್ರವಾಗಿ ನಡೆದು ರಕ್ತವು ಶುದ್ಧವಾಗುವದು

ಕವಾಯತಿನ ವಿಷಯದಲ್ಲಿ ಇನ್ನೊಂದು ನೆನಪಿಡತಕ್ಕ ಸಂಗತಿ ಏನಂದರೆ ಅಪ್ಪಣೆಗಳನ್ನು ತೀವ್ರವಾಗಿ ಕೊಟ್ಟು ಹುಡುಗರು ಶರೀರದ ಭಾಗಗಳನ್ನು ರಭಸದಿಂದ ತಿರವುವಂತೆ ಮಾಡಬೇಕು. ಬೇಸರದಿಂದ ನಿಂತು ನಿಂತು ಅಪ್ಪಣೆಗಳನ್ನು ಕೊಡುವದರಿಂದ ಹುಡುಗರ ಉತ್ಸಾಹವು ಕುಗ್ಗುವದಲ್ಲದೆ ಗೊಂದಲವಾಗುವದು.

ಹುಡುಗರು ದೊಡ್ಡವರಾದಹಾಗೆ ಬರೇ ಸಾದಾ ಕವಾಯಿತಿನಿಂದ ಸಾಕಷ್ಟು ವ್ಯಾಯಾಮವಾಗುವದಿಲ್ಲ. ಆದ್ದರಿಂದ ಡಬಲ್ ಮಾರ್ಚಿಂಗ, ಎತ್ತರ ಹಾರುವದು,

ಉದ್ದ ಹಾರುವದು ಹಗ್ಗವನ್ನು ಜಗ್ಗುವದು ಮೊದಲಾದವುಗಳನ್ನು ರೂಢಿಯಲ್ಲಿ ತರ ಬೇಕು ಇವಲ್ಲದೆ ಖೋ, ತಿಪ್ಪಿ ಮೊದಲಾದ ನಮ್ಮಲ್ಲಿ ಪ್ರಚಲಿತವಾದ ಆಟಗಳನ್ನು ಪ್ರತಿದಿನ ಸಂಜೆಗೆ ಆಡಿಸಬೇಕು. ಹಿರೇಮಣಿಯು ಅಪ್ಪಣೆಯನ್ನು ಎಲ್ಲರೂ ಪಾಲಿಸ ಬೇಕೆಂಬ ನಿರ್ಬಂಧವಿರಬೇಕು 'ಫುಟ್‌ಬಾಲ' ಆಟವು ಈಚೆಗೆ ಎಷ್ಟೋ. ಸಾಲೆಗ ಳಲ್ಲಿ ಪ್ರಾರಂಭವಾಗಿದೆ. ಇದಕ್ಕೆ ಸ್ವಲ್ಪ ವೆಚ್ಚವು ಹತ್ತಿದರೂ ಇದರಿಂದ ತಕ್ಕ ವ್ಯಾಯಾಮವಾಗುವದಲ್ಲದೆ ಅನೇಕ ಸದ್ಗುಣಗಳು ಉಂಟಾಗುವವೆಂದು ಹಿಂದೆ ಹೇಳಿ ದ್ದೇವೆ. ಆಟಗಳನ್ನು ಆಡುವದಕ್ಕಿಂತ ಮುಂಚಿತವಾಗಿ ಎಲ್ಲರೂ ಅದರ ನಿಯಮಗ ಳನ್ನು ಗೊತ್ತುಮಾಡಿಕೊಳ್ಳಬೇಕು. ಓದುವಾಗ ಏಕಾಗ್ರಚಿತ್ತವಿರುವಂತೆ ಎಲ್ಲರೂ ಒಮ್ಮನಸ್ಸಿನಿಂದ ಆಟವಾಡುವದರಿಂದ ಹೆಚ್ಚು ವ್ಯಾಯಾಮವಾಗುವದು ಆಡು ವಾಗ ಗದ್ದಲಮಾಡುವ ಪ್ರವೃತ್ತಿಯು ವ್ಯವಸ್ಥೆಗೂ, ಆಟಕ್ಕೂ ಹಾನಿಕರವು. ಕ್ರಿಕೆಟ್ ಹಾಕೀ ಮೊದಲಾದ ಆಟಗಳು ಹೆಚ್ಚು ವೆಚ್ಚದವಾದ ಕಾರಣ ಪ್ರಾಥಮಿಕ ಶಾಲೆಗಳಲ್ಲಿ ಈ ಆಟಗಳನ್ನು ಸೇರಿಸುವದು ಅಸಾಧ್ಯವೆಂದು ತೋರುತ್ತದೆ.

೩. ಆಟಗಳಿಂದ ಬಾಲಕರ ಕೈಕಾಲುಗಳು ಬಳಪಡುವಂತೆ ಕಾಗದ ಕತ್ತರಿಸು ವದು, ಮಣ್ಣಿನ ಆಕೃತಿಗಳನ್ನು ಮಾಡುವದು, ಹೊಲಿಗೆಯ ಕೆಲಸ ಇವುಗಳಿಂದ ಅವರ ಕಣ್ಣುಗಳಿಗೂ, ಬೆರಳುಗಳಿಗೂ ಸಂಸ್ಕಾರ ಉಂಟಾಗುವದಲ್ಲದೆ ಅವು ಚಪಲವಾಗು ವವು. ಮತ್ತು ಅವರಲ್ಲಿ ಸೌಂದರ್ಯದ ಕಲ್ಪನೆಯು ಅಂಕುರಿಸಹತ್ತುವದು.

---

## ೫. ಶಿಕ್ಷಣದ ಸಾಮಾನ್ಯ ತತ್ವಗಳು.

ಉತ್ತಮ ಶಿಕ್ಷಕನಾಗಬೇಕಾದರೆ ಶಿಕ್ಷಕನ ಹೋರೆಯು ಅತ್ಯುಚ್ಚವಾದದ್ದೂ ಪರಮ ಪವಿತ್ರವಾದದ್ದೂ ಎಂದು ತಿಳಿಯಬೇಕು. ಮತ್ತು ಶಿಕ್ಷಣವೆಂದರೆ ಬರೇ ಜ್ಞಾನವನ್ನುಂಟುಮಾಡುವದಲ್ಲ, ಬಾಲಕರ ಮಾನಸಿಕ ಶಕ್ತಿಗಳನ್ನು ವಿಕಾಸಪಡಿಸು ವದೆಂಬದನ್ನು ನೆನಪಿನಲ್ಲಿಡಬೇಕು, ಶಿಕ್ಷಕನು ತನ್ನ ಹೋರೆಯಲ್ಲಿ ದುರ್ಲಕ್ಷಮಾಡಿದರೆ ಅವನಿಂದ ಶಿಕ್ಷಣ ಹೊಂದುತ್ತಿದ್ದ ಚಿಕ್ಕಮಕ್ಕಳ ನೈತಿಕ, ಮಾನಸಿಕ, ಶಾರೀರಿಕ ಹಾನಿ ಯಾಗುತ್ತದೆಂಬದನ್ನು ಮರೆಯಕೂಡದು. ಆದ್ದರಿಂದ ಶಿಕ್ಷಕನು ತನ್ನ ಪವಿತ್ರವಾದ, ಉದ್ಯೋಗವನ್ನು ಮನಮುಟ್ಟಿಮಾಡಿ ಜನರ ಪ್ರೀತಿಯನ್ನೂ ದೇವರ ಒಲಿಮೆಯನ್ನೂ ಸಂಪಾದಿಸಬೇಕು.

ಕಲಿಸುವದೆಂದರೆ ಜಗತ್ತಿನೊಳಗಿನ ಮನುಷ್ಯನು ಹ್ಯಾಗೆ ಇರುತ್ತಾನೆ ? ಅವನು ಏನು ಮಾಡಬಲ್ಲನು ? ಅವನಿಗೆ ಸ್ವತಂತ್ರ ವಿಚಾರವದೆಯೋ ಹೇಗೆ ? ಎಂಬವುಗಳನ್ನು ತಿಳಿದುಕೊಳ್ಳುವದೇ ಹೊರತು, ಅವನಿಗೆ ಯಾವ ಸಂಗತಿಗಳು ಗೊತ್ತುಂಟು ? ಎರಡನೆ

ಯವರು ಬರೆದಿಟ್ಟ ವಿಚಾರಗಳನ್ನಷ್ಟೇ ಹೇಳಬಲ್ಲನೋ ಹೇಗೆ? ಎಂಬ ಸಂಗತಿಗಳಿಗೆ ಮಹತ್ವಕೊಡುವದಲ್ಲ. ಒಟ್ಟಿನಮೇಲೆ ಹುಡುಗರು ದೊಡ್ಡ ಮನಸ್ಸಿನವರಾಗುವಂತೆ ಪ್ರಯತ್ನಿಸತಕ್ಕದ್ದು. ದೊಡ್ಡ ಮನಸ್ಸೆಂದರೆ ಸುಸಂಸ್ಕೃತವಾದ ಮನಸ್ಸು; ಚುರುಕಾದ ಸ್ಮರಣಶಕ್ತಿಯಲ್ಲ. ಸ್ಮರಣಶಕ್ತಿಯನ್ನಷ್ಟೇ ಬೆಳಿಸುವದು ಶಿಕ್ಷಣದಿಂದುಂಟಾಗುವ ತಪ್ಪುಗಳಲ್ಲಿ ಒಂದಾಗಿದೆ. ಪ್ರಾಥಮಿಕ ಶಾಲೆಗಳನ್ನು ನೋಡಹೋದರೆ ಹುಡುಗರು ಮಗ್ಗಿಗಳನ್ನೂ ಕವಿತೆಗಳನ್ನೂ ಭೂಗೋಲದೊಳಗಿನ ಸಂಗತಿಗಳನ್ನೂ ಯಥೇಚ್ಛವಾಗಿ ಹೇಳುವರು. ಆದರೆ ಸ್ವತಂತ್ರವಾಗಿ ವಿಚಾರಮಾಡತಕ್ಕ ಹುಡುಗರನ್ನು ಕಾಣುವದು ಅಪರೂಪ, ಮತ್ತು ಓದಿದ ಸಂಗತಿಗಳ ತಿಳುವಳಿಕೆಯು ಅವರಿಗೆ ಚನ್ನಾಗಿ ಆಗಿರುವದಿಲ್ಲ. ಶಾಲೆಯಲ್ಲಿ ಹುಡುಗರು ಅನೇಕ ಸಂಗತಿಗಳನ್ನು ಕಲಿಯುವದೇ ಧ್ಯೇಯವಲ್ಲ. ಅದು ಒಂದು ಉಪಾಯವು. ಬಾಲಕರು ದೊಡ್ಡವರಾದಬಳಿಕ ಸಮಾಜದಲ್ಲಿ ಮುಂದಾಳುಗಳೂ ಸತ್ಯಶೋಧಕರೂ ಆಗಬೇಕೆಂಬದೇ ಅವರು ಸಾಲೆಗೆ ಬರುವ ಉದ್ದೇಶವು. ಈ ಉದ್ದೇಶವು ಈಡೇರುವಂತೆ ಹುಡುಗರ ಮನಸ್ಸು ಸುಸಂಸ್ಕೃತವಾಗಬೇಕಾದರೆ ಅವರನ್ನು ನಿರೀಕ್ಷಣಮಾಡಲಿಕ್ಕೂ ಸ್ವತಂತ್ರ ವಿಚಾರಮಾಡಲಿಕ್ಕೂ ಕಲಿತ ಸಂಗತಿಗಳನ್ನು ನೆನಪಿಡಲಿಕ್ಕೂ ಹಚ್ಚಬೇಕು ಅವರ ಅವಯವಗಳಿಗೆ ವ್ಯಾಯಾಮವನ್ನು ಕೊಟ್ಟು ಶರೀರವು ಸುದೃಢವಾಗುವಂತೆ ಮಾಡಬೇಕು. ಮತ್ತು ಅವರಲ್ಲಿ ಒಳ್ಳೇ ಚಟಗಳುಂಟಾಗಲಿಕ್ಕೆ ಯೋಗ್ಯವಾದ ಉದಾಹರಣೆಯನ್ನು ಹಾಕಿಕೊಟ್ಟು ಉಪದೇಶಮಾಡಿ ಅವರ ಶೀಲವು ಉತ್ತಮತರದ್ದಾಗುವಂತೆ ಯತ್ನಮಾಡತಕ್ಕದ್ದು.

ಪಠ್ಯಪುಸ್ತಕಗಳು ಉಪಯುಕ್ತವಾದವುಗಳಾದರೂ ಅವುಗಳನ್ನು ಸಾದ್ಯಂತವಾಗಿ ಪಾಠಮಾಡಿಸಬಾರದು. ಅದರಲ್ಲಿ ಹೇಳಿದ ಸಂಗತಿಗಳನ್ನು ಮನನಮಾಡಿಕೊಂಡು, ಆ ಸಂಗತಿಗಳ ಕಾರ್ಯಕಾರಣಭಾವ, ಸತ್ಯಾಸತ್ಯತೆಗಳನ್ನು ಹುಡುಗರು ಕಂಡುಹಿಡಿಯಬೇಕು. ಇತಿಹಾಸದಲ್ಲಿ ಎಷ್ಟು ಭಾಗವನ್ನು ಓದಿಸಿರುವಿರೆಂದು ಶಿಕ್ಷಕನನ್ನು ಕೇಳಿದರೆ ಕೂಡಲೆ ಆತನು ೭೦–೮೦ಪುಟ ಎಂದು ಉತ್ತರಕೊಡುವನು. ಇಂಥ ಶಿಕ್ಷಕನು ಹುಡುಗರ ಮಾನಸಿಕಶಕ್ತಿಯ ವಿಕಾಸವನ್ನು ಎಂದೂ ಮಾಡಲಾರನು.

ಶಿಕ್ಷಣದ ವಿಷಯದಲ್ಲಿ (೧) ನಿರೀಕ್ಷಣೆ. (೨) ವಿಚಾರ. (೩) ನಿರ್ಣಯ. (೪) ಸ್ಮರಣ ಈ ನಾಲ್ಕು ಸಂಗತಿಗಳ ಕಡೆಗೆ ಲಕ್ಷಕೊಡತಕ್ಕದ್ದು.

**ನಿರೀಕ್ಷಣೆ** —ಬಾಲಕರಿಗೆ ಎಲ್ಲ ಜ್ಞಾನವು ಇಂದ್ರಿಯಗಳ ಮುಖಾಂತರವಾಗಿ ದೊರೆಯುವದು. ನೋಡುವದರಿಂದ ಅವರಿಗೆ ವಿಶೇಷ ಜ್ಞಾನವಾಗುವದು. ಇದಲ್ಲದೆ ಕೇಳುವದರಿಂದ, ಮುಟ್ಟುವದರಿಂದ, ವಾಸನೆ ತೆಗೆದುಕೊಳ್ಳುವದರಿಂದ, ರುಚಿನೋಡುವದರಿಂದ ಅನೇಕ ಸಂಗತಿಗಳ ಜ್ಞಾನವಾಗುವದು. ಆದ್ದರಿಂದ ಈ ಇಂದ್ರಿಯಗ

ಳನ್ನು ಉಪಯೋಗವಮಾಡಲಿಕ್ಕೆ ಹಚ್ಚುವದೇ ಶಿಕ್ಷಕನ ಕೆಲಸವು. ವಿದ್ಯಾರ್ಥಿಗಳಿಗೆ ಶಿಕ್ಷಕನು "ವಸ್ತುವಿನಕಡೆಗೆ ನೋಡು ಮತ್ತು ಆದರ ವಿಷಯಕ್ಕೆ ನಿನಗೆ ಏನು ಗೊತ್ತಾಗುತ್ತದೆ ಹೇಳು" ಎಂದು ಯಾವಾಗಲೂ ಅನ್ನುತ್ತಿರಬೇಕು. ಕಣ್ಣಿನಿಂದ ನಿರೀಕ್ಷಿಸುವದಲ್ಲದೆ ಮೂಗು, ಕಿವಿ, ನಾಲಿಗೆ, ಬೆರಳುಗಳಿಂದ ಸಹ ನಿರೀಕ್ಷಿಸಲಿಕ್ಕೆ ಹಚ್ಚಬೇಕು. ಬಾಲಕರು ಅನೇಕಸಂಗತಿಗಳನ್ನು ಪ್ರತಿದಿವಸ ನೋಡುತ್ತಿರುವರು. ಆದರೆ ಇವುಗಳನ್ನು ಅವರು ನಿರೀಕ್ಷಿಸುತ್ತಿರುವದಿಲ್ಲ. ಅಂದರೆ ಅವುಗಳಬಗ್ಗೆ ವಿಶೇಷ ವಿಚಾರ ಮಾಡುತ್ತಿರುವದಿಲ್ಲ. ಬಾಲಕರಲ್ಲಿ ನಿರೀಕ್ಷಣಶಕ್ತಿಯುಂಟಾಗಬೇಕಾದರೆ ಹೊಸ ಹೊಸ ಸಂಗತಿಳನ್ನು ನೋಡಲಿಕ್ಕೂ ನೋಡಿದ ಸಂಗತಿಗಳಬಗ್ಗೆ ವಿಚಾರವಮಾಡಲಿಕ್ಕೂ ಅವರನ್ನು ಹಚ್ಚಬೇಕು. ಬಾಲಕರ ನಿರೀಕ್ಷಣಶಕ್ತಿಯು ಬೆಳೆಯಬೇಕಾದರೆ ಹಲವು ವಸ್ತುಗಳನ್ನು ಅವರ ಮುಂದಿಟ್ಟು ಕ್ಷಣಹೊತ್ತಿನಮೇಲೆ ಅವನ್ನು ತೆಗೆದಿಟ್ಟು ಅವರಿಗೆ ಆವಸ್ತುಗಳ ಆಕಾರ,ಬಣ್ಣ ಮೊದಲಾದವುಗಳನ್ನು ಸರಿಯಾಗಿ ವರ್ಣಿಸಲಿಕ್ಕೆ ಹೇಳಬೇಕು. ಉದಾ—ಮೇಜಿನ ಮೇಲೆ ಬೇರೆ ಬೇರೆ ಪ್ರಕಾರದ ಪುಸ್ತಕ, ಲೆಕ್ಕಣಿಕೆ, ಗುಂಡು, ಕಲ್ಲು, ಗೊಂಬೆ ಮುಂತಾದವುಗಳನ್ನು ತೆರೆದಿಟ್ಟು ಕ್ಷಣಹೊತ್ತಿನಮೇಲೆ ಅವುಗಳನ್ನು ಮುಚ್ಚಿ ಬಳಿಕ ಅವುಗಳಬಗ್ಗೆ ಸರಿಯಾಗಿ ವರ್ಣನೆಮಾಡಲಿಕ್ಕೆ ಹೇಳಬೇಕು. ಅಂದರೆ ವರ್ಗದ ಬಾಲಕರಲ್ಲಿ ನಿರೀಕ್ಷಣಶಕ್ತಿಯು ಯಾವ ಪ್ರಮಾಣದಲ್ಲಿ ಅದೆಂಬದು ಗೊತ್ತಾಗುವದು.

**ವಿಚಾರ**—ನಿರೀಕ್ಷಣದಿಂದುಂಟಾದ ಜ್ಞಾನದ ವಿಷಯಕ್ಕೆ ವಿಚಾರ ಮಾಡುವದು ಎರಡನೆಯ ಮಹತ್ವದ ಸಂಗತಿಯು. 'ಯಾಕೆ' ಎಂಬ ಪ್ರಶ್ನವನ್ನು ಶಿಕ್ಷಕನು ಬಾಲಕರಿಗೆ ಮೇಲಿಂದಮೇಲೆ ಮಾಡುತ್ತಿರಬೇಕು. ಉದಾ—ಆನೆಯ ಕಾಲುಗಳು ಬಹಳ ಗಡುತರವಾಗಿಯೂ ಚಿಗರೆಯ ಕಾಲುಗಳು ಬಹಳ ಸಣ್ಣಾಗಿಯೂ ಇರುವವು. ಯಾಕೆ ? ನೀರಿನಲ್ಲಿ ಕಲ್ಲುಮುಳುಗುತ್ತದೆ. ಬೆಂಡು ತೇಲುತ್ತದೆ. ಯಾಕೆ ? ನಮ್ಮ ಮುಂದಿನ ಹಲ್ಲು ಹರಿತಾಗಿಯೂ ದವಡೆಯ ಹಲ್ಲು ಚಪ್ಪಟೆಯಾಗಿಯೂ ಇರುವವು. ಯಾಕೆ ? ಹೀಗೆ ಪ್ರತಿಯೊಂದು ಸಂಗತಿಯ ಕಾರ್ಯಕಾರಣ ಭಾವವನ್ನು ವಿಚಾರ ಮಾಡುವದು ಬಾಲಕರಿಗೆ ಅವಶ್ಯವು. ಆದ್ದರಿಂದ ಐತಿಹಾಸಿಕ ಹೆಸರುಗಳನ್ನೂ ಇಸವಿಗಳನ್ನೂ ಭೂಗೋಲದೊಳಗಿನ ನದಿ, ಪರ್ವತ, ಭೂಶಿರ ಮೊದಲಾದ ಮಹತ್ವವಲ್ಲದ ಸಂಗತಿಗಳನ್ನೂ ಪಾಠಮಾಡಿಸುವದು ಸರಿಯಾದದ್ದಲ್ಲ. ನಿರುಪಯುಕ್ತವಾದ ಬಹಳ ಜ್ಞಾನಕ್ಕಿಂತ ಉಪಯುಕ್ತವಾದ ಒಂದೇ ವಿಚಾರವು ಬಾಲಕರ ಮನಸ್ಸಿನಲ್ಲಿ ಹುಟ್ಟಿದರೆ ಸಾಕು. ಬಾಲಕರ ಜ್ಞಾನ ಮತ್ತು ವಿಚಾರಗಳ ಪರೀಕ್ಷೆಯನ್ನು ಮಾಡುವವರೇ ಉತ್ತಮ ಪರೀಕ್ಷರು. ಶಿಕ್ಷಕನು ವಿದ್ಯಾರ್ಥಿಯ ಮಾರ್ಗದರ್ಶಕನು. ಆದ್ದರಿಂದ ಹುಡುಗರು ತಾವಾಗಿಯೇ ಶಿಕ್ಷಣವನ್ನು ಹೊಂದುವಂತೆ ಮಾಡುವದು ಶಿಕ್ಷಕನ ಕರ್ತವ್ಯವು.

ಅಂದರೆ ಬಾಲಕನು ತಾನಾಗಿಯೇ ವಸ್ತುಗಳನ್ನು ನಿರೀಕ್ಷಿಸಬೇಕು; ಮತ್ತು ಅವುಗಳ ಬಗ್ಗೆ ಸರಿಯಾಗಿ ವಿಚಾರಮಾಡಲಿಕ್ಕೆ ಶಕ್ತನಾಗಬೇಕು. ವಿದ್ಯಾರ್ಥಿಯು ಮಾಡಬೇಕಾದ ಕೆಲಸವನ್ನು ಶಿಕ್ಷಕನು ಮಾಡಬಾರದು; ಹಾಗು ಹೇಳಬಾರದು.

ಉದಾ — ಕಠಿಣ ಶಬ್ದಗಳ ಅರ್ಥ ಹುಡುಕುವದು, ಗಣಿತದ ತತ್ವವು ತಿಳಿದ ಮೇಲೆ ಉದಾಹರಣೆಗಳನ್ನು ಬಿಡಿಸುವದು. ಎಷ್ಟೋ ಶಿಕ್ಷಕರಿಗೆ ವಿದ್ಯಾರ್ಥಿಗಳ ಎಲ್ಲ ಕೆಲಸವನ್ನು ತಾವೇ ಮಾಡಿಬಿಡುವ ಚಟವು ಹತ್ತಿರುತ್ತದೆ. ಇದನ್ನು ಬಿಟ್ಟುಕೊಟ್ಟು ಬಾಲಕರೇ ಹೊಸ ಮಾತುಗಳನ್ನು ಕಲಿಯುವದಕ್ಕೆ ಅನುಕೂಲವಾದ ಸಂಗತಿಗಳನ್ನೂ ಪರಿಸ್ಥಿತಿಯನ್ನೂ ಉಂಟುಮಾಡಬೇಕು.

ನಿರ್ಣಯ — ಮೂರನೆಯ ಮಹತ್ವದ ಸಂಗತಿಯೆಂದರೆ ಬಾಲಕನು ತಾನೇ ನಿರ್ಣಯಮಾಡುವದು. ಅವನು ನಿರ್ಣಯ ಮಾಡುವಾಗ ತಪ್ಪಿದರೂ ಅಡ್ಡಿಯಿಲ್ಲ. ಅವನು ನಿರ್ಣಯಮಾಡಿದಾಗ್ಯೂ ಯಾವ ಯಾವ ಸಂಗತಿಗಳ ಅಪೂರ್ಣ ವಿಚಾರ ಮಾಡಿದ್ದರಿಂದ ಈಬಗೆಯ ತಪ್ಪು ಉಂಟಾಯಿತೆಂಬದನ್ನು ಅವನಿಗೆ ತೋರಿಸಿಕೊಡಬೇಕು ಲಕ್ಷಾವಧಿ ನಿರ್ಣಯಗಳನ್ನು ಶಿಕ್ಷಕರು ಹೇಳುವದಕ್ಕಿಂತ ಬಾಲಕರು ತಮ್ಮ ವಿಚಾರದಿಂದ ಮಾಡಿದ ಒಂದೇ ನಿರ್ಣಯವು ಹೆಚ್ಚು ಮಹತ್ವದಾದದ್ದು. ಸ್ವಂತವಿಚಾರದಿಂದ ನಿರ್ಣಯ ಮಾಡಲಿಕ್ಕೆ ಅಸಮರ್ಥನಾದವನು ಮೋಸಗಾರರ ಮೋಸಕ್ಕೆ ಈಡಾಗುವನು. ತಪ್ಪುನಿರ್ಣಯ ಮಾಡಿದ್ದಕ್ಕೆ ಹುಡುಗರಿಗೆಸಿಟ್ಟು ಮಾಡಬಾರದು. ಹುಡುಗರು ತಮ್ಮ ನಿರ್ಣಯವನ್ನು ಹೇಳಿದ ಮೇಲೆಈ ನಿರ್ಣಯವನ್ನು ಹ್ಯಾಗೆ ಮಾಡಿದಿರಿ ? ಅದಕ್ಕೆ ಕಾರಣಗಳಾವವು ? ಆಧಾರಗಳೇನು ? ಎಂಬ ಪ್ರಶ್ನಗಳನ್ನು ಮಾಡಬೇಕು. ಆದರೆ ಸರಿಯಾದ ಉತ್ತರವನ್ನು ತರ್ಕದಿಂದ ಹೇಳುವ ಚಟವು ಸರಿಯಾದದ್ದಲ್ಲ.

ಸ್ಮರಣೆ — ಬಾಲಕರು ನಿರೀಕ್ಷಣಮಾಡಿದ ಸಂಗತಿಗಳ ವಿಷಯಕ್ಕೆ ವಿಚಾರ ಮಾಡಿ ನಿರ್ಣಯವನ್ನು ಗೊತ್ತುಮಾಡಿದ ಬಳಿಕ ಅದನ್ನು ನೆನಪಿಡುವದು ಅವಶ್ಯವು. ಆದರೆ ಇದಕ್ಕೆ ತಕ್ಕಷ್ಟಕ್ಕಿಂತ ಹೆಚ್ಚು ಮಹತ್ವವನ್ನು ಕೊಡಲಾಗದು. ಹೀಗಿದ್ದರೂ ಎಷ್ಟೋ ಶಿಕ್ಷಕರು ಇದೇ ಮಹತ್ವವಾದದ್ದೆಂದು ತಿಳಿಯುವರು. ಸ್ಮರಣೆಯು ಉಪಯುಕ್ತವಾದ ಮಾನಸಿಕ ಶಕ್ತಿಯಾದರೂ ಉಳಿದ ಮಾನಸಿಕ ಶಕ್ತಿಗಳನ್ನು ದುರ್ಲಕ್ಷ ಮಾಡಿ ಇದೊಂದೇ ಶಕ್ತಿಯನ್ನು ಬಲುಪಡಿಸುವದು ಹಿತಕರವಲ್ಲ. ನಮ್ಮಲ್ಲಿ ಮೇಲಿಂದಮೇಲೆ ಪರೀಕ್ಷೆಗಳಾಗುವದರಿಂದ ಸ್ಮರಣೆಗೆ ಇಲ್ಲದ ( ಹೆಚ್ಚಿನ ) ಮಹತ್ವವುಂಟಾಗಿದೆ. ಶಿಕ್ಷಣ ದೃಷ್ಟಿಯಿಂದ ಎಲ್ಲ ಮಾನಸಿಕ ಶಕ್ತಿಗಳಿಗೆ ಸಂಸ್ಕಾರವುಂಟಾಗುವದು ಮಹತ್ವವಾದದ್ದು. ಆದ್ದರಿಂದ ಜರ್ಮನಿ ಮೊದಲಾದ ಸುಧಾರಿಸಿದ ರಾಷ್ಟ್ರಗಳಲ್ಲಿ ತೋಂಡೀ ಪರೀಕ್ಷೆಗೆ ಲೇಖೀ ಪರೀಕ್ಷೆಯಷ್ಟು ಅಥವಾ ಅದಕ್ಕೂ ಹೆಚ್ಚು ಮಹತ್ವವನ್ನು ಕೊಟ್ಟಿರು

ವರು. ವಿದ್ಯಾರ್ಥಿಯು ಯಾವ ಬಗೆಯಿಂದ ವಿಚಾರ ಮಾಡುವನು ? ಅವನ ಜ್ಞಾನದ ಪರಿಮಿತಿಯು ಎಷ್ಟು ? ಮತ್ತು ಅವನ ಅನುಮಾನದ ಪದ್ಧತಿಯು ಯಾವದು? ಎಂಬ ವಿಷಯುಗಳು ತೋಂಡೀ ಪರೀಕ್ಷೆಯಿಂದ ಚನ್ನಾಗಿ ತಿಳಿಯುವವು.

ಇನ್ನು ಕೆಲವು ಮಹತ್ವದ ಸಂಗತಿಗಳನ್ನು ಸಾದ್ಯಂತವಾಗಿ ಪಾಠ ಮಾಡಿಸುವದು ಇಷ್ಟವೆನಿಸುವದು.

ಉದಾ—ಉತ್ತಮ ಕವಿಗಳ ಕವಿತೆಗಳು, ಧರ್ಮಗ್ರಂಥಗಳೊಳಗಿನ ವಚನಗಳು, ಮಗ್ಗಿಗಳು, ಗಣಿತದ ತತ್ವಗಳು ಇತ್ಯಾದಿ ಆದರೆ ನಿರರ್ಥಕವಾದ ಸಂಗತಿಗಳನ್ನು ಪಾಠಮಾಡಿಸುವದು ಶಿಕ್ಷಣದ ದೃಷ್ಟಿಯಿಂದ ಘಾತುಕವು. ಭೂಮಧ್ಯ ಸಮುದ್ರದೊಳಗಿನ ಭೂಶಿರ, ಆಖಾತ, ಉಪಸಾಗರ ಮುಂತಾದವುಗಳನ್ನು ಪಾಠಮಾಡಿಸುವ ಪ್ರಯೋಜನವೇನು ? ಆದರೂ ಎಷ್ಟೋ ಶಿಕ್ಷಕರು ಇಂಥ ಅನೇಕ ಸಂಗತಿಗಳನ್ನು ಪಾಠಮಾಡಿಸುವದೇ ಸ್ತುತ್ಯವಾದದ್ದೆಂದು ತಿಳಿಯುತ್ತಾರೆ. ಇಂಥವರಿಗೆ ಶಿಕ್ಷಣದ ಪ್ರಾಥಮಿಕ ಕಲ್ಪನೆಯು ಇಲ್ಲವೆಂದು ಹೇಳಬಹುದು. ಶಿಕ್ಷಣವೆಂದರೆ ಹೊಸ ಹೊಸ ಸಂಗತಿಗಳನ್ನು ನಿರೀಕ್ಷಿಸಲಿಕ್ಕೂ ಅವರ ವಿಷಯಕ್ಕೆ ವಿಚಾರಮಾಡಲಿಕ್ಕೂ ಬಳಿಕ ಸರಿಯಾದ ಅನುಮಾನಗಳಿಂದ ಯೋಗ್ಯವಾದ ನಿರ್ಣಯ ಮಾಡಲಿಕ್ಕೂ ಅವೆಲ್ಲವುಗಳನ್ನು ನೆನಪಿಡಲಿಕ್ಕೂ ಅಗತ್ಯವಿದ್ದರೆ ಪಾಠಮಾಡಲಿಕ್ಕೂ ಹಚ್ಚುವದಾಗಿದೆ. ಮಾನಸಿಕ ಶಕ್ತಿಗಳನ್ನಷ್ಟೇ ಬಲಪಡಿಸಿದರೆ ಶಿಕ್ಷಕನ ಇತಿಕರ್ತವ್ಯವಾಯಿತೆನ್ನುವಂತೆ ಇಲ್ಲ. ವಿದ್ಯಾರ್ಥಿಯ ಶೀಲವೂ ಆರೋಗ್ಯವೂ ಬೆಳೆಯುವಂತೆ ಮಾಡುವದು ಸಹ ಅವನ ಕರ್ತವ್ಯವು. ಆರೋಗ್ಯ ಶೀಲಗಳಿಲ್ಲದ ಮನುಷ್ಯನಲ್ಲಿ ಸುಸಂಸ್ಕೃತವಾದ, ಬಹುಶ್ರುತವಾದ, ಕಾರ್ಯಕ್ಷಮವಾದ ಮನಸ್ಸಿದ್ದರೂ ಉಪಯೋಗವೇನು ? ನಮ್ಮ ಸಾಲೆಗಳಿಂದ ಬುದ್ಧಿವಂತರಾದ ತಕ್ಕರೂ, ಸುದೃಢ ಶರೀರವುಳ್ಳ ಮೂರ್ಖರೂ, ನಿರ್ಬಲರಾದ ಸಾಧುಗಳೂ ಹೊರಬೀಳಕೂಡದು. ಬುದ್ಧಿ-ಶೀಲ-ಶರೀರಗಳಿಂದ ಪೂರ್ಣರಾದ ಮತ್ತು ಸರ್ವಾಂಗಸುಂದರರಾದ ವಿದ್ಯಾರ್ಥಿಗಳನ್ನು ಸಿದ್ಧಪಡಿಸುವದೇ ನಮ್ಮ ಶಾಲೆಗಳ ಧ್ಯೇಯವು. ಲೇಖೀ ಪರೀಕ್ಷೆಯಿಂದ ವಿದ್ಯಾರ್ಥಿಗಳ ಶೀಲವೂ ಆರೋಗ್ಯವೂ ಪರೀಕ್ಷಿಸಲ್ಪಡುವದಿಲ್ಲ. ಆದ್ದರಿಂದ ಪರೀಕ್ಷಕರಿಗೂ ವಿದ್ಯಾರ್ಥಿಗಳಿಗೂ ಸಮಕ್ಷ ಭೆಟ್ಟಿಯಾಗುವಂತೆ ತೋಂಡೀ ಪರೀಕ್ಷೆಯ ಯೋಜನೆಯು ಹೆಚ್ಚೆಚ್ಚು ಆಗುವದು ಅವಶ್ಯವದೆ. ಹಾಗು ಅಂಥ ಪರೀಕ್ಷೆಯಲ್ಲಿ ಶೀಲಕ್ಕೂ ಶರೀರಕ್ಕೂ ಕೆಲವು ಗುಣಗಳನ್ನು ಕಾದಿಡುವದು ಹೆಚ್ಚು ಮಹತ್ವದ್ದಾಗಿದೆ.

ಮೇಲೆ ಹೇಳಿದ ಸಂಗತಿಗಳನ್ನು ಪುಷ್ಟೀಕರಿಸುವಂಥ ವಚನಗಳು ಪ್ರಸಿದ್ಧ ಶಿಕ್ಷಣ ಸುಧಾರಕರ ಲೇಖಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿದ್ದೇವೆ.

(೧) ಸಂಪೂರ್ಣ ಜೀವನಕ್ರಮಕ್ಕೆ ಸಿದ್ಧರಾಗುವಂತೆ ವಿದ್ಯಾರ್ಥಿಗಳನ್ನು ತಯಾರಿಸುವದೇ ಶಿಕ್ಷಣದ ಧ್ಯೇಯವು. ಸಂಪೂರ್ಣ ಜೀವನವೆಂದರೆ ಆರೋಗ್ಯವನ್ನು ಕಾಯ್ದುಕೊಂಡು ಶರೀರವನ್ನು ಸುದೃಢವಾಗಿಡುವದು, ಮನಸ್ಸನ್ನು ಸುಸಂಸ್ಕೃತವಾಗಿ ಮಾಡುವದು, ತಮ್ಮ ಕೆಲಸಬೊಗಸೆಗಳನ್ನು ಪರರನ್ನು ಅವಲಂಬಿಸದೆ ತಾವೇಮಾಡಿಕೊಳ್ಳಲಿಕ್ಕೆ ತಕ್ಕವರಾಗುವದು, ಯೋಗ್ಯರೀತಿಯಿಂದ ಕುಟುಂಬ ಸಂರಕ್ಷಣೆಮಾಡುವದು, ನಾಗರಿಕನ ಕರ್ತವ್ಯಗಳೂ ಹಕ್ಕುಗಳೂ ಯಾವವೆಂಬದನ್ನು ತಿಳಿದು ಅದರಂತೆ ನಡೆಯುವದು, ಸೃಷ್ಟಿಯೊಳಗಿನ ಸುಖಸಾಧನಗಳ ಉಪಯೋಗವನ್ನು ಯಾವರೀತಿಯಿಂದ ಮಾಡಿಕೊಳ್ಳಬೇಕೆಂಬದನ್ನು ತಿಳಿಯುವದು ಮುಂತಾದವುಗಳು. ಒಟ್ಟಿಗೆ ನಮ್ಮ ಹಾಗು ಪರರ ಹಿತಕ್ಕಾಗಿ ನಮ್ಮ ಎಲ್ಲ ಶಕ್ತಿಗಳ ಉಪಯೋಗವಾಗುವಂತೆ ಮಾಡುವದು.

(೨) ಸೃಷ್ಟಿಯಿಂದ ದೊರೆತ ಶಕ್ತಿಗಳು ಪೂರ್ಣತೆ ಹೊಂದುವಂತೆ ಸಹಾಯ ಮಾಡುವದೇ ಶಿಕ್ಷಣದ ಉದ್ದೇಶವು.

(೩) ಸುಶಿಕ್ಷಿತರಿಗುಂಟಾದ ಜ್ಞಾನದಿಂದ ಶಿಕ್ಷಣದ ಯಶಸ್ವಿತೆಯನ್ನು ಪರೀಕ್ಷಿಸದೆ ಅವರು ಹ್ಯಾಗಿದ್ದಾರೆ? ಏನುಮಾಡುತ್ತಾರೆ? ಎಂಬವುಗಳ ಮೇಲಿಂದ ಶಿಕ್ಷಣದ ಯೋಗ್ಯತೆಯನ್ನು ನಿರ್ಣಯಿಸಬೇಕು. ಯಾಕೆಂದರೆ ಸುಶಿಕ್ಷಿತರ ವರ್ತನವೂ ಕೃತಿಯೂ ಶಿಕ್ಷಣದ ಪರಿಣಾಮವನ್ನು ವ್ಯಕ್ತಪಡಿಸುತ್ತಿರುತ್ತವೆ.

(೪) ಚಿಕ್ಕಮಕ್ಕಳಿಗೆ ಕಲಿಸುವ ಶಿಕ್ಷಕನಿಗೆ ಶಿಕ್ಷಕನೆನ್ನದೆ ತೋಟಿಗನೆನ್ನಬೇಕು.

---

## (೬) ಬೋಧನದ ತತ್ವಗಳು.

ಶಿಕ್ಷಣವು ಒಂದು ಕಲೆಯಾಗಿರುವದು. ಈ ಕಲೆಯು ಅನುಭವದಿಂದ ಸಾಧ್ಯವಾಗತಕ್ಕದ್ದು. ಆದ್ದರಿಂದ ಕೆಳಗೆ ಹೇಳಿದ ಹತ್ತು ತತ್ವಗಳನ್ನು ಪ್ರತಿ ಒಬ್ಬ ಶಿಕ್ಷಕನು ಪಾಲಿಸತಕ್ಕದ್ದು.

(೧) ಇಂದ್ರಿಯಗಳ ಮುಖಾಂತರ ಕಲಿಸು:—ಇಂದ್ರಿಯಗಳಿಗೆ ಗೋಚರವಾಗದ ವಸ್ತುವು ಮನಸ್ಸಿನಲ್ಲಿ ಎಂದೂ ಬರಲಾರದೆಂಬ ಸಂಗತಿಯನ್ನು ಲಕ್ಷಕ್ಕೆ ತಂದರೆ ಮೊದಲನೇ ತತ್ವದ ಮಹತ್ವವು ಗೊತ್ತಾಗುವದು. ವಿಚಾರಣೀಯವಾದ ಸಾಹಿತ್ಯವು ಮನಸ್ಸಿನಲ್ಲಿ ಇರದಿದ್ದರೆ ಮನಸ್ಸು ವಿಚಾರದಲ್ಲಿ ತೊಡಗಲಾರದು. ಮನಸ್ಸಿಗೆ ಬಾಗಿಲುಗಳಂತಿರುವ ಪಂಚೇಂದ್ರಿಯಗಳನ್ನು ಸಾಧ್ಯವಿದ್ದ ಮಟ್ಟಿಗೆ ಉಪಯೋಗಿಸಿಕೊಂಡು ಕಲಿಸತಕ್ಕದ್ದು. ಶ್ರವಣೇಂದ್ರಿಯಗಳ ದ್ವಾರದಿಂದಲೇ ಎಲ್ಲ ಜ್ಞಾನವನ್ನು ಪೂರೈಸಿಕೊಡುವದು ಅಸಾಧ್ಯವು. ವಸ್ತುಪಾಠ ಕಲಿಸುವಾಗ ವಿದ್ಯಾರ್ಥಿಗಳು

ವಸ್ತುವನ್ನು ನೋಡಲಿ, ಅವಕ್ಕೆ ವಾಸನೆಯಿದ್ದರೆ ಮೂಸಿನೋಡಲಿ, ಕೈಯಲ್ಲಿ ತಕೊಂಡು ಅದರ ಬಗ್ಗೆ ಅನೇಕ ಸಂಗತಿಗಳನ್ನು ತಿಳಿದುಕೊಳ್ಳಲಿ, ವಿಷಕಾರಕವಿಲ್ಲದಿದ್ದರೆ ರುಚಿನೋಡಲಿ, ಒಟ್ಟಿಗೆ ಆದಷ್ಟು ಪ್ರಯತ್ನಮಾಡಿ ಎಲ್ಲ ಇಂದ್ರಿಯಗಳನ್ನು ಉಪಯೋಗಿಸಬೇಕು. ತೀರ ಕಡಿಮೆಯೆಂದರೆ ಎರಡು ಇಂದ್ರಿಯಗಳನ್ನಾದರೂ ಉಪಯೋಗಿಸ ತಕ್ಕದ್ದು.

**(೨) ಮೊದಲು ನಿರೀಕ್ಷಣೆ, ಬಳಿಕ ವಿಚಾರ, ಆ ಮೇಲೆ ಸ್ಮರಣೆ:—** ಮೊದಲನೇ ತತ್ವವು ಎರಡನೆಯದರ ದ್ಯೋತಕವಾಗಿರುವದು. ಇಂದ್ರಿಯಗಳು ನಿರೀಕ್ಷಣೆಯಲ್ಲಿ ತೊಡಗಿರುವದರಿಂದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ನಿರೀಕ್ಷಿಸಿದ ವಸ್ತುಗಳ ಬಗ್ಗೆ ವಿಚಾರವು ಉದಯವಾಗುವದು. ವಿಚಾರಕ್ಕೆ ಆಸ್ಪದಕೊಟ್ಟು ವಸ್ತುಗಳ ಜ್ಞಾನ ಮಾಡಿಕೊಂಡರೆ ವಿಚಾರಶಕ್ತಿಯು ಬಲಪಡುವದು. ಬಳಿಕ ಅನುಮಾನಗಳನ್ನು ಗೊತ್ತುಪಡಿಸಿ ನೆನಪಿನಲ್ಲಿ ಇಡಬೇಕು.

**(೩) ವಿದ್ಯಾರ್ಥಿಗಳಿಗೆ ಆದಷ್ಟು ಕಡಿಮೆ ಹೇಳು:—** ಯಾವದೊಂದು ಸಂಗತಿಯನ್ನು ಶಿಕ್ಷಕನು ಹೇಳಿ ಅದನ್ನು ವಿದ್ಯಾರ್ಥಿಗಳಿಂದ ಉಚ್ಚರಿಸಹಚ್ಚುವದು ಕೇವಲ ತಪ್ಪಾದದ್ದು. ಹೀಗೆ ಮಾಡುವದರಿಂದ ಬಾಲಕರ ನಿರೀಕ್ಷಣ ಶಕ್ತಿಗೂ ವಿಚಾರಕ್ಕೂ ವ್ಯಾಯಾಮವುಂಟಾಗುವದಿಲ್ಲ. ಇದು ಕೇವಲ ಸ್ಮರಣಶಕ್ತಿಯ ಶಿಕ್ಷಣವಾಗಿರುವದು. ಸ್ಪಷ್ಟವಾದ ಅನೇಕ ಸಂಗತಿಗಳನ್ನು ನೆನಪಿನಲ್ಲಿಟ್ಟುಕೊಳ್ಳುವದು ಮಹತ್ವದ್ದಾದರೂ, ಸರಿಯಾದ ನಿರೀಕ್ಷಣ ಮತ್ತು ವಿಚಾರ ಇವುಗಳಷ್ಟು ಮಹತ್ವವಾದದ್ದಲ್ಲ. ಶಿಕ್ಷಣವೆಂದರೆ ಅನೇಕ ಸಂಗತಿಗಳನ್ನು ಮನಸ್ಸಿನಲ್ಲಿ ತುಂಬುವದಲ್ಲ. ವಿಚಾರಕ್ಕೆ ಆಸ್ಪದಕೊಟ್ಟು ಅನೇಕ ಹೊಸವಿಚಾರಗಳನ್ನು ಹುಟ್ಟಿಸುವದಾಗಿದೆ. ವಿದ್ಯಾರ್ಥಿಗಳಿಗೆ ಎಷ್ಟು ಗೊತ್ತಿರುತ್ತದೆಂಬದನ್ನು ತಿಳಿದುಕೊಳ್ಳುವದು ಮಹತ್ವವಾದದ್ದಲ್ಲ. ಅವರಿಗೆ ಎಷ್ಟರಮಟ್ಟಿಗೆ ವಿಚಾರಮಾಡಲಿಕ್ಕೆ ಬರಬಹುದೆಂಬದನ್ನು ತಿಳಕೊಳ್ಳುವದು ಬಹಳ ಮಹತ್ವವಾದದ್ದು. ವಿದ್ಯಾರ್ಥಿಯು ಶಾಲೆಯಲ್ಲಿ ಕಲಿತ ಎಲ್ಲ ಸಂಗತಿಗಳನ್ನು ಸ್ಮರಣೆಯಲ್ಲಿ ಇಟ್ಟುಕೊಳ್ಳುವದರಿಂದ ಏನೂಲಾಭವಿಲ್ಲ. ಆದರೆ ಅವನಿಗೆ ವಿಚಾರಮಾಡುವ ರೂಢಿಯು ಉಂಟಾದರೆ ಅವನು ವ್ಯವಹಾರಚತುರನಾಗಿ ಉತ್ತಮನಾಗರಿಕನಾಗುವನು. ಆದ್ದರಿಂದ ವಿದ್ಯಾರ್ಥಿಗಳಿಗೆ ಆದಷ್ಟು ಕಡಿಮೆ ಹೇಳಿ ವಿಚಾರ ಮಾಡಹಚ್ಚಬೇಕು.

**(೪) ಕೃತಿಯಿಂದ ಕಲಿಯಲಿ—**ಹುಡುಗರು ಕೆಲಸಮಾಡಿ ಹೊಸ ಸಂಗತಿಯನ್ನು ಕಲಿಯಲಿ; ನಾವು ಯಾವದೊಂದು ಕೆಲಸವನ್ನು ಹ್ಯಾಗೆ ಮಾಡಬೇಕೆಂಬದನ್ನು ಹಿರಿಯರಿಂದ ಕೇಳಿ ಗೊತ್ತುಮಾಡಿಕೊಳ್ಳುತ್ತೇವೆ. ಇದರಿಂದ ಸ್ವಲ್ಪಮಟ್ಟಿಗೆ ತಿಳುವಳಿಕೆಯು ಹುಟ್ಟುತ್ತದೆಯೇ ಹೊರತು ಅದರ ವಿಷಯವಾಗಿ ಪೂರ್ಣಜ್ಞಾನವಾಗಲಾರದು.

ಆದರೆ ನಾವೇ ಕೆಲಸಗಳನ್ನು ಮಾಡುವದರಿಂದ ಅದನ್ನು ಮಾಡತಕ್ಕ ರೀತಿ, ಅದಕ್ಕೆ ಅವಶ್ಯವಾದ ಸಾಧನಗಳು, ಅದರಲ್ಲಿ ಉಂಟಾಗುವ ತೊಂದರೆಗಳು ಮುಂತಾದ ಅನೇಕ ಸಂಗತಿಗಳು ತಿಳಿಯುವವು. 'ಅನುಭವದಂಥ ಶಿಕ್ಷಕನಿಲ್ಲ' ಪ್ರತಿಯೊಂದು ಸಂಗತಿಯು ಅನುಭವದಿಂದ ನಮ್ಮ ವಿಚಾರಗಳು ನಿಶ್ಚಿತವಾಗುವವು. ಈಸುವ ವಿಷಯದಲ್ಲಿ ಪುಸ್ತಕಗಳನ್ನು ಓದಿದರೆ ಈಸುವ ಕಲೆಯು ಹ್ಯಾಗೆ ಬರಲಾರದೋ ಹಾಗೆ ಪುಸ್ತಕ ಓದುವದರಿಂದಾಗಲಿ, ಹಿರಿಯರ ಹೇಳಿಕೆಯಿಂದಾಗಲಿ, ವಿದ್ಯಾರ್ಥಿಗಳಿಗೆ ಹೊಸ ಸಂಗತಿಗಳ ನಿಶ್ಚಿತ ಜ್ಞಾನವಾಗಲಾರದು. ಆದ್ದರಿಂದ ಹುಡುಗರು ತಮ್ಮ ಕೈಯಿಂದಲೇ ಆಕೃತಿಗಳನ್ನು ಮಾಡಬೇಕು; ಮಾದರಿಗಳನ್ನು ರಚಿಸಬೇಕು; ಅಂದರೆ ಅವರ ಹಸ್ತ-ನೇತ್ರಗಳು ತೀಕ್ಷ್ಣವಾಗುವವಲ್ಲದೆ ಅವರಲ್ಲಿ ಹೊಸಹೊಸ ವಿಚಾರಗಳು ಹುಟ್ಟಹತ್ತುವವು.

**(೫) ಗೊತ್ತಿದ್ದ ಸಂಗತಿಯಿಂದ ಗೊತ್ತಿಲ್ಲದ ಸಂಗತಿಗೆ ಸಾಗು:—** ಮನೆಯನ್ನು ಕಟ್ಟುವಾಗ ಮಾಳಿಗೆಯನ್ನು ಹಾಕುವ ಮೊದಲು ಅಸ್ತಿವಾರವನ್ನು ಹಾಕುವಂತೆ ಗೊತ್ತಿದ್ದ ಸಂಗತಿಗಳಿಂದ ವಿಷಯವನ್ನು ಪ್ರಾರಂಭಿಸಿ ಗೊತ್ತಿಲ್ಲದ ಸಂಗತಿಗಳನ್ನು ಒಂದೊಂದನ್ನೇ ತಿಳಿದುಕೊಳ್ಳತಕ್ಕದ್ದು. ಸರಿಯಾದ ಪ್ರಶ್ನಗಳನ್ನು ಕೇಳಿ ನಿರೀಕ್ಷಣ, ವಿಚಾರ, ಅನುಮಾನಗಳಿಂದ ಹೊಸ ಜ್ಞಾನವನ್ನು ಮಾಡಿಕೊಡಬೇಕು. ಉದಾ— ಮುಂಬೈ ಇಲಾಖೆಯ ಭೂಗೋಲವನ್ನು ಪ್ರಾರಂಭಿಸುವಾಗ ಕರ್ನಾಟಕದ ನೆರೆಯಲ್ಲಿರುವ ಮಧ್ಯಭಾಗದ ಜಿಲ್ಲೆಗಳ ವಿಷಯಕ್ಕೆ ಕಲಿಸಿ, ಕ್ರಮದಿಂದ ಉಳಿದ ಭಾಗಗಳನು ಗೊತ್ತುಮಾಡಿಕೊಡಬೇಕು. ಒಮ್ಮೆಲೆ ಸಿಂಧಪ್ರಾಂತದ ಭೂಗೋಲವನ್ನು ಆರಂಭಿಸುವದು ತಪ್ಪು.

**(೬) ಉದಾಹರಣೆಗಳಿಂದ ತತ್ವವನ್ನು ಕಲಿಸು:—** ಇದಕ್ಕೆ ಏಕೀಕರಣ ಅಥವಾ ನಿಗಮನಪದ್ಧತಿಯೆನ್ನುವರು. ಕೆಲವು ಉದಾಹರಣೆಗಳನ್ನು ನೋಡಿ ಅವುಗಳಲ್ಲಿ ಕಂಡುಬರುವ ಸತ್ಯತೆಯನ್ನು ನಿರೀಕ್ಷಿಸಿ ಸಾಮ್ಯತೆಯಿಂದ ಅದೇ ವರ್ಗದ ಉಳಿದ ಸಂಗತಿಗಳಿಗೆ ಹಚ್ಚಿ ಸಾಮಾನ್ಯ ತತ್ವವನ್ನು ಕಂಡುಹಿಡಿಯುವದೇ ನಿಗಮನ ( Inductive ) ಅಥವಾ ಏಕೀಕರಣಪದ್ಧತಿಯು. ಈ ಪ್ರಕಾರದ ವಿಚಾರವು ಭೌತಿಕಶಾಸ್ತ್ರದಲ್ಲಿ ಅವಶ್ಯವಾದದ್ದು. ಶಿಕ್ಷಣದಲ್ಲಿಯಾದರೂ ಈ ಪದ್ಧತಿಯು ಹೆಚ್ಚು ಮಹತ್ವವಾದದ್ದು. ಯಾಕಂದರೆ, ಇದರಿಂದ ಬಾಲಕರಿಗೆ ಮಾನಸಿಕ ಶಿಕ್ಷಣವು ದೊರೆತು ನಿರೀಕ್ಷಣ ಉಂಟಾಗಿ ವಿಚಾರವು ಅಂಕುರಿಸುವದು. ಮತ್ತು ಶೋಧಕಬುದ್ಧಿಯು ಹುಟ್ಟಿ ಅವರು ಸ್ವತಂತ್ರವಾಗಿ ವಿಚಾರಮಾಡಲು ಸಮರ್ಥರಾಗುವರು. ಮತ್ತು ಅವರು ತಮ್ಮ ಮಾನಸಿಕ ಶಕ್ತಿಗಳನ್ನು ಉಪಯೋಗಿಸಿಕೊಂಡು ಸ್ವಾವಲಂಬಿಗಳಾಗಲು ಯತ್ನಿಸುವರು. ಆದರೆ ಎಷ್ಟೋ ಶಾಲೆಗಳಲ್ಲಿ ಈ ನಿಯಮಕ್ಕೆ ವಿರುದ್ಧವಾಗಿ ವ್ಯಾಕರ

ಣದ ವ್ಯಾಖ್ಯೆಗಳನ್ನು ಪಾಠಮಾಡಿಸುವರು. ಹೀಗೆ ಮಾಡದೆ ಅನೇಕ ಉದಾಹರಣೆಗಳನ್ನು ಹುಡುಗರ ಮುಂದಿಟ್ಟು ಅವರಿಂದಲೇ ವ್ಯಾಖ್ಯೆಗಳನ್ನು ಹೊರಡಿಸುವದು ಸರಿಯಾದದ್ದು. ಭೂಗೋಲ ಕಲಿಸುವಾಗ್ಗೆ ಮಣ್ಣಿನ ಮಾದರಿ, ನಕಾಶ, ಚಿತ್ರಗಳನ್ನು ಉಪಯೋಗಿಸಿ ಯಾವ ಯಾವ ಸಂಗತಿಗಳಿಂದ ಯಾವ ಯಾವ ಪರಿಣಾಮಗಳಾಗುತ್ತವೆಂಬದನ್ನು ಗೊತ್ತುಮಾಡಿಕೊಡಬೇಕು. ಅಂದರೆ ಕಾರಣಗಳ ಮೇಲಿಂದ ಕಾರ್ಯವನ್ನು ಗೊತ್ತುಮಾಡಿಕೊಡಬೇಕು. ಉದಾ—ಸುತ್ತಲಿನ ಭೂಮಿಗಿಂತ ನದಿಯ ಪಾತ್ರವು ಎತ್ತರವಾಗಿದ್ದರೆ ಒಡ್ಡು ಹಾಕಿ ಕಾಲುವೆಗಳನ್ನು ಒಯ್ಯಬಹುದೆಂಬ ಸಂಗತಿಯನ್ನು ಮಾಡೆಲ್ಲದ ಸಹಾಯದಿಂದ ಕಲಿಸಬೇಕು.

ಇದಕ್ಕೆ ವಿಪರೀತವಾಗಿ ಸಾಮಾನ್ಯ ಸತ್ಯತ್ವೆಯಿಂದ ಆರಂಭಿಸಿ ಸಾಮಾನ್ಯಧರ್ಮದಿಂದ ಸಂಬಂಧಿಸಿದ ಉದಾಹರಣೆಗಳಿಗೆ ಅದೇ ತತ್ವವನ್ನು ಹಚ್ಚುವದು ಪೃಥಕ್ಕರಣ ಅಥವಾ ವಿಗಮನ (Deductive) ಪದ್ಧತಿಯೆಂದು ಹೇಳಲ್ಪಡುವದು. ಫ್ರ್ಯಾಂಕ್ಲಿನ್‌ನೆಂಬ ಶಾಸ್ತ್ರಜ್ಞನು ನಿಗಮನಪದ್ಧತಿಯಿಂದ ಮಿಂಚು ಮತ್ತು ವಿದ್ಯುತ್ತು ಒಂದೇ ಎಂದು ನಿರ್ಣಯಿಸಿದನು. ಆದರೆ ವಿಗಮನ ಪದ್ಧತಿಯಿಂದ ಕಟ್ಟಡಗಳ ಸುರಕ್ಷಿತತೆಗೆ ವಿದ್ಯುದ್ವಾಹಕವು ಅವಶ್ಯವೆಂದು ಗೊತ್ತುಮಾಡಿದನು. ಸಾಮಾನ್ಯವಾಗಿ ಚಿಕ್ಕ ಮಕ್ಕಳ ಶಿಕ್ಷಣದಲ್ಲಿ ನಿಗಮನ [ ಏಕೀಕರಣ ] ಪದ್ಧತಿಯು ಹೆಚ್ಚು ಉಪಯುಕ್ತವಾದಾಗ್ಯೂ ಇತಿಹಾಸ, ಭೂಮಿತಿ ಮುಂತಾದ ಕೆಲವು ವಿಷಯಗಳಲ್ಲಿ ವಿಗಮನ [ ಪೃಥಕ್ಕರಣ ] ಪದ್ಧತಿಯನ್ನು ಅವಲಂಬಿಸಬೇಕಾಗುವದು. ಯಾಕಂದರೆ, ಇಲ್ಲಿ ಕಾರ್ಯಗಳ ಮೇಲಿಂದ ಕಾರಣಗಳನ್ನು ಹುಡುಕಬೇಕಾಗುವದು. ಉದಾ—ರಜಪೂತ, ಶೀಕ, ಮರಾಠಾ ಜನರು ಶೂರರಾಗಲಿಕ್ಕೆ ಆಯಾ ಪ್ರದೇಶಗಳಲ್ಲಿ ಯಾವಪ್ರಕಾರದ ಪರಿಸ್ಥಿತಿಯಿತ್ತೆಂಬದನ್ನು ಅನುಮಾನಿಸುವದು. ಅದರಂತೆಯೇ ಭೂಮಿತಿಯ ಪ್ರಮೇಯಗಳನ್ನು ಸಿದ್ಧ ಮಾಡುವದಕ್ಕೆ ಅವಶ್ಯವಿದ್ದ ಸಂಗತಿಗಳನ್ನು ಹುಡುಕುವದು. ಇತ್ಯಾದಿ.

೭. ವಸ್ತುವಾಚಕದಿಂದ ಭಾವವಾಚಕಕ್ಕೆ ಸಾಗು:— ನೀವು ಕಲಿಸತಕ್ಕ ಸಂಗತಿಗಳನ್ನು ಹುಡುಗರ ಎದುರಿಗಿಟ್ಟು ಅವುಗಳ ಗುಣಧರ್ಮಗಳನ್ನು ಅವರೇ ತಿಳಿದುಕೊಳ್ಳುವಂತೆ ಮಾಡಬೇಕು. ಗಣಿತದಲ್ಲಿ ಅಂಕಿಗಳನ್ನು ಕಲಿಸುವಾಗ ಗುಂಡು, ಮಣಿ, ಹತ್ತು, ನೂರು, ಸಾವಿರಗಳ ಗಂಟು ಅಥವಾ ಸರಗಳನ್ನು ತೋರಿಸಿ ಹುಡುಗರ ಕೈಯಲ್ಲಿ ಕೊಟ್ಟು ಸಂಖ್ಯೆಯನ್ನು ಗೊತ್ತುಮಾಡಿ ಕೊಡಬೇಕು. ಕೋಷ್ಟಕಗಳನ್ನು ಕಲಿಸವಾಗ ನಾಣ್ಯಗಳನ್ನು ತೋರಿಸಿ ಒಂದೇ ಧಾತುವಿನ ನಾಣ್ಯಗಳನ್ನು ತೂಕಮಾಡಿಸಿ ಅವು ಯಾವ ಪ್ರಮಾಣದಲ್ಲಿ ಅವೆ ಎಂಬದನ್ನು ಗೊತ್ತುಮಾಡಿಕೊಡಬೇಕು. ಅದರಂತೆ ಸಾಮಾನುಗಳ ತೂಕ, ಕಾಳುಗಳ ಅಳತೆ ಇವುಗಳನ್ನು ಸಹ ಪ್ರತ್ಯಕ್ಷ ಉಪಯೋಗಿಸ

ತಕ್ಕದ್ದು- ಇತಿಹಾಸಪಾಠವನ್ನು ಕಲಿಸುವದಕ್ಕಿಂತ ಮೊದಲು ಸಮೀಪದಲ್ಲಿದ್ದ ಕೋಟೆ, ಅರಮನೆ, ಗೋರಿ, ಕಾಳಗದಸ್ಥಳ ಇವುಗಳನ್ನು ನೋಡಿದ ತರುವಾಯ ಆ ಕಾಲದ ಇತಿಹಾಸವನ್ನು ವಿವರಿಸಬೇಕು; ಮತ್ತು ವಾಙ್ಮಯಕ್ಕೂ ಇತಿಹಾಸಕ್ಕೂ ಇದ್ದ ಸಂಬಂಧವು ಆ ಕಾಲದ ಕವಿಗಳ ಕವಿತೆಗಳನ್ನು ಓದಿ ತೋರಿಸಿದರೆ ಗೊತ್ತಾಗುವದು. ವಾಚನ ಪಾಠದಲ್ಲಿ ವರ್ಣಿಸಿದ ವಸ್ತುವನ್ನು ಅಥವಾ ಸಂಗತಿಗಳ ಚಿತ್ರವನ್ನು ಬಾಲಕರ ಮುಂದೆ ಇಡಬೇಕು. ಅಂದರೆ ಅದರೊಳಗಿನ ಮರ್ಮವು ಅವರ ಮನಸ್ಸಿನಲ್ಲಿ ಬಿಂಬಿಸುವದು.

**(೮) ಪಾಠಗಳನ್ನು ಚಿತ್ತಾಕರ್ಷಕ ಮತ್ತು ಮನೋರಂಜಕಮಾಡಬೇಕು:**— ಚಿಕ್ಕಮಕ್ಕಳಲ್ಲಿ ಅನೈಚ್ಛಿಕ ಅವಧಾನವು ಸಹಜವಾಗಿರುವದರಿಂದ ಬೇರೆಬೇರೆ ಪ್ರಕಾರದ ಉಪಕರಣಗಳನ್ನು ಸಂಗ್ರಹಮಾಡಿ ಪಾಠಗಳನ್ನು ಕೊಡಬೇಕು. ಇಲ್ಲದಿದ್ದರೆ ಹುಡುಗರು ಪಾಠಗಳ ಕಡೆಗೆ ಲಕ್ಷಗೊಡದೆ ಗೊಂದಲವನ್ನು ಎಬ್ಬಿಸುವರು. ಬಾಲಕರಿಗೆ ಹೊಸ ವಿಷಯಗಳನ್ನು ಗ್ರಹಿಸಲಿಕ್ಕೆ ಅವಧಾನದ ಏಕೀಕರಣವಾಗಲಿಕ್ಕೆಬೇಕು. ಆದ್ದರಿಂದ ಅವರ ಲಕ್ಷವು ಪೂರ್ಣವಾಗಿ ಉಳಿಯುವಂತೆ ಬಣ್ಣದ ಚಿತ್ರಗಳನ್ನೂ ಸುಂದರವಾದ ಒಡವೆಗಳನ್ನೂ ಕರೀಹಲಿಗೆಯನ್ನೂ ಉಪಯೋಗ ಮಾಡುತ್ತಿರಬೇಕು. ಕುತೂಹಲವನ್ನು ಹುಟ್ಟಿಸುವದಕ್ಕಾದರೂ ಇವೇ ಸಾಧನಗಳು ಉಪಯುಕ್ತವಾಗಿರುವವು. ಸಣ್ಣಸಣ್ಣ ಪ್ರಶ್ನೆಗಳನ್ನು ಮಾಡುವದರಿಂದಲೂ ಹುಡುಗರಲ್ಲಿ ಕುತೂಹಲವುಂಟಾಗುವದು.

**(೯) ಸ್ವಂತ ಶಿಕ್ಷಣಕ್ಕೆ ಉತ್ತೇಜನಕೊಡಬೇಕು:**— ಚಿಕ್ಕಮಕ್ಕಳಲ್ಲಿ ಅವರ ವಯೋಮಾನಕ್ಕನುಸರಿಸಿ ಜಾಗ್ರತೆಯು ನಡೆದಿರುತ್ತದೆ. ಆ ಜಾಗ್ರತೆಗೆ ಅನುಕೂಲವಾಗುವಂತೆ ಅನೇಕ ಸಂಗತಿಗಳನ್ನು ಗೊತ್ತುಮಾಡಿಕೊಳ್ಳಲಿಕ್ಕೆ ಅವರಿಗೆ ಪ್ರಸಂಗಗಳನ್ನು ತಂದುಕೊಡಬೇಕು, ಮತ್ತು ಆಸ್ಪದವನ್ನು ಕೊಡಬೇಕು. ಸ್ವಂತ ಪ್ರಯತ್ನದಿಂದ ಕಲಿತ ವಿಷಯಗಳು ಮನಸ್ಸಿನಲ್ಲಿ ದೃಢವಾಗಿ ನಿಲ್ಲುವವು. ಮತ್ತು ಅವರ ಶೋಧಕಬುದ್ಧಿಯು ಹೆಚ್ಚಾಗುವದು. ಇದೇ ಪದ್ಧತಿಯಿಂದ ರೋಮದ ಡಾಕ್ಟರ ಮಾಂಟೆಸೋರಿ ಎಂಬ ಶಿಕ್ಷಣಸುಧಾರಕಳು ಪ್ರಯತ್ನಿಸಹತ್ತಿದ್ದಾಳೆ.

**(೧೦) ಸೃಷ್ಟಿಕ್ರಮವನ್ನು ಅನುಸರಿಸಿ ಕಲಿಸಬೇಕು:**— ಸೃಷ್ಟಿಯಲ್ಲಿ ವನಸ್ಪತಿಗಳ ಬೆಳವಣಿಗೆಯನ್ನು ನಿರೀಕ್ಷಿಸಿ ಅವುಗಳಲ್ಲಿ ಯಾವ ಯಾವ ಕ್ರಮದಿಂದ ಅಭಿವೃದ್ಧಿಯಾಗುತ್ತ ಹೋಗುವದೆಂಬವನ್ನು ತಿಳಿದುಕೊಳ್ಳುವಂತೆ ಚಿಕ್ಕಮಕ್ಕಳ ಮಾನಸಿಕ ವಿಕಾಸದಕ್ರಮವನ್ನು ಅಭ್ಯಾಸಿಸಿ ಬೇರೆಬೇರೆ ಅವಸ್ಥೆಗಳಿಗೆ ಯೋಗ್ಯವಾದ ಶಿಕ್ಷಣವನ್ನು ಕೊಡಬೇಕು. ಅನೇಕ ಸಂಗತಿಗಳನ್ನು ಒಮ್ಮೆಲೇ ಪಾಠಮಾಡಿಸುವದರಿಂದ ಸ್ಮರಣಶಕ್ತಿಗೆ ವಿಶೇಷ ಶ್ರಮವಾಗಿ ಉಳಿದ ಶಕ್ತಿಗಳು ಕುಂದುವವು.

---

## (೭) ಶಿಕ್ಷಣದ ಸಾಧನಗಳು.

ಶಿಕ್ಷಣದ ಸಾಧನಗಳಲ್ಲಿ ಮುಖ್ಯವಾದವುಗಳೆಂದರೆ ದೃಷ್ಟಾಂತ ಮತ್ತು ಪ್ರಶ್ನೆಗಳು. ಇವಲ್ಲದೆ ಪರೀಕ್ಷೆ, ಟಿಪ್ಪಣೆ, ಕರೇಹಲಿಗೆ, ಗುಣಗಳು ಇವಾದರೂ ತಕ್ಕಷ್ಟು ಉಪಯುಕ್ತವಾದ ಸಾಧನೆಗಳಾಗಿವೆ.

ದೃಷ್ಟಾಂತಗಳು – ಯಾವದೊಂದು ಪಾಠವನ್ನು ಬೋಧಪ್ರದವಾಗಿ ಮಾಡಬೇಕಾದರೆ ತಕ್ಕ ದೃಷ್ಟಾಂತಗಳು ಅವಶ್ಯವಾಗಿರುತ್ತವೆ. ಪಾಠಗಳನ್ನು ಪ್ರತ್ಯಕ್ಷ ವಸ್ತುಗಳ ಸಹಾಯದಿಂದ ವಿವರಿಸುವದು ಬಹಳ ಮಹತ್ವದ್ದು. ವಸ್ತುಗಳು ಬಹಳದೊಡ್ಡವೂ ಬೆಲೆಯುಳ್ಳವುಗಳೂ ಇದ್ದು ವರ್ಗದಲ್ಲಿ ತಂದಿಡಲಿಕ್ಕೆ ಅಸಾಧ್ಯವಾದವುಗಳಿದ್ದರೆ ಶಿಕ್ಷಕನು ಹೊತ್ತುನೋಡಿ ಆ ವಸ್ತುಗಳಿದ್ದಲ್ಲಿ ಹುಡುಗರನ್ನು ಕರಕೊಂಡು ಹೋಗಿ ಆ ಪಾಠಗಳನ್ನು ಕಲಿಸತಕ್ಕದ್ದು. ಪ್ರತ್ಯಕ್ಷ ವಸ್ತುಗಳಿಲ್ಲದ ಪಕ್ಷದಲ್ಲಿ ಕರೇಹಲಿಗೆಯ ಮೇಲೆ ಚಿತ್ರತೆಗೆದು ಪಾಠಕಲಿಸತಕ್ಕದ್ದು. ಅನಿವಾರ್ಯ ಪಕ್ಷಕ್ಕೆ ಶಿಕ್ಷಕನು ಬಾಯಿಂದ ವಿವರಣೆಯನ್ನು ಮಾಡಬೇಕು. ಆಧುನಿಕ ಸಾಧನಗಳಲ್ಲಿ ಮ್ಯಾಜಿಕ್ಲ್ಯಾಂಟರ್ನ, ಸ್ಟೇರಿಯೊಸ್ಕೋಪ, ಸಿನೇಮಾ, ಸಚಿತ್ರಕಾರ್ಡು ಇವು ಶಿಕ್ಷಣದಲ್ಲಿ ಒಳ್ಳೇ ಉಪಯುಕ್ತವಾದವುಗಳು.

ಪ್ರಶ್ನೆಗಳು—ಪ್ರಶ್ನೆಗಳಲ್ಲಿ [ಅ] ಹೊಸ ವಿಷಯುವನ್ನು ಪ್ರಾರಂಭಿಸುವ ಮೊದಲು ವಿದ್ಯಾರ್ಥಿಗಳಿಗೆ ಆ ವಿಷಯುದ ಸಂಬಂಧದಿಂದ ಎಷ್ಟು ಜ್ಞಾನವಾಗಿರುತ್ತದೆಂಬದನ್ನು ತಿಳಿದುಕೊಳ್ಳಲಿಕ್ಕೆ ಮಾಡುವ ಪ್ರಶ್ನೆಗಳು. [ಬ] ವಿಷಯುವನ್ನು ಕಲಿಸುವಾಗ ಮಾಡುವ ಪ್ರಶ್ನೆಗಳು. [ಕ] ವಿಷಯುವನ್ನು ಮುಗಿಸಿದನಂತರ ವಿದ್ಯಾರ್ಥಿಗಳಿಗೆಯಥಾರ್ಥ ಜ್ಞಾನವಾಗಿದೆಯೋ ಇಲ್ಲವೋ ಎಂಬದನ್ನು ತಿಳಿದುಕೊಳ್ಳಲಿಕ್ಕೆ ಮಾಡುವ ಪ್ರಶ್ನೆಗಳು. ಎಂದು ಮೂರು ಪ್ರಕಾರಗಳುಂಟು.

### ಒಳ್ಳೇ ಪ್ರಶ್ನೆಗಳ ಲಕ್ಷಣಗಳು.

(೧) ಪ್ರಶ್ನೆಗಳು ವಿದ್ಯಾರ್ಥಿಗಳ ಯೋಗ್ಯತೆಗೆ ಸರಿಯಾದವೂ ಸ್ಪಷ್ಟವಾದವೂ ಇರಬೇಕು.

(೨) ಒಂದು ಪ್ರಶ್ನೆಕ್ಕೆ ಅನೇಕ ಉತ್ತರಗಳು ಹೊರಡಬಾರದು. ಮತ್ತು ಅದಕ್ಕೆ ಅನಿಶ್ಚಿತ ಅರ್ಥವಿರಬಾರದು.

(೩) ಹೇಳುವ ಉತ್ತರವು ಪ್ರಶ್ನೆಗಳಲ್ಲಿ ಗರ್ಭಿತವಿರಬಾರದು.

(೪) ಪ್ರಶ್ನೆಗಳು ಕೇವಲ ತರ್ಕಕ್ಕೆ ಆಸ್ಪದಕೊಡುವಂಥವಿರಬಾರದು.

(೫) ಪ್ರಶ್ನೆಗಳು ಹೌದು, ಅಲ್ಲ ಎಂಬ ಉತ್ತರಗಳು ಹೊರಡುವಂಥವು ಇರಬಾರದು.

(೬)ಪ್ರಶ್ನಗಳನ್ನು ಸಾಮೂಹಿಕವಾಗಿ ವರ್ಗಗಳಿಗೆ ಕೇಳಬೇಕು.
(೭) ಪ್ರಶ್ನಗಳು ಒಂದಕ್ಕೊಂದು ಸಂಬಧವುಳ್ಳವಿರಬೇಕು.

## ಒಳ್ಳೇ ಉತ್ತರಗಳ ಲಕ್ಷಣಗಳು

(೧) ಪ್ರಾಮಾಣಿಕತನದಿಂದ ವಿಚಾರಪೂರ್ವಕವಾಗಿ ಕೊಟ್ಟಂಥ ಉತ್ತರಗಳಿರಬೇಕು.

(೨) ಕೇವಲ ಕಲ್ಪನೆಯಿಂದ ಕೊಟ್ಟಂಥ ಉತ್ತರಗಳಿರಬಾರದು.

(೩) ಯಾವಾಗಲೂ ಪೂರ್ಣವಾಕ್ಯದಲ್ಲಿರಬೇಕು.

(೪) ಶಿಕ್ಷಕನಿಗೆ ಮೋಸಮಾಡುವ ಉದ್ದೇಶದಿಂದ ಕೊಟ್ಟಂಥವಿರಬಾರದು.

ಸಾಮೂಹಿಕ ಉತ್ತರಗಳನ್ನು ಸ್ವಿಕರಿಸುವಾಗ ಶಿಕ್ಷಕನು ಬಹಳ ಎಚ್ಚರಪಡಬೇಕು. ಯಾಕಂದರೆ-ಇದರಿಂದ ಮಂದಬುದ್ಧಿಯ ಹುಡುಗರಿಗೆ ಉತ್ತರ ಹೇಳುವ ಪ್ರಸಂಗ ತಪ್ಪಿಸಿದಂತಾಗುವದು. ಹೀಗೆ ಅವರು ಹಿಂದೆ ಉಳಿಯುತ್ತ ಹೊಸ ಪಾಠಗಳನ್ನು ಕಲಿಯುವದಿಲ್ಲ. ಇಂಥ ಹುಡುಗರನ್ನು ಸಮೀಪದಲ್ಲಿಯೇ ಕೂಡ್ರಿಸಿಕೊಂಡು ಅವರಿಂದ ಉತ್ತರಗಳನ್ನು ತಕ್ಕೊಳ್ಳಬೇಕು.

ಪರೀಕ್ಷೆ —ಪರೀಕ್ಷೆಯಲ್ಲಿ (೧) ಲೇಖೀಪರೀಕ್ಷೆ (೨) ತೋಂಡೀಪರೀಕ್ಷೆ ಎಂದು ಎರಡು ವಿಧವುಂಟು. ವಿದ್ಯಾರ್ಥಿಗಳು ಕಲಿತ ವಿಷಯಗಳನ್ನು ಸರಿಪಡಿಸಿ ಕ್ರಮದಿಂದ ಸ್ಥಿರಗೊಳಿಸಲಿಕ್ಕೆ ಪರೀಕ್ಷೆಯು ಒಂದು ಒಳ್ಳೇ ಸಾಧನವಾಗಿದೆ. ಪರೀಕ್ಷೆಯು ಕೇವಲ ಶಿಕ್ಷಣದ ಒಂದು ಸಾಧನವೆಂದು ತಿಳಿದು ಉಪಯೋಗಿಸಬೇಕಲ್ಲದೆ ಅದೇ ಅಂತಿಮ ಧ್ಯೇಯವೆಂದು ತಿಳಿಯಕೂಡದು. ಲೇಖೀಪರೀಕ್ಷೆಯಲ್ಲಿ ವಿದ್ಯಾರ್ಥಿಗಳ ಪೂರ್ಣಪರೀಕ್ಷೆಯಾಗಲಾರದು. ಯಾಕೆಂದರೆ, ಅದರಿಂದ ವಿದ್ಯಾರ್ಥಿಗಳ ನೈತಿಕ ಗುಣಗಳಾಗಲಿ, ಶಾರೀರಿಕಸಾಮರ್ಥ್ಯವಾಗಲಿ ಗೊತ್ತಾಗುವದಿಲ್ಲ. ಆದ್ದರಿಂದ ಬಾಯಪರೀಕ್ಷೆಯು ಲೇಖೀಪರೀಕ್ಷೆಯು ಪೂರಕವಾಗಿರುವದು. ಪರೀಕ್ಷಕರು ವಿದ್ಯಾರ್ಥಿಗಳನ್ನು ತಮ್ಮೆದುರಿಗೆ ಕರೆದುಕೊಂಡು ಅನೇಕ ಪ್ರಶ್ನಗಳಿಂದ ಅವರಿಗುಂಟಾದ ಜ್ಞಾನವನ್ನೂ ಅವರ ನಡೆನುಡಿಗಳನ್ನೂ ಗೊತ್ತುಮಾಡಿಕೊಳ್ಳಲಿಕ್ಕೆ ಆಸ್ಪದವಾಗುತ್ತದೆ. ಹೀಗಿದ್ದರೂ ಪ್ರಚಲಿತ ಶಿಕ್ಷಣ ಪದ್ಧತಿಯಲ್ಲಿ ಲೇಖಿಪರೀಕ್ಷೆಗೆ ವಿಶೇಷ ಮಹತ್ವವದೆ. ಇದು ಶಿಕ್ಷಣದದೃಷ್ಟಿಯಿಂದ ಸಮಾಧಾನಕಾರಕವಲ್ಲದ್ದರಿಂದ ಜರ್ಮನಿ ದೇಶದಲ್ಲಿ ತೋಂಡೀಪರೀಕ್ಷೆಗೆ ವಿಶೇಷ ಮಹತ್ವವನ್ನು ಕೊಟ್ಟಿರುವರು ಮತ್ತು ವಿದ್ಯಾರ್ಥಿಗಳು ವರ್ಷದಲ್ಲಿ ಮಾಡಿದ ಕೆಲಸಗಳನ್ನು ನೋಡಿ ಪರೀಕ್ಷಕರು ಒಪ್ಪಿಗೆಯನ್ನು ಕೊಟ್ಟಬಳಿಕ ಲೇಖೀಪರೀಕ್ಷೆಗೆ ಕೂಡಬೇಕಾಗುವದು. ವಿಶ್ವವಿದ್ಯಾಲಯಗಳ ಪದವಿಗಳನ್ನು ಹೊಂದಲಿಕ್ಕೆ ಸಹ ತೋಂಡೀಪರೀಕ್ಷೆಯು ಮುಖ್ಯ ಸಾಧನವಾಗಿದೆ. ಆದ್ದರಿಂದ ನಮ್ಮಲ್ಲಿಯ ಶಿಕ್ಷಕರು ಪರೀಕ್ಷೆಗೆ ಅಷ್ಟು

ಮಹತ್ವಕೊಡದೆ ಪ್ರತಿದಿವಸ ಕೆಲಸವನ್ನು ಮನಃಪೂರ್ವಕವಾಗಿಯೂ ಸರಿಯಾಗಿಯೂ ಸಾಗಿಸಬೇಕು. ಮತ್ತು ಪರೀಕ್ಷೆಯು ಜ್ಞಾನವನ್ನು ಸ್ಥಿರಪಡಿಸುವ ಒಂದು ಸಾಧನವೆಂದು ತಿಳಿದು ಅದರ ಉಪಯೋಗವನ್ನು ಮಾಡಿಕೊಳ್ಳಬೇಕು.

**ಟಿಪ್ಪಣಿಯು**— ಪರೀಕ್ಷೆಯಂತೆ ಟಿಪ್ಪಣಿಯಾದರೂ ಶಿಕ್ಷಣದ ಒಂದು ಸಾಧನವಾಗಿದೆ. ವಿದ್ಯಾರ್ಥಿಗಳು ಟಿಪ್ಪಣಿಗಳನ್ನು ಬರೆದುಕೊಳ್ಳುವಾಗ ಶುದ್ಧವಾಗಿಯೂ ಸರಿಯಾಗಿಯೂ ಬರೆದುಕೊಳ್ಳಬೇಕು. ಮತ್ತು ಶಿಕ್ಷಕನು ಸಾವಕಾಶವಾಗಿ ಹೇಳಿ ಅದನ್ನು ಬರೆಯಿಸಬೇಕು- ಅದರೊಳಗಿನ ಮುಖ್ಯ ಮಾತುಗಳನ್ನು ಕರೇಹಲಿಗೆಯ ಮೇಲೆ ಬರೆಯಬೇಕು. ವಿದ್ಯಾರ್ಥಿಗಳು ಬರೆದ ಮೇಲೆ ಶಿಕ್ಷಕನು ಎಲ್ಲ ಪುಸ್ತಕಗಳನ್ನು ತಿದ್ದಿ ಸರಿಪಡಿಸಬೇಕು. ಕಚ್ಚಾ, ಪಕ್ಕಾ ಎಂಬ ಎರಡು ಪುಸ್ತಕಗಳನ್ನು ಬರೆಯುವದನ್ನು ತಪ್ಪಿಸಬೇಕು. ಶಿಕ್ಷಕನು ಹೇಳುವಾಗಲೇ ಏನೂ ತಪ್ಪಿಲ್ಲದಂತೆ ವಿದ್ಯಾರ್ಥಿಗಳು ಬರೆದುಕೊಳ್ಳಬೇಕು.

**ಕರೇಹಲಿಗೆ**— ಪ್ರತಿಯೊಂದು ಪಾಠವನ್ನು ಸರಿಯಾಗಿ ಸಾಗಿಸಲಿಕ್ಕೆ ಕರೇಹಲಿಗೆಯ ಉಪಯೋಗವು ಅವಶ್ಯವಾದದ್ದು. ಹುಡುಗರು ಮಾಡಿದ ತಪ್ಪುಗಳನ್ನು ತಿದ್ದಿ ಬರೆಯಲಿಕ್ಕೆ, ಕಠಿಣಶಬ್ದಗಳ ಅರ್ಥವನ್ನು ತಿಳಿಸಲಿಕ್ಕೆ, ಭೂಗೋಲದ ಪಾಠದಲ್ಲಿ ನಕಾಶವನ್ನು ತೆಗೆದು ಕಲಿಸಿದ ಭಾಗವನ್ನು ತುಂಬಲಿಕ್ಕೆ, ಪಾಠಗಳ ಕೊನೆಗೆ ಸಾರಾಂಶವನ್ನು ಬರೆಯಲಿಕ್ಕೆ ಇದು ಉತ್ತಮ ಸಾಧನವು. ಕರೇಹಲಿಗೆಯನ್ನು ವರ್ಗದ ಎದುರಿನಲ್ಲಿ ಬಲಬದಿಗೆ ಅಂದರೆ ಶಿಕ್ಷಕನ ಎಡಭಾಗಕ್ಕೆ ಎಲ್ಲರಿಗೂ ಕಾಣಿಸುವಂತೆ ಇಡಬೇಕು. ಬರೆಯುವಾಗ ಅವಶ್ಯವಿದ್ದಲ್ಲಿ ಬೇರೆಬೇರೆ ಬಣ್ಣದ ಖಡುಗಳನ್ನು ಉಪಯೋಗಿಸುವದರಿಂದ ಎಲ್ಲ ಸಂಗತಿಗಳು ಒಡೆದು ಕಾಣುವವು- ಕಾಳಗದ ಇತಿಹಾಸವನ್ನು ಕಲಿಸುವಾಗ ವಿರುದ್ಧ ಬಣಗಳನ್ನು ತೋರಿಸಲಿಕ್ಕೆ ಬೇರೆಬೇರೆ ಬಣ್ಣದ ಖಡುಗಳನ್ನು ಉಪಯೋಗಿಸಿದರೆ ಬಾಲಕರ ಮನಸ್ಸಿನಲ್ಲಿ ಆ ಸಂಗತಿಗಳು ಬಹಳದಿವಸ ಉಳಿಯುವವು. ಕರೇಹಲಿಗೆಯ ಮೇಲೆ ಬರೆದ ಸಾರಾಂಶವನ್ನು ಹುಡುಗರು ತಮ್ಮ ಪುಸ್ತಕದಲ್ಲಿ ಬರೆದುಕೊಳ್ಳತಕ್ಕದ್ದು. ಬರೆಯುವಾಗ ಖಡುವಿನಿಂದ ಸಪ್ಪಳಮಾಡಬಾರದು. ಬಾಲಕರ ಕೂಡ ಮಾತಾಡುತ್ತ ಬರೆಯಬೇಕು. ಮೂಕರಂತೆ ಬರೆಯಹತ್ತಿದರೆ ವರ್ಗದಲ್ಲಿ ಗೊಂದಲವಾಗುವದು.

**ಗುಣಗಳು**—ಗುಣಗಳನ್ನು ಕೊಡುವ ಪದ್ಧತಿಯಾದರೂ ಶಿಕ್ಷಣದ ಕೆಲಸದಲ್ಲಿ ತಕ್ಕಮಟ್ಟಿಗೆ ಉಪಯುಕ್ತವದೆ. ಆದರೆ ಗುಣಗಳನ್ನು ನಿಷ್ಪಕ್ಷಪಾತದಿಂದಲೂ ಎಚ್ಚರದಿಂದಲೂ ಕೊಡಬೇಕು. ವಿದ್ಯಾರ್ಥಿಗಳಿಗೆ ಕೊಟ್ಟ ಗುಣಗಳನ್ನು ಶಿಕ್ಷಕನು ಕ್ಯಾಟಲಾಕಿನಲ್ಲಿ ತುಂಬಿ ವಾರಕ್ಕೊಮ್ಮೆ ಅಥವಾ ತಿಂಗಳಿಗೊಮ್ಮೆ ಕೂಡಿಸಿ ಹೊಸ ನಂಬ

ರುಗಳನ್ನು ಕೊಡಬೇಕು. ಈ ಕೆಲಸವನ್ನು ವಿದ್ಯಾರ್ಥಿಗಳಿಗೆ ಒಪ್ಪಿಸಿದರೆ ಅವರು ಅಪ್ರಾಮಾಣಿಕತನದಿಂದ ನಡೆಯುವ ಸಂಭವವದೆ. ಇಂಥ ಅವ್ಯವಸ್ಥೆಗೆ ಆಸ್ಪದಕೊಡದಂತೆ ಶಿಕ್ಷಕನು ಈ ಸಾಧನವನ್ನು ಯೋಗ್ಯರೀತಿಯಿಂದ ಉಪಯೋಗಿಸಿಕೊಂಡರೆ ವಿದ್ಯಾರ್ಥಿಗಳು ಪಾಠಗಳನ್ನು ಹೆಚ್ಚು ಲಕ್ಷ್ಯಪೂರ್ವಕವಾಗಿಯೂ ಈರ್ಷೆಯಿಂದಲೂ ಕಲಿಯುವರು. ಕೆಲವು ಶಾಲೆಗಳಲ್ಲಿ ಚನ್ನಾಗಿ ಉತ್ತರಕೊಟ್ಟ ಹುಡುಗರನ್ನು ಕೂಡಲೇ ಮೇಲಿನ ನಂಬರುಗಳಿಗೆ ಕಳಿಸುವರು. ಇದರಿಂದ ವಿದ್ಯಾರ್ಥಿಗಳಲ್ಲಿ ಒಂದು ಪ್ರಕಾರದ ಅಸೂಯೆಯು ಹುಟ್ಟುವುದು. ಆದ್ದರಿಂದ ವಾರಕ್ಕೊಮ್ಮೆ ಅವರವರು ದೊರಕಿಸಿದ ಗುಣಗಳಂತೆ ನಂಬರುಗಳನ್ನು ಹಚ್ಚುವದು ಯೋಗ್ಯವು.

---

## ೮ ವ್ಯವಸ್ಥೆಯು.

ವ್ಯವಸ್ಥೆಯು ಶಿಕ್ಷಣದ ಒಂದು ಭಾಗವಾಗಿದೆ. ಶಿಕ್ಷಕನು ಎಷ್ಟು ವಿದ್ವಾಂಸನೂ ಜಾಣನೂ ಇದ್ದರೂ ಅವನಲ್ಲಿ ಆಳಿಕೆಯ ಸಾಮರ್ಥ್ಯವು ಇರದಿದ್ದರೆ ಅವನು ಉತ್ತಮ ಶಿಕ್ಷಕನಾಗಲಾರನು. ಯಾವ ಶಾಲೆಯಲ್ಲಿ ವ್ಯವಸ್ಥೆಯು ಸರಿಯಾಗಿ ಇರುವದೋ ಅಂಥಲ್ಲಿ ಮಂದಬುದ್ಧಿಯ ಹುಡುಗರು ಸಹ ವಿಷಯದಲ್ಲಿ ಮುಂದರಿಯುವರು. ವ್ಯವಸ್ಥೆಯು ಶಿಕ್ಷಕನ ಶೀಲ, ಆಳಿಕೆಯ ಸಾಮರ್ಥ್ಯ, ಪದ್ಧತಿ ಇವುಗಳನ್ನು ಅವಲಂಬಿಸಿದೆ. ವ್ಯವಸ್ಥೆಯಿದ್ದ ಶಾಲೆಯಲ್ಲಿ ಬಾಲಕರು, ಕೊಟ್ಟವೇಳೆಯಲ್ಲಿ ಹೆಚ್ಚು ವಿಷಯವನ್ನು ಸುಲಭವಾಗಿ ಕಲಿಯುವರು. ತಾಯಿ-ತಂದೆಗಳು ಬಾಲಕರನ್ನು ಶಾಲೆಗೆ ಓದು-ಬರಹ ಕಲಿಯಲಿಕ್ಕೆ ಮಾತ್ರ ಕಳಿಸುತ್ತಿರುವದಿಲ್ಲ. ಹುಡುಗರು ದೊಡ್ಡವರಾದಮೇಲೆ ಸಮಾಜದಲ್ಲಿ ಸರಿಯಾಗಿ ನಡೆಯುವಂತೆ ಅವರಲ್ಲಿ ವಿಧೇಯತ್ವ, ಸಹಾನುಭೂತಿ, ಒಕ್ಕಟ್ಟು ಮೊದಲಾದ ಗುಣಗಳು ಹುಟ್ಟಬೇಕೆಂದು ಕಳಿಸುತ್ತಿರುತ್ತಾರೆ. ಬಾಲಕರು ತಮ್ಮ ಮನಸಿನ ಒಲವುಗಳನ್ನು ಬದಿಗಿಟ್ಟು ಶಾಲೆಯ ನೇಮಗಳಿಗೆ ಒಳಗಾಗಿ ಪ್ರತಿದಿವಸ ನಡೆಯುವದರಿಂದ ಅವರಲ್ಲಿ ನಿಯಮಿತತನ, ಅಚ್ಚುಕಟ್ಟುತನ, ವಿಧೇಯತ್ವ ಮುಂತಾದವುಗಳು ಉಂಟಾಗುವವು. ಇವೆಲ್ಲ ಗುಣಗಳಿಗೆ ವ್ಯವಸ್ಥೆ ಅಥವಾ ಶಿಸ್ತು ಅನ್ನುವರು. ವ್ಯವಸ್ಥೆಯನ್ನು ಕಾಯ್ದುಕೊಳ್ಳಬೇಕೆಂದು ಬಯಸುವ ಶಿಕ್ಷಕನು ಬಾಲಕರಕೂಡ ಪ್ರೀತಿಯಿಂದಲೂ ಸಹಾನುಭೂತಿಯಿಂದಲೂ ನಡೆಯಬೇಕು. ನಿರರ್ಥಕವಾಗಿ ಸಿಟ್ಟಿಗೇಳದೆ ಸೌಮ್ಯತನದಿಂದ ವರ್ತಿಸಬೇಕು. ಈ ಗುಣಗಳು ಜನ್ಮಸಿದ್ಧವಾದವುಗಳಾದರೂ ರೂಢಿಯಿಂದ ತಂದುಕೊಳ್ಳಬಹುದು. ಲೋಹಚುಂಬಕದಲ್ಲಿ ಕಬ್ಬಿಣವನ್ನು ಎಳಕೊಳ್ಳುವ ಗುಣವಿದ್ದಂತೆ ಬಾಲಕರ ಮನಸ್ಸನ್ನು ತಮ್ಮ ಕಡೆಗೆ ಆಕರ್ಷಿಸಿಕೊಳ್ಳುವ ಶಕ್ತಿಯು ಶಿಕ್ಷಕರಲ್ಲಿ ಇರತಕ್ಕದ್ದು.

ವ್ಯವಸ್ಥೆಯನ್ನು ಕಾಯ್ದುಕೊಳ್ಳಲಿಕ್ಕೆ (೧) ಶಿಕ್ಷಕನಲ್ಲಿರತಕ್ಕ ಗುಣಗಳ ಪ್ರಭಾವ (೨) ಇನಾಮು (೩) ಶಿಕ್ಷೆಯ ಅಂಜಿಕೆ ಇವು ಮುಖ್ಯ ಸಾಧನಗಳು. ಇವುಗಳಲ್ಲಿ ಶಿಕ್ಷಣದ ದೃಷ್ಟಿಯಿಂದ ಮೊದಲನೇ ಸಾಧನವು ಇಷ್ಟವಾದದ್ದು. ಉಳಿದ ಸಾಧನಗಳ ಉಪಯೋಗವನ್ನು ಪ್ರಸಂಗಾನುಸಾರವಾಗಿ ಮಾಡಬಹುದು.

(೧) ವ್ಯವಸ್ಥೆಗೆ ಅನುಕೂಲವಾಗುವಂತೆ ಶಿಕ್ಷಕನು ಸ್ಪಷ್ಟವಾದ ಮತ್ತು ಶಾಶ್ವತವಾದ ನಿಯಮಗಳನ್ನು ಗೊತ್ತುಮಾಡಿ ಎಲ್ಲ ಬಾಲಕರಿಗೆ ತಿಳಿಸಬೇಕು; ಹಾಗು ಅವುಗಳನ್ನು ಬರೆದು ಎಲ್ಲರಿಗೂ ಕಾಣುವಂತೆ ಸಾಲೆಯಲ್ಲಿ ತೂಗಹಾಕಬೇಕು. ಈ ನಿಯಮಗಳನ್ನು ಬಾಲಕರು ಸರಿಯಾಗಿ ಪಾಲಿಸುವರೋ ಇಲ್ಲವೋ ಎಂಬದನ್ನು ನೋಡುತ್ತಿರಬೇಕು. ಮತ್ತು ಅವುಗಳನ್ನು ನಿಶ್ಚಯದಿಂದ ಪಾಲಿಸಹಚ್ಚಬೇಕು. ಹುಡುಗರು ಗುರುಗಳ ಅಪ್ಪಣೆಯನ್ನು ಮನ್ನಿಸುವದಕ್ಕೆ ಸ್ವಾಭಾವಿಕವಾಗಿ ಉತ್ಸುಕರಿರುವರು. ಬೆದರಿಕೆಯಿಂದ ಗುರುಗಳಲ್ಲಿದ್ದ ಪ್ರೀತಿಯೂ ನಂಬಿಗೆಯೂ ಕಡಿಮೆಯಾಗುವವು. ಆದ್ದರಿಂದ ಹುಡುಗರನ್ನು ವ್ಯರ್ಥವಾಗಿ ಬೆದರಿಸಬಾರದು. ಅಪ್ಪಣೆಯನ್ನು ಗಂಭೀರತೆಯಿಂದ ಕೊಡಬೇಕು. ಹೆಚ್ಚಾಗಿ ಒದರಬಾರದು. ಪುನಃ ಪುನಃ ಅಪ್ಪಣೆಗಳನ್ನು ಕೊಡುತ್ತಿರಬಾರದು. ಅಪ್ಪಣೆಗಳು ಯಾರಿಂದ ಕೊಡಲ್ಪಟ್ಟಿವೆಯೋ ಅವರಲ್ಲಿದ್ದ ಕರ್ತೃತ್ವಶಕ್ತಿಯಂತೆ ಅವು ಪಾಲಿಸಲ್ಪಡುವವು. ವ್ಯವಸ್ಥಿತವಾದ ಶಾಲೆಗಳಲ್ಲಿ ಸನ್ನೆಯಿಂದಲೇ ಕೆಲಸವಾಗುವದು; ಅಂಥಲ್ಲಿ ಬಾಯಿಯಿಂದ ಅಪ್ಪಣೆಕೊಡುವ ಪ್ರಸಂಗಗಳು ತೀರ ಕಡಿಮೆ. ಪಾಠಗಳು ನಡೆದಾಗ ಕಣ್ಣುಸನ್ನೆಯಿಂದ ಸಹ ವ್ಯವಸ್ಥೆಯನ್ನು ಕಾಯ್ದುಕೊಳ್ಳಲಿಕ್ಕೆ ಬರುವದು. ಪಾಟಿ—ಪುಸ್ತಕಗಳನ್ನಿಡುವದು, ವರ್ಗದ ಹೊರಗೆ ಹೋಗುವದು, ಒಳಗೆ ಬರುವದು ಮುಂತಾದ ವಾಡಿಕೆಯ ಕೆಲಸಗಳಲ್ಲಿ ಒಂದು ಪ್ರಕಾರದ ನಿಯಮವಿರತಕ್ಕದ್ದು. ಅಭ್ಯಾಸವಿಲ್ಲದೆ ಸುಮ್ಮನೆ ಕುಳಿತರೆ ಹುಡುಗರು ಗೊಂದಲವನ್ನೆಬ್ಬಿಸುವರು. ಆದ್ದರಿಂದ ಶಿಕ್ಷಕರು ವಿದ್ಯಾರ್ಥಿಗಳಿಗೆ ವರ್ಗದಲ್ಲಿ ಸರಿಯಾದ ಕೆಲಸವನ್ನು ಕೊಡಬೇಕು. ಶಿಕ್ಷಕನಲ್ಲಿ ತಕ್ಕಷ್ಟು ಆಳಿಕೆಯ ಸಾಮರ್ಥ್ಯವಿರಬೇಕು. ಮತ್ತು ಅವನು ವರ್ಗದ ಪ್ರತಿಒಬ್ಬ ಹುಡುಗನ ಶೀಲಸ್ವಭಾವವನ್ನು ಅರಿತು ಅವರ ಕಡೆಗೆ ಸಂಪೂರ್ಣ ಲಕ್ಷ್ಯಕೊಡಬೇಕು. ಶಿಕ್ಷಕನ ಲಕ್ಷವು ಸ್ವಲ್ಪ ತಪ್ಪಿದಕೂಡಲೆ ಬಾಲಕರು ತಮ್ಮ ತಮ್ಮೊಳಗೆ ಚೇಷ್ಟೆಮಾಡಹತ್ತುವರು, ಶಿಕ್ಷಕನಲ್ಲಿ ಮನುಷ್ಯಸ್ವಭಾವವನ್ನು ತಿಳಕೊಳ್ಳುವ ಶಕ್ತಿಯೂ ವ್ಯವಹಾರ ಚಾತುರ್ಯವೂ ಇರಬೇಕು. ಪಾಠಗಳನ್ನು ಮನೋರಂಜಕವಾಗುವಂತೆ ಮಾಡುವದು ವ್ಯವಸ್ಥೆಯನ್ನು ಕಾಯುಕೊಳ್ಳುವ ಉತ್ತಮ ಉಪಾಯವು.

**(೨) ಇನಾಮುಗಳು**—ಬಾಲಕರಲ್ಲಿರುವ ಉಲ್ಲಾಸವೃತ್ತಿಯ ಪೋಷಣಕ್ಕೆ ಇನಾಮುಗಳು ಒಳ್ಳೇ ಉತ್ತೇಜನಕರವಾದವುಗಳು. ಇನಾಮುಗಳಿಂದ ವಿದ್ಯಾರ್ಥಿಗಳಲ್ಲಿ

ಉದ್ಯೋಗಪ್ರೀತಿಯು ಹುಟ್ಟುವದಲ್ಲದೆ ವಿಧೇಯತ್ವವು ನೆಲೆಗೊಳ್ಳುವದು. ಇದರಂತೆ ಉಚ್ಚ ಧ್ಯೇಯಗಳನ್ನು ವಿದ್ಯಾರ್ಥಿಗಳಲ್ಲಿ ಹುಟ್ಟಿಸುವದರಲ್ಲಿ ಇನಾಮುಗಳಿಂದ ಒಳ್ಳೇ ಸಹಾಯವಾಗುವದು.

ಇನಾಮುಗಳನ್ನು ಕೊಡುವದಾದರೆ ಕೆಳಗಿನ ಸಂಗತಿಗಳನ್ನು ಲಕ್ಷ್ಯದಲ್ಲಿಡುವದು ಆವಶ್ಯವದೆ.

(೧) ಇನಾಮುಗಳು ಬಹಳ ಬೆಲೆಬಾಳುವಂಥವು ಇರಬಾರದು; ಮತ್ತು ಅವುಗಳನ್ನು ದೊರಕಿಸುವದು ಎಲ್ಲ ವಿದ್ಯಾರ್ಥಿಗಳಿಗೂ ಸಾಧ್ಯವಿರಬೇಕು.

(೨) ಸ್ಥಿರಪ್ರಯತ್ನ, ಹೆಚ್ಚುಹೆಚ್ಚು ಸುಧಾರಣೆ ಮುಂತಾದ ವಿಶಿಷ್ಟಗುಣಗಳಿಗೋಸ್ಕರ ಸಹ ಇನಾಮುಗಳನ್ನು ಕೊಡಬೇಕು.

**ಇನಾಮುಗಳ ಪ್ರಕಾರಗಳು:**—ಇನಾಮುಗಳಲ್ಲಿ ಎರಡು ಪ್ರಕಾರಗಳುಂಟು. ಹಣ ಇಲ್ಲವೆ ಹಣದ ಒಡವೆಗಳು ಅಂದರೆ ಪುಸ್ತಕ, ಪೆನ್ಸೀಲು ಮೊದಲಾದ ಒಡವೆಗಳೂ, ಸರಟೀಫಿಕೇಟು, ಪದಕ, ಮತ್ತು ವೇತನ ಇವೇ ಮೊದಲಾದವುಗಳೂ ಮೊದಲನೇ ಪ್ರಕಾರದ ಇನಾಮುಗಳಾಗಿವೆ. ಕೇವಲ ಮರ್ಯಾದೆಗಾಗಿ ದೊರೆಯುವ ಇನಾಮುಗಳು ಎರಡನೇ ಪ್ರಕಾರದವು. ಅವು ಯಾವವೆಂದರೆ, ಮೇಲುನಂಬರು ಕೊಡುವದು ಪ್ರಶಂಸೆಮಾಡುವದು, ವರ್ಗದೊಳಗಿನ ಅಧಿಕಾರ ಇವೇ ಮೊದಲಾದವುಗಳು.

**(೧) ಮೇಲು ನಂಬರು ಕೊಡುವದು**—ವಿದ್ಯಾರ್ಥಿಗಳಿಗೆ ಮೇಲುನಂಬರು ಕೊಡುವದರಿಂದ ವರ್ಗದಲ್ಲಿ ಮೇಲಾಟ ಉಂಟಾಗಿ ತಿದ್ದುವಿಕೆಗೆ ಒಳ್ಳೇ ಸಹಾಯವಾಗುವದು. ಮತ್ತು ವಿದ್ಯಾರ್ಥಿಗಳು ಇದರಿಂದ ಎಚ್ಚರುಳ್ಳವರಾಗುವರಲ್ಲದೆ ಚಪಲರೂ ಆಗುವರು. ಆದರೆ ಇದರಲ್ಲಿ ಅಭ್ಯಾಸದ ಬಹಳ ವೇಳೆಯು ಸುಮ್ಮನೆ ವ್ಯಯವಾಗುವದು. ವಿದ್ಯಾರ್ಥಿಗಳಲ್ಲಿ ಕೆಲಕೆಲವು ಸಾರೆ ತಿರಸ್ಕಾರವೂ, ದ್ವೇಷವೂ ಹುಟ್ಟುವ ಸಂಭವವಿರುವದು. ದಡ್ಡ ಹುಡುಗರಿಗೆ ಎಂದೂ ಮೇಲು ನಂಬರು ದೊರೆಯದಿರುವದರಿಂದ ಅವರು ನಿರುತ್ಸಾಹವುಳ್ಳವರಾಗುವರು. ಕೆಲವು ಮುಖಹೀನ, ಅಂಜುಬುರುಕ ಹುಡುಗರಿಗಂತೂ ಈ ಪರಿಸ್ಥಿತಿಯಿಂದ ಏನೂ ಉತ್ತೇಜನ ದೊರೆಯುವದಿಲ್ಲ. ಆದದರಿಂದ ಈ ಪದ್ಧತಿಯಲ್ಲಿದ್ದ ಇವೆಲ್ಲ ದೋಷಗಳ ಸಲುವಾಗಿ ಕೆಲವರು ಒಂದು ವಾರದವರೆಗೆ ಇಲ್ಲವೆ ಕೆಲವು ನಿಯಮಿತ ಅವಧಿಯವರೆಗೆ ನಂಬರುಗಳನ್ನು ಬದಲು ಮಾಡುವದಿಲ್ಲ. ಈ ಪದ್ಧತಿಯಾದರೂ ನಿರ್ದುಷ್ಟವಾದದ್ದೆಂದು ತಿಳಿಯಲಾಗದು.

**(೨) ಪ್ರಶಂಸೆ ಮಾಡುವದು:**—ಶಿಫಾರಸಿನ ಪರಿಣಾಮವು ಶಿಫಾರಸು ಮಾಡತಕ್ಕ ಮನುಷ್ಯನ ಯೋಗ್ಯತೆಯ ಮೇಲೆ ಅವಲಂಬಿಸಿರುತ್ತದೆ. ಸತ್‌ಶಿಕ್ಷಕನ

ಒಂದು ಶಿಫಾರಸಿನ ಶಬ್ದವು ಪ್ರತ್ಯಕ್ಷ ಇನಾಮಿನಗಿಂತಲೂ ಹೆಚ್ಚಿನ ಪರಿಣಾಮವನ್ನುಂಟು ಮಾಡುವದು. ಶಿಫಾರಸು ಮಾಡುವಾಗ ಲಕ್ಷ್ಯದಲ್ಲಿಡತಕ್ಕ ಸಂಗತಿಗಳುಃ—

(ಅ) ಕೇವಲ ಯೋಗ್ಯತೆಯ ಸ್ತುತಿಮಾಡುವದಕ್ಕಿಂತ ಪ್ರಾಮಾಣಿಕತನದ ಪ್ರಯತ್ನವನ್ನು ಹೆಚ್ಚು ಹೊಗಳತಕ್ಕದ್ದು.

(ಬ) ಬುದ್ಧಿಯಷ್ಟೇ ನೀತಿಯನ್ನಾದರೂ ಹೊಗಳತಕ್ಕದ್ದು. ಇದರಿಂದ ವಿದ್ಯಾರ್ಥಿಗಳು ಬುದ್ಧಿವಂತರಾಗುವರಲ್ಲದೆ ನೀತಿವಂತರೂ ಆಗುವರು.

(ಕ) ಮೇಲಿಂದ ಮೇಲೆ ಶಿಫಾರಸು ಮಾಡದೆ ವಿಶೇಷ ಪ್ರಸಂಗಗಳಲ್ಲಿ ಶಿಫಾರಸು ಮಾಡುತ್ತಿರಬೇಕು. ಅಂದರೆ ಅದರ ಮಹತ್ವವು ಉಳಿಯುವದು.

**(೩) ಶಾಲೆಯೊಳಗಿನ ಅಧಿಕಾರಗಳು:—** ನೀತಿಯ ಕೃತಿಯಿಂದಾಗಲಿ ಬುದ್ಧಿಯಿಂದಾಗಲಿ ಹೆಸರು ಪಡೆದ ಹುಡುಗನನ್ನು ವರ್ಗದ ಹಿರೇಮಣಿಯನ್ನಾಗಿ ಇಲ್ಲವೆ ಪುಸ್ತಕಾಲಯದ ವ್ಯವಸ್ಥಾಪಕನನ್ನಾಗಿ ನಿಯಮಿಸಬೇಕು. ಇದರಂತೆ ಕ್ಯಾಟಲಾಗು ತುಂಬುವದು, ವಸ್ತುಸಂಗ್ರಹಾಲಯದ ವ್ಯವಸ್ಥೆ ಮುಂತಾದ ಕೆಲಸಗಳನ್ನು ಚುರುಕುಬುದ್ಧಿಯ ಹುಡುಗರಿಗೆ ಕೊಡಬಹುದು. ಈ ಕೆಲಸ ಕೊಡುವದರಿಂದ ವಿದ್ಯಾರ್ಥಿಗಳು ಶಾಲೆಯ ನಿತ್ಯದ ಕೆಲಸವನ್ನು ದುರ್ಲಕ್ಷಮಾಡದಂತೆ ಎಚ್ಚರಗೊಳ್ಳಬೇಕು. ವರ್ಗದೊಳಗಿನ ಬೇರೆಬೇರೆ ಕೆಲಸಗಳನ್ನು ತೋರಿಸುವದಕ್ಕೆ ಅರಿವೆಯಿಂದ ಮಾಡಿದ ಹೂವು, ಬೇರೆಬೇರೆ ಬಣ್ಣದ ಅರಿವೆಯ ತುಂಡುಗಳು ಇವೇ ಮೊದಲಾದವುಗಳನ್ನು ಹುಡುಗರು ಉಪಯೋಗಿಸತಕ್ಕದ್ದು. ಇದರಿಂದ ಅವರ ಅಧಿಕಾರಕ್ಕೆ ಹೆಚ್ಚು ಮಹತ್ವವು ಉಂಟಾಗುವದು.

**ವಸ್ತುಗಳನ್ನು ಇನಾಮಾಗಿ ಕೊಡುವದುಃ—** ಮೊದಲನೇ ಪ್ರಕಾರದ ಇನಾಮುಗಳನ್ನು ಕೊಡುವದು ಯಾವಾಗಲೂ ಸಾಧ್ಯವಲ್ಲ. ಇವುಗಳ ಸಂಖ್ಯೆಯು ತೀರ ಹೆಚ್ಚೂ ಇರಬಾರದು ತೀರ ಕಡಿಮೆಯೂ ಇರಬಾರದು. ಎಲ್ಲಕ್ಕೂ ಹೆಚ್ಚು ಗುಣಗಳನ್ನು ಪಡೆದವನಿಗೆ ಇನಾಮು ದೊರೆಯುವದೆಂಬ ನಿಯಮವಿರಬೇಕು. ಅಂದರೆ ಬಹುತರ ಯೋಗ್ಯ ವಿದ್ಯಾರ್ಥಿಗೇ ಇನಾಮು ದೊರೆಯುವದು. ಗುಣಗಳನ್ನು ಕೊಡಬೇಕಾದರೆ ಪ್ರತಿಯೊಂದು ವಿಷಯದ ಸಲುವಾಗಿ ಗುಣಗಳನ್ನು ಕೊಡುವದಲ್ಲದೆ ಸಮಯನಿಷ್ಠತೆ, ಸ್ಥಿರಪ್ರಯತ್ನ, ಕೇಳಿದ ಕೂಡಲೆ ಉತ್ತರಕೊಡೋಣ ಮುಂತಾದವುಗಳ ಸಲುವಾಗಿಯೂ ಗುಣಗಳನ್ನು ಕೊಡಬೇಕು. ಇಂಥವೆಲ್ಲ ಗುಣಗಳನ್ನು ಕೆಲವು ನಿಯಮಿತ ಅವಧಿಗೆ ಒಟ್ಟುಗೂಡಿಸಿ ಒಟ್ಟು ಪರಿಣಾಮವನ್ನು ಪ್ರಸಿದ್ಧಮಾಡಬೇಕು. ಇದರಿಂದ ವಿದ್ಯಾರ್ಥಿಗಳಿಗೆ ಉತ್ತೇಜನವು ದೊರೆಯುವದು.

**ಗುಣಗಳ ಬಗ್ಗೆ ಸರಟೀಫಿಕೇಟು ಕೊಡುವದುಃ—** ಇನಾಮು ಕೊಡುವದು ಅಶಕ್ಯವಾದಲ್ಲಿ ಕೆಲವೊಂದು ನಿಯಮಿತ ಅವಧಿಗೆ ಸರಟೀಫಿಕೇಟುಗಳನ್ನು ಕೊಡ

ಬೇಕು. ಯಾತರ ವಿಷಯಕ್ಕೆ ಸರಟೀಫಿಕೇಟನ್ನು ಕೊಟ್ಟಿದೆ ಎಂಬದು ಅದರಲ್ಲಿ ಸ್ಪಷ್ಟವಾಗಿರಬೇಕು. ಶಾಲೆಯ ಕೆಲಸದಲ್ಲಿ ಆಸಕ್ತಿ, ಆಸ್ಥೆಗಳನ್ನು ಹುಟ್ಟಿಸಲಿಕ್ಕೆ ಇದು ಒಳ್ಳೇ ಉಪಾಯವು

(೩) ಶಿಕ್ಷೆ—ಈ ವಿಷಯದಲ್ಲಿ ಶಿಕ್ಷೆಯಿಂದಕೆಲಮಟ್ಟಿಗೆ ಸಹಾಯವಾಗುತ್ತದೆ. ಶಿಕ್ಷೆಯನ್ನು ಔಷಧದಂತೆ ಕೆಲವು ಪ್ರಸಂಗಗಳಲ್ಲಿ ಮಾತ್ರ ಉಪಯೋಗಿಸಬೇಕು. ಪ್ರಕೃತಿಯು ಕೆಟ್ಟಾಗ ಔಷಧದ ಉಪಯೋಗವನ್ನು ಮಾಡಿದರೆ ರೋಗವು ಪರಿಹಾರವಾಗಿ ಪ್ರಕೃತಿಯು ಸುಸ್ಥಿತಿಗೆ ಬರುವದು. ಆದರೆ ಆರೋಗ್ಯವನ್ನೂ ಶರೀರಸಂಪತ್ತನ್ನೂ ಉಂಟುಮಾಡುವ ಸಾಮರ್ಥ್ಯವು ಔಷಧದಲ್ಲಿ ಇರುವದಿಲ್ಲ. ಸಾತ್ವಿಕವಾದ ಆಹಾರ, ಸ್ವಚ್ಛವಾದ ಹವೆ, ಸರಿಯಾದ ವಿಶ್ರಾಂತಿ, ನಿಯಮಿತ ವರ್ತನ ಇವುಗಳಿಂದ ಶರೀರವು ನಿರೋಗವೂ ಪುಷ್ಟವೂ ಆಗುವದು. ಇದರಂತೆ ಶಿಕ್ಷೆಯನ್ನು ಮಾಡುವದರಿಂದ ಸಾಲೆಯಲ್ಲಿ ವ್ಯವಸ್ಥೆಯುಂಟಾಗಿ ವಿದ್ಯಾರ್ಥಿಗಳಿಗೆ ಉತ್ತಮ ಚಟಗಳು ಹತ್ತುವವೆಂದು ಅಪೇಕ್ಷಿಸುವದು ತಪ್ಪು. ಸಾಲೆಯ ವ್ಯವಸ್ಥೆಗೆ ಕುಂದುಬಂದು ಅದು ಕೆಟ್ಟುಹೋದಾಗ ಶಿಕ್ಷೆಯ ಉಪಯೋಗವನ್ನು ಮಾಡಬೇಕು. ಸಾಲೆಯ ನೇಮುಗಳನ್ನು ಪಾಲಿಸುವದು ತಮ್ಮ ಕರ್ತವ್ಯವೆಂದು ತಿಳಿದು ವಿದ್ಯಾರ್ಥಿಗಳು ಅವುಗಳನ್ನು ಪಾಲಿಸತಕ್ಕದ್ದು; ಮತ್ತು ತಾವು ಕಲಿತ ಸಾಲೆಯ ಬಗ್ಗೆ ಅವರಲ್ಲಿ ಪ್ರೇಮವೂ ಅಭಿಮಾನವೂ ಇರತಕ್ಕದ್ದು; ಎಂಬ ಶಿಕ್ಷಣದ ಹೇತುವು ಸಫಲವಾಗಬೇಕಾದರೆ ಶಿಕ್ಷಕನು ತನ್ನ ಹೋರೆಯನ್ನು ಪ್ರೀತಿಯಿಂದಲೂ ದಕ್ಷತೆಯಿಂದಲೂ ಮಾಡಬೇಕು. ಶಿಕ್ಷೆಯ ಉಪಯೋಗವನ್ನು ಬಹಳ ಎಚ್ಚರದಿಂದ ಮಾಡಬೇಕು. ಔಷಧವನ್ನು ಯಾವಾಗಲೂ ಸೇವಿಸುವದರಿಂದ ಅದರ ಪ್ರಯೋಜನವು ಹ್ಯಾಗೆ ಆಗುವದಿಲ್ಲವೋ ಹಾಗೆ ಶಿಕ್ಷೆಯ ಉಪಯೋಗವನ್ನು ಮೇಲಿಂದಮೇಲೆ ಮಾಡುವದರಿಂದ ಏನೂ ಪ್ರಯೋಜನವಾಗಲಾರದು.

ಶಿಕ್ಷೆಯನ್ನು ಮಾಡುವದರಿಂದ ತಾವು ತಪ್ಪುಮಾಡಿದೆವೆಂಬ ತಿಳುವಳಿಕೆಯು ಬಾಲಕರಲ್ಲಿ ಹುಟ್ಟುವದು; ಮತ್ತು ಅವರಿಗೆ ನಾಚಿಕೆಹುಟ್ಟಿ ಅವರು ಮುಂದೆ ಅಂಥ ತಪ್ಪುಗಳಾಗದಂತೆ ಎಚ್ಚರಪಡುವರು. ಬಾಲಕರಲ್ಲಿ ಸುಧಾರಣೆಯುಂಟಾಗಬೇಕೆಂಬದೇ ಶಿಕ್ಷೆಯ ಮೊದಲನೇ ಉದ್ದೇಶವು. ಅನ್ಯಾಯಮಾಡಿದರೆ ಅಥವಾ ಗೊತ್ತುಪಡಿಸಿದ ನಿಯಮಗಳಿಗೆ ವಿರುದ್ಧವಾಗಿ ನಡೆದರೆ ನಿಶ್ಚಯವಾಗಿ ಶಿಕ್ಷೆಯಾಗುವದೆಂಬದು ವಿದ್ಯಾರ್ಥಿಗಳಿಗೆ ಗೊತ್ತು ಇರತಕ್ಕದ್ದು. ಇದೇ ಎರಡನೆಯ ಉದ್ದೇಶವು. ಈ ಸಂಗತಿಗಳಿಂದ ತಾವು ಮಾಡಿದ ಯಾವಕೆಲಸವು ಚಲೋದು ಯಾವಕೆಲಸವು ಕೆಟ್ಟದು ಎಂಬ ತಿಳುವಳಿಕೆಯು ಬಾಲಕರಲ್ಲಿ ಹುಟ್ಟಿ ಕೆಟ್ಟಕೆಲಸಗಳನ್ನು ಮಾಡಿದಾಗೆಲ್ಲ ಶಿಕ್ಷೆಯಾಗುವದೆಂಬ ಭಾವನೆಯಿಂದ ಅವರಿಗೆ ನಿಯಮಗಳಿಗನುಸರಿಸಿ ನಡೆಯುವ ಚಟವು ಹತ್ತುವದು.

ಶಿಕ್ಷೆಯನ್ನು ಮಾಡದೆ ಬಿಟ್ಟರೆ ದುಷ್ಕೃತ್ಯಗಳನ್ನು ಮಾಡುವದರಿಂದ ದುಷ್ಪರಿಣಾಮವಾಗುತ್ತದೆಂಬ ತಿಳುವಳಿಕೆಯಿಲ್ಲದೆ ಬಾಲಕರಿಗೆ ಕೆಟ್ಟಚಟಗಳು ಹತ್ತುವವು. ತಪ್ಪುಗಾರನಿಗೆ ಶಿಕ್ಷೆಯಾಗುವದರಿಂದ ಉಳಿದವರು ತಮ್ಮಿಂದ ತಪ್ಪುಗಳಾಗದಂತೆ ಎಚ್ಚರಪಡುವರು. ಅಂತೂ ಶಿಕ್ಷೆಯಿಂದ ವ್ಯಕ್ತಿಯು ಸುಧಾರಣೆಯಾಗುವದಲ್ಲದೆ ಇತರರ ಸುಧಾರಣೆಯು ಸಹ ಆಗುವದು.

ಶಿಕ್ಷೆಯಲ್ಲಿ ಎರಡುಪ್ರಕಾರಗಳನ್ನು ಮಾಡಬಹುದು. ಅವು ಯಾವವೆಂದರೆ—ಯಾವ ಶಿಕ್ಷೆಯಿಂದ ಶಾರೀರಿಕ ದುಃಖವಾಗಲಿ ತ್ರಾಸವಾಗಲಿ ಆಗುವದೋ ಅದು ಮೊದಲನೇ ಪ್ರಕಾರದ್ದು. ಯಾವ ಶಿಕ್ಷೆಯಿಂದ ಶಾರೀರಿಕ ದುಃಖವಾಗಲಿ ತ್ರಾಸವಾಗಲಿ ಆಗುವದಿಲ್ಲವೋ ಅದು ಎರಡನೇ ಪ್ರಕಾರದ್ದು. ಈ ಎರಡನೇ ಪ್ರಕಾರದ ಶಿಕ್ಷೆಯಿಂದ ಮಾನಹಾನಿಯಾದಂತಾಗಿ ವಿದ್ಯಾರ್ಥಿಗಳಿಗೆ ಪಶ್ಚಾತ್ತಾಪವಾಗುವದು. ಬೆತ್ತದಿಂದ ಹೊಡೆಯುವದು, ಸಾಲೆಯನ್ನು ಬಿಟ್ಟಬಳಿಕ ಸಾಲೆಯಲ್ಲಿ ಕೂಡ್ರಿಸುವದು, ಮನೆಯಿಂದ ಏನಾದರೊಂದು ವಿಶಿಷ್ಟಪಾಠವನ್ನು ಬರೆದು ತರಲಿಕ್ಕೆ ಹೇಳುವದು. ಇವೇ ಮೊದಲಾದವು ಮೊದಲನೇ ಪ್ರಕಾರದ ಶಿಕ್ಷೆಯಲ್ಲಿ ಬರುವವು. ಶಿಕ್ಷಕನು ವಿದ್ಯಾರ್ಥಿಗಳನ್ನು ಸಿಟ್ಟಿನಿಂದ ನೋಡುವದು, ಸಿಟ್ಟುಮಾಡುವದು, ವರ್ಗದಲ್ಲಿ ನಿಲ್ಲಿಸುವದು, ನಂಬರು ಕೆಳಗೆ ಹಾಕುವದು, ಗುಣಗಳನ್ನು ಕಡಿಮೆಮಾಡುವದು ಇವೇ ಮೊದಲಾದವು ಎರಡನೇ ಪ್ರಕಾರದ ಶಿಕ್ಷೆಗಳು.

ಶಿಕ್ಷೆಯ ವಿಷಯಕ್ಕೆ ನೆನಪಿಡತಕ್ಕ ಸಂಗತಿಯೇನೆಂದರೆ—ತಪ್ಪುಮಾಡಿದಾಗೆಲ್ಲ ನಿಶ್ಚಯವಾಗಿ ಶಿಕ್ಷೆಯಾಗುತ್ತದೆಂಬ ನಂಬಿಗೆಯು ವಿದ್ಯಾರ್ಥಿಗಳಲ್ಲಿ ಹುಟ್ಟಬೇಕು. ಅಂದರೆ ಅವರು ತಪ್ಪುಮಾಡುವ ಗೋಜಿಗೆ ಹೋಗುವದಿಲ್ಲ. ಹುಡುಗನು ಹತ್ತುಸಾರೆ ತಪ್ಪುಮಾಡಿದ್ದರೂ ಒಂಭತ್ತುಸಾರೆ ಆ ತಪ್ಪು ಶಿಕ್ಷಕನ ಲಕ್ಷಕ್ಕೆ ಬಾರದಿದ್ದು ಅಥವಾ ತಪ್ಪಿಗೆ ಸರಿಯಾದ ಶಿಕ್ಷೆಯನ್ನು ಮಾಡದೆಬಿಟ್ಟು ಹತ್ತನೇಸಾರೆ ತಪ್ಪುಮಾಡಿದಾಗ ಮಾತ್ರ ಕಠಿಣ ಶಿಕ್ಷೆಯನ್ನು ವಿಧಿಸಿದರೆ ಶಿಕ್ಷೆಯ ಇಷ್ಟಪರಿಣಾಮವು ಹುಡುಗರ ಮೇಲೆ ಆಗಲಾರದು. ತಪ್ಪು ಕಂಡಕೂಡಲೆ ನೇಮದಿಂದ ಸೌಮ್ಯಶಿಕ್ಷೆಯನ್ನು ವಿಧಿಸುವದು ಉತ್ತಮವಾದದ್ದು. ಯಾವತಪ್ಪಿನಿಂದ ಶಿಕ್ಷೆಯಾಯಿತೆಂಬದನ್ನು ತಪ್ಪುಗಾರನಿಗೆ ತಿಳಿಸಿಕೊಡಬೇಕು. ಅಂದರೆ ಪುನಃ ಅಂಥ ತಪ್ಪು ಆಗದಂತೆ ಹುಡುಗರು ಎಚ್ಚರಪಡುವರು. ಶಿಕ್ಷೆಯನ್ನು ಮಾಡುವಂಥ ಶಿಕ್ಷಕನು ಸಮದೃಷ್ಟಿಯುಳ್ಳವನಿರಬೇಕು. ಸೌಮ್ಯಶಿಕ್ಷೆಯಿಂದ ಕೆಲಸವಾಗುವಂತಿದ್ದರೆ ಕಠಿಣಶಿಕ್ಷೆಯನ್ನು ಮಾಡಬಾರದು. ಒಂದೇ ಔಷಧವನ್ನು ಯಾವಾಗಲೂ ತೆಗೆದುಕೊಳ್ಳುವದರಿಂದ ಹ್ಯಾಗೆ ವಿಶೇಷ ಗುಣವು ಬರಲಾರದೋ ಹಾಗೆ ಒಂದೇಪ್ರಕಾರದ ಶಿಕ್ಷೆಯನ್ನು ಮೇಲಿಂದಮೇಲೆ ಮಾಡುವದರಿಂದ ಇಷ್ಟಪರಿಣಾಮವು ಆಗಲಾರದು. ಎಲ್ಲ ಹುಡುಗರಿಗೆ ಒಂದೇ ಪ್ರಕಾರದ ಶಿಕ್ಷೆಯನ್ನು ಮಾಡ್ಡು

ವದರಿಂದ ಯಾರಿಗೂ ನಾಚಿಕೆ ಹುಟ್ಟುವದಿಲ್ಲ. ಇಷ್ಟೇ ಅಲ್ಲದೆ ಎಲ್ಲರಿಗೂ ಒಂದು ಪ್ರಕಾರದ ಸೊಗಸೆನಿಸುವದು, ಮತ್ತು ಶಿಕ್ಷಕನ ವಿಷಯಕ್ಕೆ ಅಂಜಿಕೆಯು ಉಳಿಯು ವದಿಲ್ಲ. ಮಂದಬುದ್ಧಿಯು ಸಲುವಾಗಿ, ಏನಾದರೂ ವ್ಯಂಗವಿದ್ದದರಿಂದ ಸರಿಯಾಗಿ ಬರೆಯಲಿಕ್ಕೆ ಬಾರದ್ದಕ್ಕಾಗಿ ಶಿಕ್ಷೆಯನ್ನು ಮಾಡಬಾರದು. ವಿದ್ಯಾರ್ಥಿಗಳು ಸಾಲೆಯ ನಿಯಮಗಳನ್ನು ಮುರಿದರೆ ಶಿಕ್ಷೆಯನ್ನು ಮಾಡತಕ್ಕದ್ದು. ಶಾಲೆಯಲ್ಲಿ ಶಿಕ್ಷೆಯ ಪ್ರಮಾಣವು ಕಡಿಮೆ ಇದ್ದಂತೆ ಶಿಕ್ಷಕನ ಕೌಶಲ್ಯವು ಹೆಚ್ಚಿರುತ್ತದೆಂದು ತಿಳಿಯಬೇಕು. ಶಾರೀರಿಕ ಶಿಕ್ಷೆಯನ್ನು ಹೆಡ್ಡಮಾಸ್ತರನ ಹೊರ್ತು ಉಳಿದ ಶಿಕ್ಷಕರು ಮಾಡಬಾರದು. ಅಂಗೈ ಹೊರ್ತಾಗಿ ಉಳಿದ ಯಾವಭಾಗದಲ್ಲಿಯೂ ಬೆತ್ತದಿಂದ ಹೊಡೆಯಬಾರದು.

ಇನ್ನು ಶಾಲೆಯಲ್ಲಿ ಸಂಪೂರ್ಣವಾಗಿ ವ್ಯವಸ್ಥೆಯುಂಟಾಗಲಿಕ್ಕೆ ಕೆಳಗಿನ ಸಹಾಯಗಳಾದರೂ ಅವಶ್ಯವಾಗಿ ಬೇಕು,

**(೧) ತಾಯಿ ತಂದೆಗಳು:**—ಸಾಲೆಯ ಶಿಕ್ಷಣವು ಫಲದ್ರೂಪವಾಗಬೇಕಾದರೆ ಗೃಹಶಿಕ್ಷಣವು ಅವಶ್ಯವಾದದ್ದು. ಮನೆಯಲ್ಲಿ ಹುಡುಗರಿಗೆ ವಿಧೇಯರಾಗಿ ನಡೆಯಲಿಕ್ಕೂ ಸತ್ಯಮಾತಾಡಲಿಕ್ಕೂ ಕಲಿಸುವದು ತಂದೆ-ತಾಯಿಗಳ ಕರ್ತವ್ಯವು. ಈ ಕರ್ತವ್ಯವನ್ನು ಅವರು ದುರ್ಲಕ್ಷಿಸಿದರೆ ಶಿಕ್ಷಕನು ಸಾಲೆಯಲ್ಲಿ ಹುಡುಗರನ್ನು ತಿದ್ದಲಿಕ್ಕೆ ಮಾಡುವ ಶ್ರಮವು ವ್ಯರ್ಥವಾಗುವದು. ಶಿಕ್ಷಕನು ಪ್ರತಿದಿನ ಹುಡುಗರನ್ನು ಸಾಲೆಗೆ ಕರೆದೊಯ್ಯುವದು ಅಸಾಧ್ಯವು. ಆದ್ದರಿಂದ ಹುಡುಗರನ್ನು ವೇಳೆಗೆ ಸರಿಯಾಗಿ ಶಾಲೆಗೆ ಕಳಿಸಿಕೊಡುವದು ಪಾಲಕರ ಕರ್ತವ್ಯವು. ಸಾಲೆಯು ಹೆಚ್ಚಿನ ನಿಯಮಗಳಿಗೆ ಅನುಸಾರವಾಗಿ ಹುಡುಗರು ನಡೆಯುವದು ಪಾಲಕರ ಸದಭಿಪ್ರಾಯದ ಮೇಲೆ ಅವಲಂಬಿಸಿದೆ. ತಾಯಿತಂದೆಗಳು ಶಿಕ್ಷಕರಿಗೆ ಅನುಕೂಲರಾಗಿ ನಡೆದರೆ ವ್ಯವಸ್ಥೆಗೆ ಅನುಕೂಲವಾಗುವದು. ಎಷ್ಟೋ ಹಳ್ಳಿಗಳಲ್ಲಿ ಶಿಕ್ಷಕರು ಮಾಡುವ ವ್ಯವಸ್ಥೆಗೆ ವಿರುದ್ಧವಾಗಿ ತಾಯಿ-ತಂದೆಗಳು ವರ್ತಿಸುವರು. ಇದು ಶೋಚನೀಯವಾದ ಸಂಗತಿಯು. ಸಮಾಜದಲ್ಲಿ ಯೋಗ್ಯವಾದ ತಿಳುವಳಿಕೆಯು ಉಂಟಾದ ಹೊರತು ಈ ಸ್ಥಿತಿಯು ಸುಧಾರಿಸಲಾರದು.

**(೨) ಸಾಲೆಯ ಮನೆಯನ್ನು ಕಟ್ಟಿಸುವವರು**—ಶಾಲೆಯು ವ್ಯವಸ್ಥೆಯು ಶಾಲಾಗೃಹದ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಸಾಕಷ್ಟು ಬೆಳಕು, ಶುದ್ಧಹವೆ, ಎಲ್ಲ ಹುಡುಗರಿಗೂ ಶಿಕ್ಷಕರಿಗೂ ಸಾಕಾಗುವಷ್ಟು ಸ್ಥಳ, ಇವು ಇರದಂಥ ಶಾಲೆಗಳಲ್ಲಿ ಶಿಕ್ಷಣಕೊಡುವದು ಕಠಿಣವಾದದ್ದು. ಒಬ್ಬ ವಿದ್ಯಾರ್ಥಿಗೆ ಕನಿಷ್ಠಪಕ್ಷಕ್ಕೆ ಹತ್ತು ಚೌ. ಫೂ. ಸ್ಥಳವು ಬೇಕು. ಶಾಲೆಗಳಲ್ಲಿ ವರ್ಗಗಳಿದ್ದಷ್ಟು ಅಥವಾ ಶಿಕ್ಷಕರಿದ್ದಷ್ಟು ಬೇರೆಬೇರೆ ಕೋಣೆಗಳಿರತಕ್ಕದ್ದು. ಎಲ್ಲ ವರ್ಗಗಳನ್ನು ಒತ್ತಟ್ಟಿಗೆ ಕೂಡಿಸುವದರಿಂದ ಆಗುವ ಗದ್ದಲವನ್ನು ತಪ್ಪಿಸುವದು ಅಸಾಧ್ಯವು. ಸಾಲೆಯ ಸಮೀಪಕ್ಕೆ ಹುಡು

ಗರ ಆಟದ ಸಲುವಾಗಿ ತಕ್ಕಷ್ಟು ಬೈಲು ಸ್ಥಳವಿರಬೇಕು. ನೂರು ಹುಡುಗರಿಗೆ ಅರ್ಧ ಎಕರೆ ಸ್ಥಳವಾದರೂ ಇರಬೇಕು. ಆದ್ದರಿಂದ ಈಗ ದೊಡ್ಡದೊಡ್ಡ ಪಟ್ಟಣಗಳಲ್ಲಿ ಊರಹೊರಗೆ ಬೈಲುಪ್ರದೇಶದಲ್ಲಿ ಸಾಕಷ್ಟು ಹವೆ-ಬೆಳಕುಗಳಿಗೆ ಅನುಕೂಲವಾಗುವಂತೆಯೂ ವರ್ಗದ ಕೋಣೆಗಳು ಬೇರೆಬೇರೆಯಾಗಿರುವಂತೆಯೂ ಸಾಲೆಯ ಮನೆಗಳನ್ನು ಕಟ್ಟಿಸಹತ್ತಿದ್ದಾರೆ.

(೩) **ಮುಖ್ಯಾಧ್ಯಾಪಕನು**—ಮುಖ್ಯಾಧ್ಯಾಪಕನ ವರ್ತನ್ನಿನ ಮೇಲೆ ಸಾಲೆಯ ವ್ಯವಸ್ಥೆಯು ಬಹಳ ಮಟ್ಟಿಗೆ ಅವಲಂಬಿಸಿದೆ. ಅವನು ಇಡೀಸಾಲೆಯ ವ್ಯವಸ್ಥೆಯನ್ನು ಕಾಯ್ದುಕೊಳ್ಳಲಿಕ್ಕೆ ತಕ್ಕ ಏರ್ಪಾಡುಗಳನ್ನು ಮಾಡತಕ್ಕದ್ದು. ಅವನ ವಿಷಯದಲ್ಲಿ ಉಪಶಿಕ್ಷಕರೂ ವಿದ್ಯಾರ್ಥಿಗಳೂ ಪೂಜ್ಯಬುದ್ಧಿಯುಳ್ಳವರಿದ್ದರೆ ವ್ಯವಸ್ಥೆಯನ್ನು ಕಾಯ್ದುಕೊಳ್ಳಲಿಕ್ಕೆ ಒಳ್ಳೇ ಅನುಕೂಲವಾಗುವದು. ಸಾಲೆಯಲ್ಲಿ ವರ್ಗದ ಕೋಣೆಗಳನ್ನು ಗೊತ್ತುಪಡಿಸುವದು, ಉಪಶಿಕ್ಷಕರಿಗೆ ಅವರವರ ಯೋಗ್ಯತೆಯಂತೆ ತಕ್ಕ ಕೆಲಸಗಳನ್ನು ಕೊಡುವದು ಮುಖ್ಯಾಧ್ಯಾಪಕನ ಕೆಲಸವು. ವಿದ್ಯಾರ್ಥಿಗಳೂ ಉಪಶಿಕ್ಷಕರೂ ನಿಯಮಿತವಾಗಿ ಸಾಲೆಗೆ ಬಂದು ಅಭ್ಯಾಸವು ಸರಿಯಾಗಿ ನಡೆಯುವಂತೆ ಮಾಡುವದಾದರೂ ಇವನ ಕರ್ತವ್ಯವು. ವರ್ಗಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವಾಗ, ಪ್ರಾರ್ಥನೆ ಮಾಡುವಾಗ ಗೊಂದಲವಾಗದಂತೆ ವ್ಯವಸ್ಥೆಯನ್ನು ಕಾಯ್ದುಕೊಳ್ಳುವದು ಸಹ ಇವನ ಕೆಲಸವು. ಮುಖ್ಯಾಧ್ಯಾಪಕನು ಉಪಶಿಕ್ಷಕರ ಕೂಡ ಗೌರವದಿಂದಲೂ ಪ್ರೀತಿಯಿಂದಲೂ ನಡಕೊಳ್ಳಬೇಕು. ವಿದ್ಯಾರ್ಥಿಗಳ ಎದುರಿಗೆ ಅವರ ಟೀಕೆಯನ್ನು ಮಾಡಬಾರದು. ಅವರಿಂದ ಏನಾದರೂ ತಪ್ಪಾಗಿದ್ದರೆ ಏಕಾಂತದಲ್ಲಿ ಅವರಿಗೆ ಬುದ್ಧಿ ಹೇಳಬೇಕು. ವಿದ್ಯಾರ್ಥಿಗಳೂ ಉಪಶಿಕ್ಷಕರೂ ತನಗೆ ತಕ್ಕ ಮರ್ಯಾದೆಯನ್ನು ಕೊಡಬೇಕೆಂದು ಇಚ್ಛಿಸುವಂತೆ ವಿದ್ಯಾರ್ಥಿಗಳು ತಮ್ಮತಮ್ಮ ವರ್ಗದ ಶಿಕ್ಷಕರಿಗೆ ಮಾನಕೊಡುತ್ತಾರೆಂಬದನ್ನು ನೋಡುತ್ತಿರಬೇಕು. ವಿದ್ಯಾರ್ಥಿಗಳಿಗೂ ಉಪಶಿಕ್ಷಕರಿಗೂ ಭೇದ ಬಂದಲ್ಲಿ ಮುಖ್ಯಾಧ್ಯಾಪಕನು ಪೂರ್ಣ ವಿಚಾರ ಮಾಡಬೇಕು. ಮತ್ತು ಆದಷ್ಟು ಮಟ್ಟಿಗೆ ವಿದ್ಯಾರ್ಥಿಗಳ ಎದುರಿಗೆ ಶಿಕ್ಷಕರ ಪಕ್ಷವನ್ನೇ ವಹಿಸಬೇಕು.

(೪) **ಉಪಶಿಕ್ಷಕರು**—ಉಪಶಿಕ್ಷಕರು ಮನಃಪೂರ್ವಕವಾಗಿ ಕೆಲಸಮಾಡುತ್ತ ಮುಖ್ಯಾಧ್ಯಾಪಕನ ನಿಯಮಗಳಿಗೆ ಅನುಸರಿಸಿ ನಡೆದರೆ ಸಾಲೆಯ ವ್ಯವಸ್ಥೆಯು ಚನ್ನಾಗಿ ಉಳಿಯುವದು.

(೫) **ವೇಳಾಪತ್ರಿಕೆ**—ಸಾಲೆಯನ್ನು ವ್ಯವಸ್ಥೆಯಿಂದ ಇಟ್ಟುಕೊಳ್ಳಲಿಕ್ಕೆ ಅವಶ್ಯವಾದ ಸಾಧನಗಳಲ್ಲಿ ವೇಳಾಪತ್ರಿಕೆಯು ಒಂದಾಗಿದೆ. ಸಾಲೆಯು ಕೆಲಸವು ನಿಯಮಿತವಾಗಿ ನಡೆಯಲಿಕ್ಕೆ ಇದು ಅವಶ್ಯವಾಗಿ ಬೇಕು. ಇದನ್ನು ಸಿದ್ಧಪಡಿಸುವದು

ಬಹಳ ಮಹತ್ವವಾದದ್ದೂ ಕಠಿಣವಾದದ್ದೂ ಇರುತ್ತದೆ. ಇದನ್ನು ಸಮಾಧಾನಕರವಾಗಿ ಗೊತ್ತುಪಡಿಸಲಿಕ್ಕೆ ಅನುಭವವು ಬೇಕು. ಆದ್ದರಿಂದ ಮುಖ್ಯಾಧ್ಯಾಪಕನು ವೇಳಾಪತ್ರಿಕೆಯನ್ನು ಸಿದ್ಧಮಾಡಬೇಕು. ಇದನ್ನು ಸಿದ್ಧಪಡಿಸುವ ಮೊದಲು ಕೆಳಗಿನ ಸಂಗತಿಗಳನ್ನು ಗೊತ್ತುಮಾಡಿಕೊಳ್ಳಬೇಕು.

(ಅ) ಶಾಲೆಯು ಪ್ರಾರಂಭವಾಗುವ ವೇಳೆ, ಬಿಡುವವೇಳೆ, ಸೂಟಿಯವೇಳೆ.

(ಬ) ಪಾಠಗಳಿಗೆ ಕೊಡತಕ್ಕ ವೇಳೆ,

(ಕ) ವಿಷಯಗಳಿಗೆ ಕೊಡತಕ್ಕ ವೇಳೆ

(ಡ) ಶಿಕ್ಷಕರ ಯೋಗ್ಯತೆ ಮತ್ತು ಸಂಖ್ಯೆ

(ಇ) ವರ್ಗದ ಸ್ಥಳದ ಅನುಕೂಲತೆ

ಶಾಲೆಯ ವೇಳೆಯನ್ನು ಶಾಲಾಖಾತೆಯ ವರಿಷ್ಠಾಧಿಕಾರಿಗಳು ಗೊತ್ತುಪಡಿಸುವರು. ಪಾಠಗಳ ಕಾಲವನ್ನು ನಿರ್ಣಯಿಸುವಾಗ ಹುಡುಗರ ವಯಸ್ಸಿನ ಕಡೆಗೆ ಲಕ್ಷ್ಯಕೊಡಬೇಕು. ಬಾಲಕರ ವರ್ಗದ ಪಾಠಗಳು ೨೦ ರಿಂದ ೩೦ ಮಿನೀಟುಗಳ ವರೆಗೆ ನಡೆಯಬಹುದು. ಮೊದಲನೇ ಇಯತ್ತೆಯ ಪಾಠಗಳು ೩೦ ಮಿನೀಟಿನವಿರಬೇಕು. ೨–೩-೪ನೇ ಇಯತ್ತೆಗಳ ಪಾಠಗಳನ್ನು ೩೦ ರಿಂದ ೪೦ ಮಿನೀಟುಗಳ ವರೆಗೆ ಸಾಗಿಸಬೇಕು. ಮೇಲಿನ ಇಯತ್ತೆಗಳ ಪಾಠಗಳು ೫೦ ಮಿ. ವರೆಗೆ ಸಾಗಬಹುದು. ಇದಲ್ಲದೆ ಪ್ರಾತಃಕಾಲದಲ್ಲಿ ಬಾಲಕರ ಮನಸ್ಸು ಪ್ರಸನ್ನವಾಗಿದ್ದಾಗ ಗಣಿತ, ಭೂಮಿತಿ, ವ್ಯಾಕರಣ ಮೊದಲಾದ ಕಠಿಣ ವಿಷಯಗಳನ್ನು ಇಡಬೇಕು. ಮತ್ತು ಇಂಥ ಕಠಿಣ ವಿಷಯಗಳಾದ ನಂತರ ವಾಚನ, ಕವಿತೆ ಮೊದಲಾದ ಮನೋರಂಜಕ ವಿಷಯಗಳನ್ನು ಸೇರಿಸಬೇಕು. ಈ ಪ್ರಕಾರದ ಹೊಂದಿಕೆಯಿಂದ ಬಾಲಕರಿಗೆ ಬೇಸರ ಉಂಟಾಗದೆ ಪ್ರೀತಿಯಿಂದ ಅವರು ಪಾಠ ಕಲಿಯುವರು.

---

## ೯ ಗೃಹಪಾಠಗಳೂ ಪಾಠದ ಟಿಪ್ಪಣೆಯೂ.

ಗೃಹಪಾಠಗಳನ್ನು ಕೊಡುವದರಲ್ಲಿ ಎರಡು ಉದ್ದೇಶಗಳಿರುವವು. (೧) ಮರುದಿವಸದ ಪಾಠಗಳಿಗೆ ಸಹಾಯವಾಗುವಂತೆ ವಿಷಯಗಳನ್ನು ನೋಡಿಕೊಳ್ಳುವದು. (೨) ಹಿಂದೆಕಲಿತ ವಿಷಯಗಳ ಆವರ್ತನೆ ಮಾಡುವದು. ಗೃಹಪಾಠಗಳು ಆದಷ್ಟು ಮಟ್ಟಿಗೆ ಹುಡುಗರ ವಯೋಮಾನಕ್ಕೆ ಅನುಸರಿಸಿ ಇರತಕ್ಕದ್ದು. ೧೨ ವರ್ಷದ ಒಳಗಿನ ಹುಡುಗರಿಗೆ ಒಂದು ತಾಸಿಗಿಂತ ಹೆಚ್ಚು ಅವಧಿಯ ಗೃಹಪಾಠಗಳನ್ನು ಕೊಡಬಾರದು; ಮತ್ತು ಪ್ರಾಥಮಿಕ ಸಾಲೆಯ ಯಾವ ವಯಸ್ಸಿನ ಹುಡುಗನಿಗೂ ಎರಡು

ತಾಸಿಗಿಂತ ಹೆಚ್ಚು ಅವಧಿಯು ಗೃಹಪಾಠವನ್ನು ಕೊಡಲಾಗದು. ಉಳಿದ ಅಭ್ಯಾಸವನ್ನು ಶಾಲೆಯಲ್ಲಿಯೇ ಮಾಡಿಸಬೇಕು. ಹುಡುಗರು ಗೃಹಪಾಠಕ್ಕೆ ಹೆಚ್ಚು ವೇಳೆಯನ್ನು ಕಳೆಯುವಂತೆ ಪಾಲಕರನ್ನು ಮೇಲಿಂದ ಮೇಲೆ ಕೇಳಿ ಎಚ್ಚರಪಡಿಸಬೇಕು. ಮನೆಯಲ್ಲಿ ಸಿದ್ಧಮಾಡತಕ್ಕ ಪಾಠಗಳು ಹುಡುಗರು ಸ್ವಂತ ಶ್ರಮದಿಂದ ಸಿದ್ಧಮಾಡಲಿಕ್ಕೆ ಬರುವಂಥವಿರಬೇಕು. ಗೃಹಪಾಠಗಳು ನಿಶ್ಚಿತವಾದವುಗಳಿರಬೇಕು. ಶಿಕ್ಷಕನಿಗೆ ಗೃಹಪಾಠವನ್ನು ನೋಡಲಿಕ್ಕೆ ಸಾಕಷ್ಟು ಅವಧಿಯು ಇರದಿದ್ದರೆ ವಿದ್ಯಾರ್ಥಿಗಳಿಂದ ಪರಸ್ಪರ ತಪಾಸು ಮಾಡಿಸಬೇಕು. ಶಿಕ್ಷಕನು ವಿಶೇಷ ಗಡಚಾದ ಭಾಗವನ್ನು ಓದಿಸಿ ತಪ್ಪುಗಳನ್ನು ಅಲ್ಲಿಯೇ ತಿದ್ದಬೇಕು. ವಿದ್ಯಾರ್ಥಿಗಳು ತಾವೇ ತಪಾಸು ಮಾಡುವದರಿಂದ ವಿಷಯಗಳ ಪರಿವರ್ತನೆಯಾಗಿ ಅವರಿಗೆ ತಪ್ಪು ಹುಡುಕುವ ಕ್ರಮವು ಗೊತ್ತಾಗುವದು. ಭಾಷಾಂತರ, ಗಣಿತ, ನಿಬಂಧ, ಅರ್ಥವಿವರಣೆ ಈ ವಿಷಯುಗಳನ್ನು ಶಿಕ್ಷಕರೇ ತಪಾಸು ಮಾಡಬೇಕು.

ಪಾಠದ ಟಿಪ್ಪಣಿ—ವಿಷಯ ಮತ್ತು ಶಿಕ್ಷಣಕ್ರಮಗಳಿಗೆ ಸಂಬಂಧಿಸಿದ ಮುಖ್ಯಾಂಶಗಳನ್ನು ಸೂಚಿಸುವಂತೆ ಸಿದ್ಧಪಡಿಸಿದ ಪಾಠದ ನಕಲಿಗೆ ಟಿಪ್ಪಣಿಯೆಂಬ ಹೆಸರು. ಮೊದಲೇ ಆಲೋಚಿಸಿ ಪೂರ್ಣಸಿದ್ಧತೆಯಿಂದ ಪಾಠ ಸಾಗಿಸುವದರಿಂದ ಶಿಕ್ಷಕನ ಶ್ರಮವೂ ವೇಳೆಯೂ ಉಳಿಯುವವು. ಮತ್ತು ಶಿಕ್ಷಣವು ಸಮಾಧಾನಕಾರಕವಾಗಿ ಸಾಗುವದಲ್ಲದೆ ಉತ್ತಮ ಫಲಪ್ರಾಪ್ತಿಯಾಗುವದು. ಮೊದಲು ಸಿದ್ಧಪಡಿಸಿಕೊಳ್ಳದೆ ಪಾಠ ಸಾಗಿಸಿದರೆ ಪಾಠವು ಉದ್ದೇಶರಹಿತವಾಗಿಯೂ ಕ್ರಮರಹಿತವಾಗಿಯೂ ವಿದ್ಯಾರ್ಥಿಗಳ ಯೋಗ್ಯತೆಗೆ ಮೀರಿದ್ದಾಗಿಯೂ ಆಗುವದು. ಶಿಕ್ಷಣದ ತತ್ವಗಳಿಗನುಸಾರವಾಗಿ ಬಾಲಕರ ಮಾನಸಿಕ ಶಕ್ತಿಗಳನ್ನು ಬೆಳಿಸುವಂತೆ ಪಾಠಗಳನ್ನು ಕೊಡುವದು ಅತ್ಯವಶ್ಯವು. ಶಿಕ್ಷಕರು ತಪ್ಪಿಲ್ಲದ ಮತ್ತು ಪೂರ್ಣವಾದ ತಿಳುವಳಿಕೆಯನ್ನು ಪಡೆದಿರಬೇಕು. ಅಂದರೆ ಪಾಠವು ಫಲದಾಯಕವಾಗುವದು. ಮತ್ತು ಅವರ ಮನಃಶಾಂತಿಯೂ ಉತ್ಸಾಹವೂ ಆತ್ಮವಿಶ್ವಾಸವೂ ಹೆಚ್ಚಾಗುವವು. ಬಾಲಕರಾದರೂ ಪಾಠಗಳನ್ನು ಆದರದಿಂದ ಕಲಿಯುವರು. ಪಾಠದ ಉದ್ದೇಶವನ್ನೂ ಕ್ರಮವನ್ನೂ ಅವಶ್ಯವಾದ ಉಪಕರಣಗಳನ್ನೂ ಸಿದ್ಧಮಾಡಿಟ್ಟುಕೊಳ್ಳುವದೇ ಟಿಪ್ಪಣಿಯ ಮೂಲ ಉದ್ದೇಶವು

ಪಾಠಗಳ ಕಾಲವನ್ನು ವಿದ್ಯಾರ್ಥಿಗಳ ವಯೋಮಾನಕ್ಕನುಸರಿಸಿ ಗೊತ್ತುಮಾಡಬೇಕು. ಆದರೂ ಪಾಠಕ್ಕೆ ಹತ್ತುವಕಾಲವು ಶಿಕ್ಷಕರ ಜಾಣ್ಮೆ, ಅನುಭವ, ವಿದ್ಯಾರ್ಥಿಗಳ ಸಂಶಯುವನ್ನು ಪರಿಹರಿಸುವಶಕ್ತಿ ಇವುಗಳನ್ನು ಅವಲಂಬಿಸಿರುತ್ತದೆ. ಟಿಪ್ಪಣಿಯುನ್ನು ಯಾರು ಓದಿದರೂ ಶಿಕ್ಷಕನು ಪಾಠವನ್ನು ಯಾವರೀತಿಯಿಂದ ಸಾಗಿಸುತ್ತಾನೆಂಬದು ತಿಳಿಯಬೇಕು. ಪಾಠನಡೆದಾಗ ಮಾಡತಕ್ಕ ಪ್ರಶ್ನಗಳನ್ನೂ ವಿವರಣೆಗಳನ್ನೂ

ಬರೆಯುವದಲ್ಲದೆ. ಪಾಠನಡೆದಾಗ ಒದಗಬಹುದಾದ ತೊಂದರೆಗಳನ್ನೂ ಅವುಗಳನ್ನು ನಿವಾರಿಸತಕ್ಕ ರೀತಿಯನ್ನೂ ಮೊದಲೇ ಗೊತ್ತು ಮಾಡಿಕೊಂಡಿರಬೇಕು. ಹೀಗೆ ಟಿಪ್ಪಣಿಯನ್ನು ಸಿದ್ಧಪಡಿಸಿದರೆ ಬಾಲಕರಿಗೆ ನಿಶ್ಚಿತವಾದ ತಿಳುವಳಿಕೆಯಾಗುವದು. ಟಿಪ್ಪಣಿಗಳನ್ನು ಸಿದ್ಧಪಡಿಸುವ ವಿಷಯದಲ್ಲಿ ನೆನಪಿಡತಕ್ಕ ಮಹತ್ವದ ಸಂಗತಿಯೇನಂದರೆ ಯಾವ ಶಿಕ್ಷಕನು ಪಾಠವನ್ನು ಕಲಿಸುವನೋ ಅವನೇ ಟಿಪ್ಪಣಿಯನ್ನು ಸಿದ್ಧಮಾಡಿಕೊಳ್ಳಬೇಕು. ಎರಡನೆಯವರು ಬರೆದ ಟಿಪ್ಪಣಿಗಳ ಸಹಾಯದಿಂದ ಪಾಠವನ್ನು ಕಲಿಸಿದರೆ ವಿಷಯ ವಿವರಣೆಯು ಸಮಾಧಾನಕರವಾಗಿ ಆಗುವದಿಲ್ಲ ಪಾಠನಡೆದಾಗ ವಿದ್ಯಾರ್ಥಿಗಳೆದುರಿಗೆ ಮೇಲಿಂದ ಮೇಲೆ ಟಿಪ್ಪಣಿಯನ್ನು ನೋಡಬಾರದು. ಟಿಪ್ಪಣಿಯಲ್ಲಿ ಗೊತ್ತುಪಡಿಸಿದ ಕಾಲದೊಳಗೆ ಪಾಠವನ್ನು ಮುಗಿಸಬೇಕು.

---

## ೧೦ ವಾಚನ.

ವಾಚನದಿಂದ ಮನುಷ್ಯನ ಜ್ಞಾನವು ಪೂರ್ಣತೆಯನ್ನು ಹೊಂದುವದು; ಬರಹದಿಂದ ಅಚ್ಚುಕಟ್ಟುತವು ಉಂಟಾಗುವದು, ಎಂದು ಬೇಕನ್ನನು ಅನ್ನುತ್ತಾನೆ ನಮ್ಮ ಜನರಲ್ಲಿಯಾದರೂ ವಿದ್ವಾಂಸನಿಗೆ ಬಹುಶ್ರುತನೆನ್ನುವರು. ಇದರ ಮೇಲಿಂದ ವಾಚನದ ಮಹತ್ವವು ಜ್ಞಾನಸಂಗ್ರಹದ ವಿಷಯದಲ್ಲಿ ಎಷ್ಟಿರುವದೆಂಬದು ಗೊತ್ತಾಗುವದು. ಸಾಲೆಯಲ್ಲಿ ಕಲಿಸಲ್ಪಡುವ ವಿಷಯಗಳಲ್ಲಿ ವಾಚನವು ಮಹತ್ವದ ವಿಷಯವಾಗಿದೆ. ವಾಚನದಿಂದ ಮನೋಭಾವವನ್ನು ಎರಡನೆಯವರಿಗೆ ಹೇಗೆ ತಿಳಿಸಬೇಕೆಂಬದು ಗೊತ್ತಾಗುವದಲ್ಲದೆ ಕಿವಿಕಣ್ಣುಗಳ ಸಾಮರ್ಥ್ಯವು ಬೆಳೆಯುತ್ತದೆ. ಸ್ಮರಣ, ಕಲ್ಪನಾ, ನಿರ್ಣಯ ಮೊದಲಾದ ಮಾನಸಿಕ ಶಕ್ತಿಗಳ ಬೆಳವಣಿಗೆಗೆ ವಾಚನವು ಒಳ್ಳೇ ಬಲವಾದ ಸಾಧನವಾಗಿದೆ ವಾಚನದಿಂದ ಅನೇಕ ಹೊಸ ಸಂಗತಿಗಳ ಜ್ಞಾನವಾಗುವದರಿಂದ ನಮ್ಮ ಸಾಮಾನ್ಯ ಜ್ಞಾನವು ದಿನದಿನಕ್ಕೆ ಹೆಚ್ಚಾಗುತ್ತ ಹೋಗುತ್ತದೆ. ಮುಖ್ಯವಾಗಿ ಯಾವನೊಬ್ಬ ಮನುಷ್ಯನಿಗೆ ದೊರೆತ ಶಿಕ್ಷಣದ ಪ್ರಮಾಣವು ಅವನ ವಾಚನವನ್ನೇ ಅವಲಂಬಿಸಿರುವದು. ಇದಲ್ಲದೆ ಮನೋರಂಜನಕ್ಕೂ ಸಹ ವಾಚನವು ಅವಶ್ಯವು.

ಪ್ರಾಥಮಿಕ ಶಾಲೆಗಳಲ್ಲಿ ಆರಂಭದ ಬಾಲಕರಿಗೆ ಪುಸ್ತಕವಾಚನವನ್ನು ಪ್ರಾರಂಭಿಸಲಿಕ್ಕೆ ೧ ವರ್ಷದ ಮೇಲೆ ಅವಧಿಯು ಹತ್ತುವದು. ಬಾಲಬೋಧಿನಿಯಲ್ಲಿ ಕೆಲವು ದೋಷಗಳಿದ್ದರೂ ಅದರ ಉಪಯೋಗವನ್ನು ಮಾಡಿಕೊಳ್ಳಬೇಕು. ಇಲ್ಲವೆ ಇದಕ್ಕೂ ಹೆಚ್ಚು ಸಮಾಧಾನಕರವಾದ ಪದ್ಧತಿಯಂದರೆ ಚಿತ್ರಗಳಿಗೆ ಸಂಬಂಧಿಸಿದ ವಾಕ್ಯಗಳನ್ನು ಬರೆದ ಪಟಗಳನ್ನು ಸಿದ್ಧಮಾಡಿಕೊಳ್ಳುವದು. ಅಂದರೆ ಹುಡುಗರು ಕಲಿತ

ಅಕ್ಷರಗಳ ಸಹಾಯದಿಂದ ಬೇರೆ ಬೇರೆ ವಾಕ್ಯಗಳನ್ನು ರಚಿಸಿ ಬಾಲಕರಿಗೆ ವಾಚನದ ರೂಢಿಯಾಗುವಂತೆ ಮಾಡಬಹುದು.

ಇನ್ನು ಈ ವಿಷಯವನ್ನು ಕಲಿಸುವದಾದರೆ ಪದ್ಧತಿಯ ದೃಷ್ಟಿಯಿಂದ ಶಾಲೆಯೊಳಗಿನ ಇಯತ್ತೆಗಳಲ್ಲಿ ಮೇಲಿನ ಹಾಗು ಕೆಳಗಿನವೆಂಬ ೨ ಭಾಗಗಳನ್ನು ಮಾಡತಕ್ಕದ್ದು.

ಮಾದರಿ ವಾಚನ:— ಕೆಳಗಿನ ಇಯತ್ತೆಯೊಳಗಿನ ವಿದ್ಯಾರ್ಥಿಗಳು ಚಿಕ್ಕವರಿರುವ ಕಾರಣ ಅವರಿಗೆ ಶಿಕ್ಷಕರ ಮಾದರಿ ವಾಚನವು ಅತ್ಯವಶ್ಯಕವಾದದ್ದು. ಮಾದರಿ ಕೊಡತಕ್ಕ ವಾಚನಭಾಗವನ್ನು ಶಿಕ್ಷಕನು ಆರಿಸಿಕೊಂಡು ಪಾಠವನ್ನು ಸಿದ್ಧಮಾಡಿಟ್ಟುಕೊಳ್ಳತಕ್ಕದ್ದು. ವಿದ್ಯಾರ್ಥಿಗಳ ವಯಸ್ಸು ಹೆಚ್ಚುಕಡಿಮೆಯಿದ್ದಂತೆ ಮಾದರಿವಾಚನವು ಹೆಚ್ಚುಕಡಿಮೆಯಿರತಕ್ಕದ್ದು. ಮಾದರಿಗಾಗಿ ಶಿಕ್ಷಕನು ಓದಿ ತೋರಿಸಿದ ಕೂಡಲೇ ವಿದ್ಯಾರ್ಥಿಗಳು ಸಾಮೂಹಿಕವಾಗಿ ಅನುಕರಣ ಮಾಡಬೇಕು.

ಸಾಮೂಹಿಕ ವಾಚನ:— ಸಾಮೂಹಿಕ ವಾಚನದ ವಿಷಯದಲ್ಲಿ ೩ ಪ್ರಕಾರಗಳುಂಟು.

(೧) ಶಿಕ್ಷಕನು ಒಂದೊಂದೇ ಶಬ್ದವನ್ನು ಓದಿ ಹೇಳುವದು. ಎಲ್ಲ ವಿದ್ಯಾರ್ಥಿಗಳು ಅದರಂತೆ ಉಚ್ಚರಿಸುವದು. (೨) ಬಾಲಕರಿಗೆ ಅನ್ನಲಿಕ್ಕೆ ಬರುವಂತೆ ವಾಕ್ಯಖಂಡಗಳ ವಾಚನ. (೩) ಆನಂತರ ವಾಕ್ಯಗಳ ಅನುಕರಣ. ಈ ಮೂರು ಭಾಗಗಳಲ್ಲಿ ಮೊದಲನೆಯದು ಬಾಲಕರ ವರ್ಗಕ್ಕೆ ಹಾಗು ೨ನೆಯ ೩ನೆಯ ಭಾಗಗಳು ಕ್ರಮವಾಗಿ ಆದರ ಮುಂದಿನ ವರ್ಗಗಳಿಗೆ ಎಂಬುದು ಸಹಜವಾಗಿಯೇ ತಿಳಿಯುವಂತಿದೆ. ಹೀಗೆ ಸಾಮೂಹಿಕ ವಾಚನವು ನಡೆದಾಗ ಹೆಚ್ಚು ಹುಡುಗರು ವರ್ಗದಲ್ಲಿದ್ದರೆ ಶಿಕ್ಷಕನು ಅವರಲ್ಲಿ ಕೆಲವು ಗುಂಪುಗಳನ್ನು ಮಾಡಬೇಕು. ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಯ ವಾಚನದ ಕಡೆಗೆ ಹೆಚ್ಚು ಲಕ್ಷ್ಯಕೊಡಬೇಕು. ಸಾಮೂಹಿಕ ವಾಚನದ ಕೆಲವು ಗುಣದೋಷಗಳನ್ನು ಕೆಳಗೆ ಕೊಟ್ಟಿದ್ದೇವೆ

ಗುಣಗಳು:—

(೧) ಪ್ರತಿಯೊಬ್ಬ ವಿದ್ಯಾರ್ಥಿಯು ಪಾಠದ ಎಲ್ಲ ಭಾಗವನ್ನು ಒದರಿ ಓದಬೇಕಾಗುವದರಿಂದ ಅವನಿಗೆ ಹೆಚ್ಚು ಕೆಲಸವು ದೊರೆಯುತ್ತದೆ.

(೨) ಮಂದಹುಡುಗರಿಗೆ ಜಾಣ ಹುಡುಗರ ಸಹಾಯವು ದೊರೆತು ಅವರೂ ಜಾಣರಾಗುವರು

(೩) ಅಂಜುಬುರಕ ಹುಡುಗರಲ್ಲಿ ಧೈರ್ಯವೂ ನಂಬಿಗೆಯೂ ಹುಟ್ಟುವವು.

(೪) ಎಲ್ಲ ಹುಡುಗರಲ್ಲಿ ಒಂದೇ ಪ್ರಕಾರದ ಶೈಲಿಯೂ ವೇಗವೂ ರೂಢಿಸುವವು.

(೫) ಉಳಿದ ಹುಡುಗರ ಕೂಡ ಧ್ವನಿಯನ್ನು ಕೂಡಿಸುವದರಿಂದ ವಿದ್ಯಾರ್ಥಿಗಳ ಅಶುದ್ಧೋಚ್ಚಾರವು ತಿದ್ದಲ್ಪಡುತ್ತದೆ.

(೬) ಶಿಕ್ಷಕನ ಅನುಕರಣ ಮಾಡಬೇಕಾದ್ದರಿಂದ ಇಡೀ ವರ್ಗದವರು ಮಾಡುವ ಸಾಮಾನ್ಯ ತಪ್ಪುಗಳಿಗೆ ಆಸ್ಪದವು ದೊರೆಯುವದಿಲ್ಲ.

ದೋಷಗಳುಃ—

(೧) ಸ್ವಾವಲಂಬನಕ್ಕೆ ಉತ್ತೇಜನವಿಲ್ಲ.

(೨) ಗದ್ದಲವುಂಟಾಗಿ ಉಳಿದ ವರ್ಗಗಳ ಅಭ್ಯಾಸಕ್ಕೆ ತೊಂದರೆಯುಂಟಾಗುವದು

(೩) ಶಿಕ್ಷಕನ ಲಕ್ಷ್ಯವು ಕಡಿಮೆಯಾದ ಪ್ರಸಂಗದಲ್ಲಿ ಮೈಗಳ್ಳ ಮತ್ತು ದಡ್ಡ ಹುಡುಗರು ಕೆಲಸವನ್ನು ತಪ್ಪಿಸಿಕೊಳ್ಳುವರು, ಅಥವಾ ಅಶುದ್ಧ ಉಚ್ಚಾರ ಮಾಡುವರು.

(೪) ವಿದ್ಯಾರ್ಥಿಗಳಿಗೆ ಧ್ವನಿತೆಗೆದು ಓದುವ ಚಟವು ಹತ್ತುವ ಸಂಭವವುಂಟು.

(೫) ವ್ಯಕ್ತಿ ವಿಷಯಕ ತಪ್ಪುಗಳನ್ನು ಕಂಡು ಹಿಡಿಯಲಿಕ್ಕೆ ಆಸ್ಪದವಿಲ್ಲ.

(೬) ಭಿನ್ನ ಶೈಲಿ ರುಚಿಗಳಿಗೆ ಉತ್ತೇಜನ ದೊರೆಯುವದಿಲ್ಲ.

ಶಿಕ್ಷಕನ ಕಿವಿಗಳು ಚುರುಕಾಗಿದ್ದರೆ ಹುಡುಗರು ಮಾಡಿದ ತಪ್ಪುಗಳನ್ನು ಅವನು ಕಂಡು ಹಿಡಿಯುವನು. ಮತ್ತು ಅವರನ್ನು ತಿದ್ದುವನು.

ಇನ್ನು ಸಾಮೂಹಿಕ ವಾಚನವು ಮೇಲಿನ ಇಯತ್ತೆಗಳಿಗೆ ಉಪಯುಕ್ತವಲ್ಲ. ಮೌನವಾಚನವನ್ನು ಉಪಯೋಗಿಸುವದು ವಿಹಿತವು.

**ಮೌನವಾಚನ:** — ಶಿಕ್ಷಕನು ತಾನು ಕಲಿಸಿದ ಭಾಗದ ಅರ್ಥವು ಎಷ್ಟರ ಮಟ್ಟಿಗೆ ವಿದ್ಯಾರ್ಥಿಗಳಿಗೆ ತಿಳಿಯಿತೆಂಬನನ್ನು ಪರೀಕ್ಷಿಸುವದಕ್ಕೆ ಇಲ್ಲವೆ ಆ ಭಾಗದ ಅರ್ಥವು ಒಮ್ಮೆಲೇ ತಿಳಿಯಬೇಕೆಂದು ಮೌನವಾಚನವನ್ನು ಮಾಡಿಸಬಹುದು—ಈ ವಾಚನವು ನಡೆದಾಗ ಶಿಕ್ಷಕನ ಲಕ್ಷ್ಯವುಮಾತ್ರ ಸಂಪೂರ್ಣವಾಗಿರಬೇಕು. ಮತ್ತು ತನ್ನ ಮನವರಿಕೆಯಾಗುವದಕ್ಕೆ ಕೆಲವು ಪ್ರಶ್ನೆಗಳನ್ನು ಮಾಡತಕ್ಕದ್ದು. ಮೌನವಾಚನದಿಂದ ಮುಂದೆ ಬರೆದ ಲಾಭಗಳಾಗುತ್ತವೆ.

(೧) ವಿದ್ಯಾರ್ಥಿಗಳ ಮುಂದಿನ ಆಯುಷ್ಯದಲ್ಲೆಲ್ಲ ಮೌನವಾಚನವೇ ಉಪಯುಕ್ತವಾಗಿರುವದರಿಂದ ಇದು ಬಹಳ ಮಹತ್ವದ್ದಾಗಿದೆ. ಅಲ್ಲದೆ ಈ ವಾಚನದಿಂದ ವಿದ್ಯಾರ್ಥಿಗಳಲ್ಲಿ ವಾಚನಾಭಿರುಚಿಯುಂಟಾಗುತ್ತದೆ.

(೨) ಈ ವಾಚನವು ನಡೆದಾಗ ಎರಡನೆಯ ಯಾವ ವ್ಯಾಪಾರದಲ್ಲಿಯೂ ವಿದ್ಯಾರ್ಥಿಗಳ ಮನಸ್ಸು ತೊಡಗಿರುವದಿಲ್ಲ. ಆದ್ದರಿಂದ ಓದಿದ ಭಾಗದಲ್ಲಿದ್ದ ಸೂಕ್ಷ್ಮ ವಿಚಾರವು ಮನಸ್ಸಿನಲ್ಲಿ ಇಳಿಯುವದು.

(೩) ಗ್ರಂಥಕರ್ತನ ಅಭಿಪ್ರಾಯವನ್ನು ತಿಳಕೊಳ್ಳುವ ವಿಷಯದಲ್ಲಿ ವಿದ್ಯಾರ್ಥಿಗಳು ಸ್ವಾವಲಂಬಿಗಳಾಗುವರು.

(೪) ಇದರಿಂದ ಹೆಚ್ಚು ಭಾಗವನ್ನು ಓದಿಕೊಳ್ಳುವದಕ್ಕೆ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತದೆ.

ಈ ರೀತಿಯಾಗಿ ಇಡೀ ಪಾಠದ ಅಥವಾ ಅದರ ಕೆಲವೊಂದು ಭಾಗದ ಭಾವವನ್ನು ತಿಳಕೊಳ್ಳುವದಕ್ಕೆ ಮೌನವಾಚನವು ಮೇಲಾದ ಸಾಧನವಾಗಿರುವಂತೆ ಶಬ್ದಾರ್ಥ ವಾಕ್ಯಾರ್ಥಗಳಾದರೂ ಬೇಕು. ಅರ್ಥದ ವಿಷಯವಾಗಿ ಸೂಚನೆಗಳನ್ನು ಕೆಳಗೆ ಕೊಟ್ಟಿದೆ.

(೧) ವಿಷಯವು ಸುಲಭ ಅಥವಾ ಕಠಿಣವಿದ್ದಂತೆ ಅರ್ಥವಿವರಣೆಯನ್ನು ಕಡಿಮೆಯಾಗಲಿ ಹೆಚ್ಚಾಗಲಿ ಮಾಡಬೇಕಾಗುವದು. ಉದಾ:—ಬ್ರಹ್ಮಸೂತ್ರದ ಅತಿಸಣ್ಣ ಸೂತ್ರಕ್ಕೆ ಬಹಳ ದೊಡ್ಡ ಟೀಕೆಯು ಬೇಕಾಗುವದು.

(೨) ವಾಕ್ಯಾರ್ಥಗಳನ್ನು ಅಚ್ಚುಕಟ್ಟಾಗಿ ಹೇಳಿ ಬರಿಸುವ ಪದ್ಧತಿಯು ಪ್ರಾಥಮಿಕ ಶಾಲೆಗಳಲ್ಲಿ ತಕ್ಕಷ್ಟು ರೂಢವಾಗಿಲ್ಲ. ಬರೇ ಕಠಿಣಶಬ್ದಗಳಿಗೆ ಅರ್ಥವನ್ನು ಹೇಳುವದರಿಂದ ವಾಕ್ಯದ ಇಂಗಿತವು ತಿಳಿಯುವದಿಲ್ಲ. ಆದ್ದರಿಂದ ವಾಕ್ಯಾರ್ಥವನ್ನು ಸರಿಯಾಗಿ ಹೇಳುತ್ತಿರಬೇಕು. ಕಠಿಣಶಬ್ದಗಳ ಅರ್ಥವನ್ನು ಸೂಚಕ ಪ್ರಶ್ನಗಳಿಂದಾಗಲಿ ಶಬ್ದಕೋಶಗಳ ಸಹಾಯದಿಂದಾಗಲಿ ಹೊರಡಿಸತಕ್ಕದ್ದು. ಮತ್ತು ಅಂಥ ಅರ್ಥವು ಮೂಲಶಬ್ದಕ್ಕಿಂತ ಸುಲಭವಾಗಿರಬೇಕಲ್ಲದೆ ನಿಶ್ಚಿತವಾದದ್ದೂ ಸಂಕ್ಷಿಪ್ತವಾದದ್ದೂ ಇರಬೇಕು. ಶಬ್ದದ ವ್ಯುತ್ಪತ್ತಿಯಂತೆ ಅರ್ಥವನ್ನು ಹೇಳಿದಮೇಲೆ ಸಂದರ್ಭಕ್ಕೆ ಅನುಸರಿಸಿ ಯಾವ ಅರ್ಥವು ಯುಕ್ತವೆಂಬವನ್ನು ಹೇಳಬಹುದು. ಇಂಥ ಶಬ್ದಗಳು ಸಾಮಾನ್ಯವಾಗಿ ಪಾಠದಲ್ಲಿ ೩।೪ ಇರಬಹುದು. ಸುಮ್ಮನೆ ಎಲ್ಲ ಶಬ್ದಗಳ ಅರ್ಥವನು ಹೇಳುವದು ತಪ್ಪು.

## ೧೧ ವ್ಯಾಕರಣ.

ವ್ಯಾಕರಣವನ್ನು ಕಲಿಸುವ ಮೂಲ ಉದ್ದೇಶವು ಬಾಲಕರಿಗೆ ಶುದ್ಧವಾಗಿ ಮಾತಾಡಲಿಕ್ಕೂ ಬರೆಯಲಿಕ್ಕೂ ಬರುವದು ಆಗಿರುವದು. ಈ ಉದ್ದೇಶವು ಕೊನೆಗಾಣಬೇಕಾದರೆ ವ್ಯಾಕರಣವು ಸ್ವತಂತ್ರ ವಿಷಯವೆಂದು ತಿಳಿಯದೆ ಭಾಷಾವಿಷಯದ ಪಾಠ ನಡೆದಾಗ ಈ ವಿಷಯದ ವಿಚಾರವನ್ನು ತಪ್ಪದೇ ಮಾಡುತ್ತಿರಬೇಕು. ಅವಶ್ಯವಿದ್ದಲ್ಲಿ

ಬಿನ್ ಇಯತ್ತೆಯಿಂದ ಕೆಲಕೆಲವು ಸಂಗತಿಗಳನ್ನು ಗೊತ್ತುಮಾಡಿಕೊಡುತ್ತ ಹೋಗ ಬೇಕು. ಉದಾ—ಹ್ರಸ್ವ. ದೀರ್ಘ, ಮಹಾಪ್ರಾಣ, ಅಲ್ಪಪ್ರಾಣ. "ಇನ್ನೇ ಇಯತ್ತೆಗೆ ವ್ಯಾಕರಣ ವಿಷಯವುಂಟು. ಅದೇ ಇಯತ್ತೆಯಲ್ಲಿಯೇ ಪ್ರಾರಂಭಿಸಬೇಕು. ಅದಕ್ಕೂ ಮೊದಲು ಪ್ರಾರಂಭಮಾಡುವದು ಅವಶ್ಯವಲ್ಲ" ಎಂಬ ಮಾತು ತೀರ ತಪ್ಪಾದದ್ದು. ಇನ್ನು ಅರ್ಥವನ್ನು ತಿಳಕೊಳ್ಳಲಿಕ್ಕೆ ವ್ಯಾಕರಣದ ಸಹಾಯವೂ ವ್ಯಾಕರಣವನ್ನು ತಿಳಕೊಳ್ಳಲಿಕ್ಕೆ ಅರ್ಥದ ಸಹಾಯವೂ ಬೇಕು. ಆದ್ದರಿಂದ ಈ ವಿಷಯವನ್ನು ಪ್ರಾಥಮಿಕ ಶಾಲೆಯಲ್ಲಿ ಮೊದಲಿನಿಂದಲೇ ಪ್ರಾರಂಭಿಸಬೇಕು. ಮೊದಲು ಬಾಲಕರು ನಾಮ, ಕ್ರಿಯಾಪದ ಇವುಗಳನ್ನು ಗುರ್ತಿಸಲಿಕ್ಕೆ ಸಮರ್ಥರಾದರೆ ಸಾಕು. ಅನೇಕ ಉದಾಹರಣೆಗಳಿಂದ ಇವುಗಳ ರೂಢಿಯಾದ ನಂತರ ವಿಶೇಷಣ, ಕ್ರಿಯಾವಿಶೇಷಣ (ಅವ್ಯಯ) ಇವುಗಳನ್ನು ಗೊತ್ತು ಹಿಡಿಯಲಿಕ್ಕೆ ಹಚ್ಚಬೇಕು. ವಿಶೇಷಣವೆಂದರೆ ವಿಶೇಷಪ್ರಕಾರವನ್ನು ತೋರಿಸುವ ಶಬ್ದವು. ಇದನ್ನು ನಾಮಪದಗಳಿಗೆ ಅನ್ವಯಿಸುವದು ಸಾಮಾನ್ಯವು. ಇನ್ನು ಕ್ರಿಯಾಪದಗಳ ವರ್ಣನೆಯನ್ನು ಮಾಡುವದಕ್ಕೆ ಉಪಯೋಗಿಸುವ ಶಬ್ದಗಳಿಗೆ ಕ್ರಿಯಾವಿಶೇಷಣ ಅಥವಾ ಅವ್ಯಯವೆಂದೆನ್ನುವರು. ಮುಖ್ಯವಾಗಿ ವಾಕ್ಯದಲ್ಲಿ ನಾಮ, ಕ್ರಿಯಾಪದ, ವಿಶೇಷಣ, ಕ್ರಿಯಾವಿಶೇಷಣ ಇವುಗಳ ಕಾರ್ಯಗಳೇನೆಂಬದನ್ನು ಹುಡುಕಲಿಕ್ಕೆ ಹಚ್ಚಿ ಒಂದೊಂದೇ ಶಬ್ದವನ್ನು ಬಿಡುವದರಿಂದ ವಾಕ್ಯದ ಸ್ವರೂಪವು ಹ್ಯಾಗಾಗುತ್ತದೆಂಬದನ್ನು ಬಾಲಕರ ನಿದರ್ಶನಕ್ಕೆ ತಂದು ಕೊಡಬೇಕು. ಆದಷ್ಟುಮಟ್ಟಿಗೆ ವಾಚನ ಅಥವಾ ಕವಿತೆಯ ಪುಸ್ತಕವನ್ನು ಬಾಲಕರ ಕೈಯಲ್ಲಿ ಕೊಟ್ಟು ಗ್ರಂಥದ ಮೇಲಿಂದ ಪ್ರತಿಯೊಂದು ಶಬ್ದದ ವ್ಯಾಕರಣವನ್ನು ಮೇಲೆ ಹೇಳಿದ ಸೂಚನೆಗಳಂತೆ ಮಾಡುಸುತ್ತ ಹೋದರೆ ಈ ವಿಷಯವು ಕಠಿಣವಲ್ಲೆಂಬದು ಗೊತ್ತಾಗುವದು. ಈಗ ರೂಢವಾಗಿದ್ದ ಪದ್ಧತಿಯಂತೆ ವ್ಯಾಖ್ಯೆಗಳನ್ನೂ ಪ್ರಕಾರಗಳನ್ನೂ ಒಮ್ಮೆಲೆ ಕಲಿಸುವದರಿಂದ ಬಾಲಕರಿಗೆ ಶಬ್ದಗಳೊಳಗಿನ ಸೂಕ್ಷ್ಮಭೇದವು ತಿಳಿಯದೆ ಅವರು ಉದಾಸೀನರಾಗುವರು. ಕಾರಣ ಒಂದೊಂದೇ ಭಾಗದ ಪೂರ್ಣ ವಿಚಾರವಾದ ಮೇಲೆ ಮತ್ತೊಂದು ಭಾಗದ ವಿಚಾರಮಾಡಬೇಕು. ನಾಮದಲ್ಲಿ ಕೆಲವು ಪ್ರಕಾರಗಳು ಅವೆ ಎಂಬದು ಬಾಲಕರಿಗೆ ತಿಳಿದ ಬಳಿಕ ವಸ್ತುವಾಚಕ ಮತ್ತು ವ್ಯಕ್ತಿವಾಚಕವೆಂಬ ಪ್ರಕಾರವನ್ನು ತಿಳಿಸಿಕೊಡಬೇಕು. ವಸ್ತುಗಳನ್ನು ತೋರಿಸುವ ನಾಮಗಳಿಗೆ ರೂಢನಾಮಗಳೆಂತಲೂ ವ್ಯಕ್ತಿಗಳ ಹೆಸರುಗಳನ್ನು ತೋರಿಸುವ ನಾಮಗಳಿಗೆ ಅಂಕಿತ ನಾಮಗಳೆಂತಲೂ ಅನ್ನುವರು. ಇದಲ್ಲದೆ ಭಾವ ಅಂದರೆ ಮನಸ್ಸಿನ ವ್ಯಾಪಾರ, ಸುಖ, ದುಃಖ, ಧೈರ್ಯ, ಸಾಹಸ ಮೊದಲಾದವು, ಮತ್ತು ಗುಣ ಅಂದರೆ ಕಳ್ಳತನ, ಕಠಿಣತ್ವ ಮೊದಲಾದವು ಇವುಗಳನ್ನು ತೋರಿಸುವ ನಾಮಗಳಿಗೆ ಭಾವವಾಚಕವೆಂದು ಅನ್ನುವರು ಎಂಬದಾಗಿ ಹೇಳಿದರೆ ಸಾಕು. ಅನ್ವರ್ಥಕನಾಮಗಳು ತೀರ ಕಡಿಮೆ.

ಮತ್ತು ಅವುಗಳನ್ನು ರೂಢನಾಮುಗಳಲ್ಲಿ ಎಣಿಸಲಿಕ್ಕೆ ಬರುವಂತೆ ಇದ್ದರೂ ಶಿಕ್ಷಕರು ಬಾಲಕರಿಗೆ ಈ ಒಳಭೇದದ ಹೆಸರನ್ನು ಹೇಳುವದರಿಂದ ಅವರು ಪ್ರತಿಯೊಂದು ಪ್ರಕಾರದ ನಾಮಕ್ಕೆ ಅನ್ವರ್ಥಕವೆಂದು ತಪ್ಪು ತಿಳುವಳಿಕೆಯಿಂದ ಕರೆಯುವರು. ಇದು ಪ್ರೌಢ ಶಬ್ದವೆಂದು ಬಾಲಕರಿಗೆ ಮೋಹವುಂಟಾಗಿ ಹೀಗಾಗುವದು. ಕಾರಣ ಶಿಕ್ಷಕರು ಈ ಹೆಸರನ್ನು ಹೇಳದಿರುವದು ಲೇಸು. ಬಾಲಕರು ಮುಖ್ಯ ಪ್ರಕಾರಗಳನ್ನು ಗೊತ್ತು ಹಚ್ಚಲಿಕ್ಕೆ ಸಮರ್ಥರಾದ ಬಳಿಕ ವಿಭಕ್ತಿ ಮತ್ತು ಕಾರಕಾರ್ಥಗಳನ್ನು ಹೇಳ ಬೇಕು. ಮೊದಲು ಪ್ರಥಮೆ, ದ್ವಿತೀಯೆ ಇವುಗಳ ಕಾರ್ಯವನ್ನು ಹೇಳಬೇಕು. ವಾಕ್ಯದಲ್ಲಿ ಪ್ರಥಮೆಯಲ್ಲಿದ್ದ ಒಂದು ನಾಮವಾದರೂ ಇರುವದು. ದ್ವಿತೀಯಾ ವಿಭ ಕ್ತಿಯಲ್ಲಿದ್ದ ನಾಮವು ಕೆಲವು ವಾಕ್ಯಗಳಲ್ಲಿ ಮಾತ್ರ ಕಂಡು ಬರುವದು. ಆಮೇಲೆ ಕ್ರಮವಾಗಿ ಒಂದೊಂದೇ ವಿಭಕ್ತಿಯ ವಿಚಾರವನ್ನು ಮಾಡಬೇಕು. ರೂಪಸಾಮ್ಯದಿಂದ ತೃತೀಯಾ ಪಂಚಮಿ ವಿಭಕ್ತಿಗಳಲ್ಲಿ ಭೇದವನ್ನು ಕಲ್ಪಿಸುವದು ಬಾಲಕರಿಗೆ ಕಠಿಣವಾ ಗುವದು. ಅರ್ಥಭೇದದಿಂದ (ಕಾರಕಾರ್ಥ) ಇವನ್ನು ಗೊತ್ತುಮಾಡಿಕೊಳ್ಳುವದು ಅವಶ್ಯವೆಂಬವನ್ನು ಬಾಲಕರಿಗೆ ಹೇಳಬೇಕು. ವ್ಯಾಕರಣದಲ್ಲಿ ರೂಪಕ್ಕಿಂತಲೂ ಅರ್ಥಕ್ಕೆ ಹೆಚ್ಚು ಮಹತ್ವವುಂಟೆಂಬದನ್ನು ಮರೆಯಲಾಗದು. ತೃತೀಯಾ ವಿಭಕ್ತಿಯು ಸಾಧನ ವನ್ನು ತೋರಿಸುವದು ಪಂಚಮಿಯು ಅಗಲುವವನ್ನು ತೋರಿಸುವದು. ಉದಾ—ನಾನು ರಾಮನಿಂದ ೫೦ ರೂಪಾಯಿಗಳನ್ನು ಇಸಕೊಂಡೆನು. ಇಲ್ಲಿ ರಾಮನು ೫೦ ರೂ. ಗಳನ್ನು ಬಿಟ್ಟುಕೊಡಬೇಕಾಯಿತು. ಚತುರ್ಥಿ, ಷಷ್ಠಿ, ಸಪ್ತಮಿ ಈ ವಿಭಕ್ತಿಗಳನ್ನು ನಂತರ ಹೇಳಬೇಕು. ಇವರಂತೆಯೇ ಸರ್ವನಾಮದ ಪ್ರಕಾರಗಳನ್ನೂ ಹೇಳಬಹುದು. ಅವರಲ್ಲಿ ಪುರುಷವಾಚಕ, ಪ್ರಶ್ನಾರ್ಥ , ಸಂಬಂಧವಾಚಕಗಳೆಂಬ ಭಾಗಗಳನ್ನು ಹೇಳಿ ದರೆ ಸಾಕು. ವಿಶೇಷಣದ ಪ್ರಕಾರಗಳನ್ನು ಆಯಾಶಬ್ದಗಳು ತೋರಿಸುವ ಗುಣ, ಸಂಖ್ಯಾ ಮೊದಲಾದವುಗಳಿಂದ ಗೊತ್ತುಪಡಿಸಿವ್ಸಾರೆ. ಇನ್ನು ಕ್ರಿಯಾಪದದಲ್ಲಿ ಮುಖ್ಯ ಕ್ರಿಯಾಪದ, ಕ್ರಿಯಾಪದಪರೂಪ ಎಂದು ಎರಡು ಭೇದಗಳು. ಮುಖ್ಯಕ್ರಿಯಾಪದಗ ಳಲ್ಲಿ ಸಕರ್ಮಕ, ಅಕರ್ಮಕ ಎಂದು ಎರಡು ಪ್ರಕಾರಗಳು. ಆಮೇಲೆ ಕಾಲಗಳ ವಿಚಾರವನ್ನು ಮಾಡಬೇಕು. ವರ್ತಮಾನ, ಭೂತ, ಭವಿಷ್ಯ ಎಂಬ ಮೂರು ಕಾಲ ಗಳ ನಿಶ್ಚಿತಾರ್ಥವನ್ನು ಬಾಲಕರು ತಿಳಿದುಕೊಂಡರೆ ಸಾಕು.

ಇನ್ನು ಅಪೂರ್ಣಕ್ರಿಯಾಪದ ಅಥವಾ ಕ್ರಿಯಾಪದದ ರೂಪಗಳ ವಿಷಯಕ್ಕೆ ವಿಚಾರಮಾಡಿದರೆ ಅವುಗಳಲ್ಲಿ ಕೆಲವು ಅರ್ಥಭೇದದಿಂದ ವಿಶೇಷಣಗಳಂತೆಯೂ ಕೆಲವು ನಾಮಗಳಂತೆಯೂ ಉಪಯೋಗಿಸಲ್ಪಡುವವೆಂಬದು ಉದಾಹರಣೆಗಳಿಂದ ಗೊತ್ತಾಗು ವದು. ಹ್ಯಾಗಂದರೆ ಗುರುಗಳಿಂದ ದೊರೆತ ವಿದ್ಯೆಯು ಈ ವಾಕ್ಯಾಂಶದಲ್ಲಿ ದೊರೆತ ಇದು ವಿಶೇಷಣದಂತೆ ಉಪಯೋಗಿಸಲ್ಪಟ್ಟಿದೆ. ನಾವು ಆರೋಗ್ಯವನ್ನು ಕಾಯ್ದು

ಕೊಂಡು ಶರೀರವನ್ನು ಸುದೃಢವಾಗಿಡುವದು ನನ್ನ ಕರ್ತವ್ಯವು. ಈ ವಾಕ್ಯದಲ್ಲಿ ಕಾಯ್ದುಕೊಂಡು ಇದು ಅವ್ಯಯದಂತೆಯೂ ಇಡುವದು ಇದು ನಾಮದಂತೆಯೂ ಉಪಯೋಗಿಸಲ್ಪಟ್ಟಿವೆ. ಮತ್ತೊಂದು ವೈಲಕ್ಷಣ್ಯವೇನಂದರೆ—ಈ ಅಪೂರ್ಣರೂಪಗಳಿಗೆ ಕರ್ತೃ, ಕರ್ಮಗಳು ಸಹ ಇರುವವು.

ಇನ್ನು ವಾಕ್ಯಗಳಲ್ಲಿ ಬರತಕ್ಕ ಸಂಧಿಗಳ ವಿಷಯಕ್ಕೆ ವಿಚಾರಿಸುವ. ಕವಿತೆಯಲ್ಲಿ ಶಬ್ದಗಳನ್ನು ಬಿಡಿಸುವಾಗ ಮತ್ತು ಕೂಡಿಸುವಾಗ ಆಗುವ ಹೆಚ್ಚುಕಡಿಮೆಗಳನ್ನು ೨ನೇ ಇಯತ್ತೆಯ ಬಾಲಕರುಸಹ ನಿರೀಕ್ಷಿಸುವರು. ಅದೇ ಚಟವನ್ನು ಬೆಳಿಸಿದರೆ ೩ನೇ ಇಯತ್ತೆಯಲ್ಲಿ ಬಾಲಕರು ಸಂಧಿಯಿಂದ ಉಂಟಾದ ಹೆಚ್ಚುಕಡಿಮೆಗಳನ್ನು ತಟ್ಟನೆ ಹೇಳುವರು, ಶಿಕ್ಷಕರು ಎಲ್ಲ ಸಂಗತಿಗಳನ್ನು ತಾವೇ ಹೇಳುವ ಮೋಹವನ್ನು ಬದಿಗೊತ್ತಿ ಬಾಲಕರ ಸ್ವಂತಪ್ರಯತ್ನಕ್ಕೆ ಉತ್ತೇಜನಕೊಟ್ಟರೆ ಈ ಸಂಗತಿಗಳು ಅವರಿಗೆ ಸಹಜವಾಗಿ ತಿಳಿಯುವವು. ಪದ್ಯಪುಸ್ತಕಗಳಲ್ಲಿ ಸಂಧಿಯಿದ್ದಲ್ಲಿ ಶಬ್ದಗಳಮೇಲೆ ಟಿಪ್ಪುಗಳಿರುವವು. ಅವುಗಳ ಸಹಾಯದಿಂದ ಶಬ್ದಗಳನ್ನು ವಿಂಗಡಿಸುವದು ದುಸ್ತರವಾಗಲಾರದು. ಕನ್ನಡದಲ್ಲಿ ಲೋಪ, ಆಗಮ, ಆದೇಶ ಎಂಬವು ಮುಖ್ಯಸಂಧಿಗಳೆಂಬದನ್ನು ೩ನೇ ಇಯತ್ತೆಯ ಬಾಲಕರಿಗೆ ಹೇಳಬಹುದು. ಸಂಸ್ಕೃತಸಂಧಿಗಳು ೪ನೇ ಇಯತ್ತೆಯ ಕವಿತಾಪಾಠಗಳಲ್ಲಿ ಇರುವದರಿಂದ ಸವರ್ಣದೀರ್ಘ, ಯಣ್ ಗುಣ ಎಂಬ ಸಂಧಿಗಳ ಶಬ್ದಾರ್ಥವನ್ನು ಚನ್ನಾಗಿ ತಿಳಿಸಿ ಅವುಗಳಲ್ಲಿಯ ಭೇದಗಳನ್ನು ಸ್ಪಷ್ಟೀಕರಿಸಬೇಕು.

ಇನ್ನು ಬಾಲಕರು ಮೇಲಿನ ಇಯತ್ತೆಗಳಿಗೆ ಹೋದಂತೆ ಸಮಾಸದ ವಿಚಾರವನ್ನು ಮಾಡಬೇಕಾಗುವದು. ಕನ್ನಡದಲ್ಲಿ ಅನೇಕ ಸಂಸ್ಕೃತ ಶಬ್ದಗಳನ್ನು ಉಪಯೋಗಿಸುವದರಿಂದ ಈ ಸಂಧಿ—ಸಮಾಸಗಳನ್ನು ಅರಿತುಕೊಳ್ಳುವದು ಅವಶ್ಯವದೆ. ಕನ್ನಡದಲ್ಲಿ ರೂಢಿಕೆಯ ಸಮಾಸಗಳೆಂದರೆ ಲುಕ್, ಅಲುಕ್, ಕ್ರಿಯಾ. ಸಂಸ್ಕೃತದ ಸಮಾಸಗಳೆಂದರೆ ತತ್ಪುರುಷ, ಕರ್ಮಧಾರಯ, ಬಹುವ್ರೀಹಿ, ಉಳಿದ ಸಮಾಸಗಳನ್ನು ಕನ್ನಡದಲ್ಲಿ ಉಪಯೋಗಿಸುವದು ಕಡಿಮೆಯಾದ್ದರಿಂದ ಅವುಗಳನ್ನು ಬಿಡಬಹುದು.

---

## ೧೨ ಬರಹ.

೧. ಕಲ್ಪನೆಗಳು ಶಾಶ್ವತವಾಗಿ ಉಳಿಯುವಂತೆ ಮಾಡುವದಕ್ಕೂ ಅವುಗಳನ್ನು ಎರಡನೆಯವರಿಗೆ ತಿಳಿಸಲಿಕ್ಕೂ ಬರಹವು ಮುಖ್ಯ ಸಾಧನವಾಗಿದೆ. ಬರಹದಿಂದ ವಿಚಾರದಲ್ಲಿ ಅಚ್ಚುಕಟ್ಟುತನವು ಉಂಟಾಗುತ್ತದೆ. ವ್ಯವಹಾರಕ್ಕೆ ಸುವಾಚ್ಯಲೇಖನವು ಅವಶ್ಯವಾದದ್ದು. ವ್ಯಾಪಾರಸ್ಥರಲ್ಲಿ ಲೆಕ್ಕಪತ್ರಗಳನ್ನು ಇಡಲಿಕ್ಕೂ ಪತ್ರವ್ಯವಹಾರ ಮಾಡಲಿಕ್ಕೂ ತಕ್ಕವನಾದವನಿಗೆ ಚಾಕರಿಯು ದೊರೆಯುವದುಂಟು. ಅಭ್ಯಾಸದಲ್ಲಿ ಬಾಲಕರ ಪ್ರಗತಿಯು ಎಷ್ಟಾಗಿದೆಂಬದನ್ನು ನೋಡುವದಕ್ಕೆ ಬರಹವು ಮುಖ್ಯ ಸಾಧನವು. ಬರಹದಿಂದ ವಿದ್ಯಾರ್ಥಿಗಳಲ್ಲಿ ಅಚ್ಚುಕಟ್ಟುತನವೂ, ವ್ಯವಸ್ಥೆಯೂ, ದೃಢನಿಶ್ಚಯವೂ ಉಂಟಾಗುವವು. ವಿದ್ಯಾರ್ಥಿಗಳ ಬರಹದ ಕೆಲಸದ ಮೇಲಿಂದ ಸಾಲೆಯ ಸ್ಥಿತಿಯನ್ನು ತಿಳಿದುಕೊಳ್ಳಬಹುದು.

೨. ಬರಹದ ಪಾಠಗಳು—ಸಾಲೆಯಲ್ಲಿ ಕಲಿಸತಕ್ಕ ವಿಷಯಗಳಲ್ಲಿ ಬರಹವು ಅತಿ ಸುಲಭವಾದದ್ದು. ಬರಹದ ವಿಷಯವನ್ನು ವಾಚನಕ್ಕೂ ಚಿತ್ರಕಲೆಗೂ ಸಂಬಂಧಿಸಿ ಕಲಿಸಬೇಕು. ಬಾಲಕರ ವರ್ಗದಲ್ಲಿ ಅಕ್ಷರಗಳನ್ನು ಗುಂಪುಗಳಂತೆ ಕಲಿಸುವದು ರೂಢವಾಗಿದೆ. ರೂಪಸಾಮ್ಯದಿಂದ ಈ ಗುಂಪುಗಳನ್ನು ಕಲ್ಪಿಸಿರುವದರಿಂದ ಬಾಲಕರಿಗೆ ಅಕ್ಷರಗಳನ್ನು ಬೇಗನೆ ಕಲಿಯುವದಕ್ಕೆ ಅನುಕೂಲವಾಗುವದು. ಬಾಲಬೋಧಿನಿಯಲ್ಲಿ ಕೊಟ್ಟ ಗುಂಪುಗಳು ಕೆಲಮಟ್ಟಿಗೆ ಅಕ್ರಮವಾಗಿ ಹೊಂದಿಸಲ್ಪಟ್ಟಿದ್ದರೂ ಅವುಗಳನ್ನು ಕಲ್ಪಿಸುವದರಲ್ಲಿರುವ ತತ್ವವು ಯೋಗ್ಯವಾಗಿರುವದು. ಗುಂಪುಗಳ ನಡುವೆ ಸ್ವರಗಳಿಂದ ಕೂಡಿದ ಕಾಗುಣಿತಗಳನ್ನು ಮನಸ್ಸಿಗೆ ಬಂದಂತೆ ಕಲಿಸುವದು ವಿಸಂಗತವು. ಎಲ್ಲ ಮೂಲಾಕ್ಷರಗಳು ಮುಗಿದ ಮೇಲೆ ಕ್ರಮವಾಗಿ 'ಆ' 'ಇ' 'ಈ' ಹೀಗೆ ಒಂದೊಂದೇ ಸ್ವರದಿಂದ ಕೂಡಿದ ಕಾಗುಣಿತಗಳನ್ನು ಕಲಿಸುವದು ಸಯುಕ್ತಿಕವಾದದ್ದು. ಆದಕಾರಣ ಕೆಳಗೆ ತೋರಿಸಿದಂತೆ ಗುಂಪುಮಾಡಿ ಕಲಿಸುವದು ಸುಲಭವೆಂದು ಕಂಡುಬರುವದು.

೧ನೇ ಗುಂಪು—ರ, ಠ, ಈ, ಕ,
೨ „ ಝ, ಹ, ಯ,
೩ „ ಲ, ಳ, ಉ, ಊ, ಗ,
೪ „ ಅ, ಆ ತ,
೫ „ ಇ, ಞ, ಣ, ಟ,
೬ „ ದ, ಧ, ಥ, ಡ, ಢ,
೭ „ ಎ. ಏ, ಐ, ವ.
೮ „ ಪ, ಫ, ಮ, ಛ, ಷ, ಘ

೯ ,, ನ, ಸ,
೧೦ ,, ಒ, ಓ, ಔ, ಐ,
೧೧ ,, ಬ, ಭ, ಜ, ಚ,
೧೨ ,, ಖ, ಋ, ೠ, ಶ,

ಟೀಪು—'ಗ' ಈ ಅಕ್ಷರವು 'ಲ' ವನ್ನು ಬುಡಮೇಲಮಾಡಿ ಬರೆಯುವದರಿಂದಲೂ 'ಟ' ಅಕ್ಷರವು 'ಣ' ವನ್ನು ಬುಡಮೇಲು ಮಾಡುವದರಿಂದಲೂ ಆಗುವವು.

೩. ಬಾಲಕರಿಗೆ ಸುವಾಚ್ಯವಾದ ಸಣ್ಣ ಅಕ್ಷರಗಳನ್ನು ಬರೆಯಲಿಕ್ಕೆ ಬರುವಂತೆ ಮಾಡುವದೇ ಲೇಖನಶಿಕ್ಷಣದ ಮುಖ್ಯ ಉದ್ದೇಶವು. ಈ ಉದ್ದೇಶವು ಈಡೇರುವಂತೆ ಕೆಳಗಿನ ಸೂಚನೆಗಳನ್ನು ಅನುಲಕ್ಷಿಸತಕ್ಕದ್ದು:—

೧. ಒಂದೇ ತರದ ಅಕ್ಷರಗಳನ್ನು ಸಾಲೆಯು ಎಲ್ಲ ವರ್ಗಗಳಲ್ಲಿ ಬರೆಯಿಸಬೇಕು. ಕನ್ನಡದಲ್ಲಿ ಅಕ್ಷರಗಳನ್ನು ದುಂಡಗೆ ಛಾಪೀ ಅಕ್ಷರಗಳಂತೆ ಬರೆದರೆ ಉತ್ತಮವೆಂದು ತಿಳಿಯಲ್ಪಡುವದು.

೨ ಮಾದರಿಗಾಗಿ ಬರೆಯುವ ಅಕ್ಷರಗಳು ಉತ್ತಮವಾದವಿರಬೇಕು. ಎಲ್ಲ ಪಾಠಗಳ ಬರವಣಿಗೆಯು ಇದೇ ಪ್ರಕಾರದ್ದಿರಬೇಕು. ಪ್ರತಿಯೊಬ್ಬ ವಿದ್ಯಾರ್ಥಿಗೆ ಇಂಥ ಕಿತ್ತೆಗಳನ್ನು ಬರೆದುಕೊಡಬೇಕು. ಕಿತ್ತೆಯ ಪುಸ್ತಕಗಳು ಕಾಪೀ ಪುಸ್ತಕದಷ್ಟೇ ದೊಡ್ಡವಿರಬೇಕು.

೩ ಯಾವಾಗಲೂ ಪಾಟಿಯ ಮೇಲಾಗಲಿ ಕಾಗದದ ಮೇಲಾಗಲಿ ರೂಲು ಹೊಡೆದು ಬರೆಯಬೇಕು. ಕಾಗದ, ಮಸಿ, ಲೆಕ್ಕಣಿಕೆ ಇವು ಉತ್ತಮವಿರಬೇಕು.

೪. ಶಿಸ್ತು ಚೆನ್ನಾಗಿರಬೇಕು. ಬೆಳಕು ಸರಿಯಾಗುವಂತೆಯೂ ಶರೀರಕ್ಕೆ ಅಪಾಯವಾಗದಂತೆಯೂ ಕೂಡ್ರಬೇಕು. ಲೆಕ್ಕಣಿಕೆಯನ್ನು ಸರಿಯಾಗಿ ಹಿಡಿಯಲಿಕ್ಕೆ ಕಲಿಸಬೇಕು.

೫. ವಿದ್ಯಾರ್ಥಿಗಳು ಪ್ರತಿಯೊಂದು ಸಾಲು ಬರೆದ ಮೇಲೆ ಶಿಕ್ಷಕರು ಅದನ್ನು ತಿದ್ದಿ ಎಲ್ಲ ತಪ್ಪುಗಳನ್ನು ತೋರಿಸಿದನಂತರ ಮುಂದಿನ ಸಾಲು ಬರೆಯಬೇಕು. ಬರೆದದ್ದನ್ನು ತಿದ್ದದೆ ಕಾಪೀ ಪುಸ್ತಕಗಳ ಮೇಲೆ ಕಣ್ಣುಮುಚ್ಚಿ ಸಹಿ ಮಾಡುವದರಿಂದ ಏನೂ ಸುಧಾರಣೆಯಾಗಲಾರದು.

೬. ಬರಹದ ಪಾಠಗಳು ಆರಂಭದಲ್ಲಿ ಸಣ್ಣವಿರಬೇಕು. ಒಂದೇಸವನೆ ಬಹಳ ಹೊತ್ತು ಬರೆಯುವದರಿಂದ ಬಟ್ಟುಗಳಿಗೆ ಒರಟಬರುವದು; ಅವು ಬೆವರುವವು; ಹೀಗಾಗಿ ಅಕ್ಷರ ಕೆಡುವವು. ರೂಢಿಯಿಂದ ಹೆಚ್ಚೆಚ್ಚು ಬರೆಯಲಿಕ್ಕೆ ಬರುವದು.

೭. ಬಾಲಕರ ವರ್ಗದವರೂ ೧ನೇ ಇಯತ್ತೆಯ ಬಾಲಕರೂ ಪಾಟಿಯ ಮೇಲೆ $\frac{1}{2}$ ಇಂಚು ರೂಲಿನೊಳಗೆ ( ಅಕ್ಷರಗಳನ್ನು ) ಬರೆಯಬೇಕು. ೨ನೇ ಇಯತ್ತೆಯವರು

ಅಷ್ಟೇ ದೊಡ್ಡ ಅಕ್ಷರಗಳನ್ನೂ, ೩ನೇ ಇಯತ್ತೆಯುವರು $\frac{3}{8}$ ಇಂಚು ದೊಡ್ಡವುಗಳನ್ನೂ, ೪ನೇ ಇಯತ್ತೆಯುವರು $\frac{1}{4}$ ಇಂಚು ದೊಡ್ಡವುಗಳನ್ನೂ ಕಾಪಿಗಳಲ್ಲಿ ಬರೆಯುಬೇಕು. ೫ನೇ ಇಯತ್ತೆಯುವರು ವ್ಯವಹಾರದಲ್ಲಿ ಬರೆಯುವಂತೆ ಅಕ್ಷರಗಳನ್ನು ಬರೆಯುಬೇಕು.

೪ **ಉತ್ತಮ ಬರಹ**—ಉತ್ತಮ ಬರಹದ ಲಕ್ಷಣಗಳನ್ನು ಕೆಳಗೆ ಕೊಟ್ಟಿದೆ.

೧. ಸುವಾಚ್ಯತೆ.

೨. ಬರಹದ ವೇಗ.

೩. ಸೌಂದರ್ಯ.

ಎಲ್ಲ ಅಕ್ಷರಗಳನ್ನು ಪೂರ್ಣವಾಗಿಯೂ ಬಿಡಿಬಿಡಿಯಾಗಿಯೂ ಬರೆದರೆ ಸುವಾಚ್ಯತೆಯುಂಟಾಗುವದು. ಲೆಕ್ಕಣಿಕೆಯನ್ನು ಸರಿಯಾಗಿ ಹಿಡಿಯುವದು, ಸುಲಭಶೈಲಿ ಇವುಗಳಿಂದ ವೇಗವು ಬರುವದು. ಒಂದೇ ಅಳತೆಯ ಅಕ್ಷರಗಳನ್ನು ದುಂಡಗೆ ಸಾಲಾಗಿ ಬರೆಯುವದರಿಂದ ಸೌಂದರ್ಯವುಂಟಾಗುವದು.

ಬರಹದಲ್ಲಿ ವಾಡಿಕೆಯಾಗಿ ಆಗುವ ತಪ್ಪುಗಳು ಯಾವವೆಂದರೆ:—ಅಕ್ಷರಗಳನ್ನು ಒಂದೇ ಪ್ರಮಾಣದಲ್ಲಿ ಬರೆಯದಿರುವದು; ಶಬ್ದಗಳನ್ನು ಒಂದಕ್ಕೊಂದು ಹತ್ತಿ ಬರೆಯುವದು; ('ರ' ಅಕ್ಷರವನ್ನು ಬರೆಯುವಷ್ಟು ಸ್ಥಳವನ್ನು ಶಬ್ದಗಳ ನಡುವೆ ಬಿಡುವದು ಅವಶ್ಯವಾದದ್ದು.) ಅಶುದ್ಧತೆ, ತಲೆಕಟ್ಟು ಅಕ್ಷರದಷ್ಟು ದೊಡ್ಡದನ್ನಾಗಿ ಮಾಡದೆ ಇರುವದು. ಈ ತಪ್ಪುಗಳನ್ನು ಶಿಕ್ಷಕರು ವಿಶೇಷ ಶ್ರಮವಿಲ್ಲದೆ ತಿದ್ದಬಹುದು.

## ಉಕ್ತಲೇಖನ.

(೧) ಉಕ್ತಲೇಖನದಿಂದ ಆಗುವ ಲಾಭಗಳನ್ನು ಕೆಳಗೆ ಹೇಳಿಯದೆ:—

೧. ಒತ್ತರದಿಂದ ಬರೆಯುವ ರೂಢಿಯಾಗುವದು.

೨. ಶುದ್ಧಬರಹದಲ್ಲಿ ಹುಡುಗರ ಪ್ರಗತಿಯು ಎಷ್ಟಾಗಿದೆಂಬದನ್ನು ತಿಳಿದುಕೊಳ್ಳಬಹುದು.

೩. ಕಣ್ಣುಕಿವಿಗಳ ಉಪಯೋಗದಿಂದ ಬಾಲಕರಲ್ಲಿ ಅವಧಾನ, ಅಚ್ಚುಕಟ್ಟುತನ, ಸ್ವಚ್ಛತೆ ಈ ಚಟಗಳ ಪೋಷಣವಾಗುವದು.

೪. ವಾಕ್ಯದ ಬೇರೆಬೇರೆ ಭಾಗಗಳನ್ನು ಮನನಮಾಡುವದರಿಂದ ಶುದ್ಧವಾಕ್ಯರಚನೆಯ ಕಲ್ಪನೆಯುಂಟಾಗುವದು.

(೨) ಉಕ್ತಲೇಖನದಲ್ಲಿ ೩ ಮೆಟ್ಟುಗಳಿವೆ. ಅವು ಯಾವವೆಂದರೆ:—೧ ಸಿದ್ಧತೆ, ೨ ಶುದ್ಧವನ್ನು ಹೇಳೋಣ, ೩ ತಿದ್ದುವದು.

೧. ಸಿದ್ಧತೆ—ಹೇಳತಕ್ಕ ಭಾಗವನ್ನು ಮೊದಲೇ ಗೊತ್ತುಮಾಡಿ ಇಟ್ಟುಕೊಳ್ಳಬೇಕು. ವರ್ಗದಲ್ಲಿ ಓದಿದ ಭಾಗದೊಳಗಿಂದ ಅದನ್ನು ಆರಿಸಿಕೊಳ್ಳಬೇಕು. ಅದರಲ್ಲಿ ಬರುವ ಕಠಿಣ ಶಬ್ದಗಳನ್ನು ಫಳದ ಮೇಲೆ

ಶಿಕ್ಷಕನಾಗಲಿ ಬಾಲಕರಾಗಲಿ ಬರೆಯಬೇಕು. ಹೇಳತಕ್ಕ ಭಾಗವು ಬಹಳ ಉದ್ದವಿರಬಾರದು. ಅಪರಿಚಿತ ಭಾಗವಿದ್ದರೆ ಅದನ್ನು ಮೊದಲು ಶಿಕ್ಷಕನು ಸಮಗ್ರ ಓದಿತೋರಿಸಬೇಕು.

೨. ಹೇಳೋಣ—ಅರ್ಧತಾಸಿನ ಪಾಠವಿದ್ದರೆ ೧೦ ಮಿನಿಟಗಿಂತ ಹೆಚ್ಚು ಕಾಲವು ಹೇಳುವದಕ್ಕೆ ಹತ್ತಬಾರದು. ಈ ವಿಷಯದಲ್ಲಿ ಕೆಲವು ಸೂಚನೆಗಳನ್ನು ಕೆಳಗೆಕೊಟ್ಟಿದೆ:—

(ಅ) ಶಿಕ್ಷಕನು ವರ್ಗದ ಎದುರಿಗೆ ನಿಂತು ಹೇಳತಕ್ಕ ಭಾಗವನ್ನು ಸಾವಕಾಶವಾಗಿ ಓದಿತೋರಿಸಬೇಕು. ಆ ನಂತರ ಸ್ವಲ್ಪಸ್ವಲ್ಪ ಭಾಗವನ್ನು ಒಂದೇಸಾರೆ ಹೇಳಬೇಕು. ಮೇಲಿಂದಮೇಲೆ ಹೇಳುವದರಿಂದ ಹುಡುಗರ ಲಕ್ಷ್ಯವು ಕಡಿಮೆಯಾಗುವದು.

(ಬ) ಬಾಲಕರು ಎಲ್ಲ ಸಾಮುಗ್ರಿಗಳನ್ನು ಸಿದ್ಧಮಾಡಿಕೊಂಡು ಪಾಟಿಯ ಮೇಲೆ ರೂಲುಹಾಕಿಕೊಂಡು ಒಬ್ಬರಿಗೊಬ್ಬರ ಪಾಟಿಯು ಕಾಣದಂತೆ ಕೂಡ್ರಬೇಕು. ಲಕ್ಷ್ಯಪೂರ್ವಕವಾಗಿ ಹೇಳಿದ ಭಾಗವನ್ನು ಪೂರ್ಣ ಕೇಳಿಕೊಂಡು ಬರೆಯಹತ್ತಬೇಕು. ಬರೆಯುವದಾದ ಕೂಡಲೆ ಶಿಕ್ಷಕನ ಕಡೆಗೆ ನೋಡಬೇಕು.

೩. ತಿದ್ದುವದು—ಶಿಕ್ಷಕರೇ ಎಲ್ಲ ಪಾಟಿಗಳನ್ನು ತಿದ್ದಿ ಪ್ರತಿಯೊಂದು ತಪ್ಪನ್ನು ಹುಡಿಕಿ ಶುದ್ಧರೂಪಗಳನ್ನು ಬರೆಯಬೇಕು. ಹೀಗೆ ಮಾಡುವದರಿಂದ ತಪ್ಪುಗಳಾಗದಂತೆ ಬಾಲಕರು ಎಚ್ಚರದಿಂದ ಬರೆಯುವರು. ವರ್ಗದಲ್ಲಿ ಹೆಚ್ಚು ಬಾಲಕರಿದ್ದಲ್ಲಿ ದಡ್ಡ ಅಥವಾ ಹಿಂದುಳಿದ ಬಾಲಕರ ಪಾಟಿಗಳನ್ನು ಶಿಕ್ಷಕರು ನೋಡಿ ಉಳಿದವುಗಳನ್ನು ಹಿರೇಮಣಿಯಿಂದ ತಿದ್ದಲಿಕ್ಕೆ ಹಚ್ಚಬಹುದು.

---

## ೧೩ ವಾಕ್ಯರಚನೆ ಮತ್ತು ನಿಬಂಧಬರಹ

ವಾಕ್ಯರಚನೆ ಮತ್ತು ನಿಬಂಧ ಬರಹವನ್ನು ಕಲಿಸುವ ಉದ್ದೇಶಗಳನ್ನು ಕೆಳಗೆ ಕೊಟ್ಟಿದೆ:—

೧. ವಿದ್ಯಾರ್ಥಿಯು ತನ್ನ ವಿಚಾರಗಳನ್ನು ಶುದ್ಧವಾಗಿ ಬಾಯಿಂದ ಆನಂತರ ಬರಹದಿಂದ ಎರಡನೆಯವರಿಗೆ ತಿಳಿಸಲಿಕ್ಕೆ ಸಮರ್ಥನಾಗಬೇಕು.

೨. ಅವನ ಶಬ್ದಸಂಗ್ರಹವು ಬೆಳೆಯತಕ್ಕದ್ದು. ಮತ್ತು ಶಬ್ದಗಳನ್ನು ಉಪಯೋಗಿಸುವದರಲ್ಲಿ ಅವನಲ್ಲಿ ಅಚ್ಚುಕಟ್ಟುತನವೂ ತಾರತಮ್ಯಬುದ್ಧಿಯೂ ಉಂಟಾಗಬೇಕು.

೩. ಶಬ್ದಗಳಿಂದ ಬೋಧವಾಗುವ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳುವಂತೆ ಅವನ ಬುದ್ಧಿಗೆ ಸಂಸ್ಕಾರವಾಗಬೇಕು.

೪. ಅವನ ವಿಚಾರ ಹಾಗೂ ನಿರ್ಣಯಶಕ್ತಿಗಳು ಬಲಪಡಬೇಕು.

೫. ಮಾತೃಭಾಷೆಯ ವಾಕ್ಯಪದ್ಧತಿಯನ್ನೂ ಉಪಪತ್ತಿಯನ್ನೂ ಅಭ್ಯಾಸಿಸುವದರಿಂದ ಇತರ ಭಾಷೆಗಳ ಅಭ್ಯಾಸವನ್ನು ಮಾಡಲಿಕ್ಕೆ ಅನುಕೂಲವಾಗಬೇಕು.

೬. ವಾಙ್ಮಯವನ್ನು ಅಭ್ಯಾಸಿಸುವದರಿಂದ ಕಲ್ಪನಾಶಕ್ತಿಯೂ ಸೌಂದರ್ಯದ ಭಾವನೆಯೂ ಪೋಷಿಸಲ್ಪಡಬೇಕು.

ವಾಕ್ಯರಚನೆ, ವ್ಯಾಕರಣ, ವಾಙ್ಮಯದ ಅಭ್ಯಾಸ ಇವು ಪರಸ್ಪರ ಸಂಬಂಧವುಳ್ಳ ವಿಷಯಗಳು. ಈ ವಿಷಯಗಳನ್ನು ಪ್ರಥಕ್ಕಾಗಿ ಅಭ್ಯಾಸಿಸುವದು ದುಸ್ತರವು. ಆದರೆ ಕೂಡಿಯೇ ಈ ಎಲ್ಲ ವಿಷಯಗಳ ವಿಚಾರದಿಂದ ಭಾಷೆಯ ಅಭ್ಯಾಸಕ್ಕೆ ಬಹಳ ಅನುಕೂಲವಾಗುವದು.

ತೋಂಡೀವಾಕ್ಯರಚನೆ:—ಬಾಯಿಂದ ಉತ್ತರಗಳನ್ನು ಪೂರ್ಣ ವಾಕ್ಯಗಳಿಂದ ಹೊರಡಿಸಿ ಅವುಗಳ ಶುದ್ಧತೆಯ ಕಡೆಗೆ ಲಕ್ಷ್ಯಕೊಡಬೇಕು. ಮತ್ತು ಬಾಲಕರು ಸಾಮಾನ್ಯವಾಗಿ ಮಾಡುವಂಥ ತಪ್ಪುಗಳನ್ನು ತಿದ್ದಿ ಶುದ್ಧರೂಪಗಳನ್ನು ಹೇಳುವದರಿಂದ ವ್ಯಾಕರಣ ದೋಷಗಳು ಕಡಿಮೆಯಾಗುವವು.

ವಾಚನಪಾಠದಿಂದ ಈ ಪದ್ಧತಿಗೆ ಬಹಳ ಸಹಾಯವಾಗುವದು. ಓದಿದ ಪಾಠಗಳ ಸಾರಾಂಶವನ್ನು ತಪ್ಪದೇ ಹೇಳಹಚ್ಚುವದರಿಂದ ವಾಕ್ಯರಚನಾಕ್ರಮವು ಬಾಲಕರಿಗೆ ಗೊತ್ತಾಗುವದು. ಇದಲ್ಲದೆ ಶಿಕ್ಷಕರು ವಸ್ತುವರ್ಣನೆ, ಪ್ರಾಣಿಗಳ ವರ್ಣನೆ ಚಿತ್ರದ ವರ್ಣನೆ ಇವುಗಳನ್ನು ಬಾಲಕರ ಯೋಗ್ಯತೆಗೆ ತಕ್ಕಂತೆ ಮಾಡಹಚ್ಚಬೇಕು. ಮತ್ತು ಅವರ ವಿಚಾರಕ್ಷೇತ್ರವು ಹೆಚ್ಚಾಗುವಂತೆ ಅವರಿಗೆ ಸೂಚಕಪ್ರಶ್ನಗಳನ್ನು ಮಾಡಬೇಕು. ಇದರಂತೆ ಶಾಸ್ತ್ರೀಯ ವಿಷಯ, ಇತಿಹಾಸಗಳ ಪಾಠಗಳನ್ನು ಈ ರೀತಿಯಿಂದ ಉಪಯೋಗಿಸಿಕೊಳ್ಳಬಹುದು. ಬಾಲಕರು ಗ್ರಾಮ್ಯ ಶಬ್ದಗಳನ್ನೂ ರೂಪಗಳನ್ನೂ ಉಪಯೋಗಿಸದಂತೆ ಎಚ್ಚರಪಡಬೇಕು.

ಲೇಖೀವಾಕ್ಯರಚನೆ— ತೋಂಡೀ ವಾಕ್ಯರಚನೆಯಿಂದ ಲೇಖೀವಾಕ್ಯರಚನೆಗೆ ಸಾಗಲಿಕ್ಕೆ ಕಥೆಗಳು ಅನುಕೂಲವಾದವುಗಳು. ಮನೋರಂಜಕ ಸಂಕ್ಷಿಪ್ತ ಕಥೆಗಳನ್ನು ಪುರಾಣ, ಇತಿಹಾಸ, ಕಟ್ಟುಕಥೆ ಇವುಗಳಿಂದ ಆರಿಸಿಕೊಂಡು ಶಿಕ್ಷಕರು ಬರೆದಿಟ್ಟು ಕೊಳ್ಳಬೇಕು. ಅಂಥ ಒಂದು ಕಥೆಯನ್ನು ಶಿಕ್ಷಕನು ಹುಡುಗರಿಗೆ ಸಾವಕಾಶವಾಗಿ ಮುಖ್ಯ ಪಾತ್ರಗಳ ಹೆಸರುಗಳನ್ನು ಕರೀ ಹಲಿಗೆಯ ಮೇಲೆ ಬರೆಯುತ್ತ ಹೇಳಬೇಕು ಹೀಗೆ ಮಾಡುವದರಿಂದ ಕಥೆಯ ಮುಖ್ಯಾಂಶಗಳನ್ನು ಬಾಲಕರು ಮರೆಯುವದಿಲ್ಲ. ಅನಂತರ ಮಹತ್ವದ ಮಾತುಗಳ ವಿಷಯಕ್ಕೆ ವಿದ್ಯಾರ್ಥಿಗ

ಳಿಗೆ ಪ್ರಶ್ನೆಮಾಡಿ ಉತ್ತಮವಾದ ಉತ್ತರಗಳನ್ನು ಕರೇ ಹಲಿಗೆಯ ಮೇಲೆ ಬರೆಯ ಬೇಕು. ಹೀಗೆ ಎಲ್ಲ ಸಂಗತಿಗಳ ಹೊಂದಿಕೆಯಾದನಂತರ ಆ ಇಡೀಕಥೆಯನ್ನು ಮೊದಲು ಶಿಕ್ಷಕನೇ ಕರೇಹಲಿಗೆಯ ಮೇಲೆ ಬರೆಯಬೇಕು. ಆ ಮೇಲೆ ಕರೇ ಹಲಿಗೆಯನ್ನು ಮುಚ್ಚಿ ಬಾಲಕರಿಗೆ ಆ ಕಥೆಯನ್ನು ಹೇಳಲಿಕ್ಕೆ ಹಚ್ಚಬೇಕು. ಮತ್ತು ಅವರು ಮಾಡುವ ತಪ್ಪುಗಳನ್ನು ಶಿಕ್ಷಕನು ತಿದ್ದಬೇಕು. ಹೊಸ ಶಬ್ದಗಳ ಪ್ರಯೋಗವನ್ನು ಯಾರಾದರೂ ಮಾಡಿದರೆ ಅದರ ಅರ್ಥವನ್ನು ಎಲ್ಲರಿಗೂ ತಿಳಿಸಿ ಹೇಳಬೇಕು. ಹೀಗೆ ಪ್ರಶ್ನೋತ್ತರಗಳಿಂದ ಸಮಗ್ರ ಕಥೆಯು ಮುಗಿದನಂತರ ವಿದ್ಯಾರ್ಥಿಗಳು ಶಿಕ್ಷಕನು ಬರೆದಂತೆ ನಕಲು ಮಾಡತಕ್ಕದ್ದು. ಬರೆಯುವಾಗ ಶಬ್ದವಿಂಗಡಿಸುವದು ವಿರಾಮಚಿನ್ಹ, ಕರ್ತೃ-ಕ್ರಿಯಾಪದಗಳ ಪುರುಷ, ವಚನ ಇವುಗಳ ಕಡೆಗೆ ಲಕ್ಷಕೊಡ ಬೇಕು. ಹೀಗೆ ೩-೪ ಸಾರೆ ಬರೆಸಿದ ಬಳಿಕ ಕಥೆಯನ್ನು ಓದಿದ ಬಳಿಕ ವಿಶೇಷ ಪ್ರಶ್ನೆಮಾಡದೆ ಬಾಲಕರು ನೆನಪಿನಿಂದ ಆ ಕಥೆಯನ್ನು ಬರೆಯಬಹುದು. ಇಲ್ಲವೆ ಕಥೆಯೊಳಗಿನ ಮುಖ್ಯ ಅಂಶಗಳನ್ನು ಸಂಕ್ಷಿಪ್ತವಾಗಿ ಬರೆದು ಅವುಗಳಿಂದ ಸೂಚಿತವಾದ ಕಥೆಯನ್ನು ಬರೆಯಹಚ್ಚಬೇಕು ಉದಾ:— ಕೀಚಕ ವಧದ ಕಥೆಯ ಮುಖ್ಯಾಂಶಗಳನ್ನು ಕೆಳಗೆ ಬರೆದಂತೆ ಕೊಡಬಹುದು.

ಭೀಮಸೇನ— ವಿರಾಟನಗರ— ಬಲ್ಲವ— ದ್ರೌಪದಿ— ಸೈರಂಧ್ರಿ
ಕೀಚಕ— ಕಾಮವಾಸನೆ—ಗುಪ್ತಆಲೋಚನೆ—ಭೀಮನು— ಕೊಂದನು.

ಮೇಲಿನ ತರಗತಿ:—ವರ್ಗದಲ್ಲಿ ಓದಿದ ಕಥೆಗಳನ್ನು ಪೂರ್ಣವಾಗಿ ಬರೆಯುವದು ವಿದ್ಯಾರ್ಥಿಗಳಿಗೆ ರೂಢವಾದ ನಂತರ ಓದಿದ ಪಾಠಗಳ ಅಥವಾ ಕವಿತೆಗಳ ಸಾರಾಂಶವನ್ನು ಬರೆಯಹಚ್ಚಬೇಕು. ಆನಂತರ ಹುಡುಗರಿಗೆ ಮನೋರಂಜಕವೆನಿಸುವ ಪರಿಚಿತ ವಸ್ತುಗಳ ಅಥವಾ ಪ್ರಾಣಿಗಳ ವರ್ಣನೆಯನ್ನು ಪ್ರಾರಂಭಿಸಬೇಕು. ಆದರೆ ಈ ಅವಧಿಯಲ್ಲಿ ಒಮ್ಮೆಲೆ ಚಿಂತನಪರ ವಿಷಯಗಳ ನಿಬಂಧವನ್ನು ಬರೆಯಹಚ್ಚುವದು ತಪ್ಪಾಗುವದು. ಯಾಕೆಂದರೆ ವಿದ್ಯಾರ್ಥಿಗಳ ಜ್ಞಾನವು ಮರ್ಯಾದಿತವಾಗಿರುವದರಿಂದ ಅವರು ಇಂಥ ವಿಷಯಗಳ ವಿಷಯಕ್ಕೆ ಸರಿಯಾದ ವಿಚಾರಗಳನ್ನು ವ್ಯಕ್ತಮಾಡಲಾರರು.

ಮೊದಲು ಯಾವದಾದರೊಂದು ಪರಿಚಿತ ವಸ್ತುವನ್ನು ವರ್ಗದ ಮುಂದಿಟ್ಟು ಅದರ ವಿಷಯಕ್ಕೆ ಶಿಕ್ಷಕನು ಒಂದರಹಿಂದೊಂದು ಅನೇಕ ಪ್ರಶ್ನೆಗಳನ್ನು ಮಾಡಬೇಕು. ಮತ್ತು ಅವುಗಳಿಗೆ ವಿದ್ಯಾರ್ಥಿಗಳಿಂದ ದೊರೆತ ಉತ್ತರಗಳನ್ನು ಕರೇಹಲಿಗೆಯ ಮೇಲೆ ಬರೆಯಬೇಕು. ಹೀಗೆ ವರ್ಣನೆಯ ಬಾಹ್ಯಸ್ವರೂಪವು ಸಿದ್ಧವಾದನಂತರ ಸಮಗ್ರ

ವರ್ಣನೆಯನ್ನು ವಿದ್ಯಾರ್ಥಿಗಳು ಬರೆಯಬಹುದು. ಉದಾಃ--ಮಾವಿನಹಣ್ಣಿನ ವರ್ಣನೆಯನ್ನು ಬರೆಯುವದಿದ್ದರೆ ಕೆಳಗಿನ ಪ್ರಶ್ನೆಗಳನ್ನು ಕರಿಹಲಗೆಯ ಮೇಲೆ ಬರೆಯಬಹುದು.

೧. ಮಾವಿನ ಹಣ್ಣಿನ ಆಕಾರವು ಹೇಗೆ ಇರುವದು ?

೨. ಹೊರಗೆ ಏನಿರುವದು. ಒಳಗೆ ಏನಿರುವದು?

೩. ರುಚಿ ಹೇಗಿರುವದು? (ಕಾಯಿ ಇದ್ದಾಗ; ಹಣ್ಣು ಆದಮೇಲೆ)

೪. ಉಪಯೋಗವೇನು ?

೫. ಗೊರಟವು ಏತಕ್ಕೆ ಬೇಕು ?

ಇವುಗಳಿಗೆ ವಿದ್ಯಾರ್ಥಿಗಳಿಂದ ಉತ್ತರ ಹೊರಡಿಸಿ ಅವುಗಳನ್ನು ಕ್ರಮದಿಂದ ಶುದ್ಧವಾಗಿ ಬರೆದು ಹೊಂದಿಕೆ ಮಾಡಿದಮೇಲೆ ವಿದ್ಯಾರ್ಥಿಗಳು ಪೂರ್ಣ ವರ್ಣನೆಯನ್ನು ಸುಲಭವಾಗಿ ಬರೆಯುವರು.

ಇದರಂತೆ ಪ್ರಾಣಿಗಳ ವರ್ಣನೆಯ ಸಾಮಾನ್ಯ ಮುದ್ದೆಗಳನ್ನು ಹೇಳಬಹುದು. ಹೇಗೆಂದರೆ—

೧. ಸಾಮಾನ್ಯ ವರ್ಣನೆ

೨. ಮೂಲಸ್ಥಾನ

೩. ಆಹಾರ, ಗುಣ ಮುಂತಾದವು.

೪. ಉಪಯೋಗ (ಕಾಡುಮೃಗಗಳಿದ್ದರೆ ಅವುಗಳನ್ನು ಬೇಟೆಯಾಡುವ ರೀತಿ)

ಚರಿತ್ರಗಳನ್ನು ಬರೆಯುವದಾದರೆ ಕೆಳಗಿನ ಮುದ್ದೆಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.—

೧. ಬಾಲ್ಯ, ಜನ್ಮ, ಮನೆತನ; ತಂದೆತಾಯಿಗಳು.

೨. ಶಿಕ್ಷಣ.

೩. ಮಾಡಿದ ಕೆಲಸ.

೪. ಅದರ ಪರಿಣಾಮ.

೫. ಉಪಸಂಹಾರ.

ಪ್ರತಿಯೊಂದು ಭಾಗವನ್ನು ವಿವರಿಸುವಾಗ ಬೇರೆಬೇರೆ ಕಲಮುಮಾಡಿ ಬರೆಯಬೇಕು. ಆದರೆ ಮುದ್ದೆಗಳನ್ನು ಬರೆಯಕೂಡದು. ಈ ಉಪಾಯಗಳಿಂದ ಪ್ರತಿಯೊಂದು ನಿಬಂಧದ ಆರಂಭದ, ಮಧ್ಯದ, ಅಂತ್ಯದ ಭಾಗಗಳಲ್ಲಿ ಏನೇನು ವಿವರಿಸಬೇಕೆಂಬದು ವಿದ್ಯಾರ್ಥಿಗಳಿಗೆ ಸ್ಪಷ್ಟವಾಗಿ ತಿಳಿಯಹತ್ತುವದು.

ಇಷ್ಟಾದಮೇಲೆ ಹುಡುಗರೇ ನಿಬಂಧದ ಮುದ್ದೆಗಳನ್ನು ತಾವೇ ತೆಗೆದು ಅವುಗಳನ್ನು ವಿವರಿಸಿ ಸಮಗ್ರ ನಿಬಂಧವನ್ನು ಅವರೇ ಬರೆಯಲಿಕ್ಕೆ ಸಮರ್ಥರಾಗಬೇಕು.

ಮುದ್ದೆಗಳನ್ನು ತೆಗೆಯುವದು ಪ್ರತಿಯೊಂದು ನಿಬಂಧದಲ್ಲಿ ಅವಶ್ಯವೆಂದು ಕಂಡುಬಂದ ರೂಒಂದೇತರದ ಮುದ್ದೆಗಳನ್ನು ಎಲ್ಲ ನಿಬಂಧಗಳಲ್ಲಿ ಉಪಯೋಗಿಸುವದು ದಡ್ಡತನವು. ವಿಷಯುವಿವರಣೆಯು ಸರಿಯಾಗುವಂತೆ ಮುದ್ದೆಗಳು ಬೇರೆಬೇರೆಯಾಗುವವು. ಒಟ್ಟಿಗೆ ನಿಬಂಧವು ಎರಡನೆಯುವರಿಗೆ ಸ್ಪಷ್ಟವಾಗಿ ತಿಳಿಯುವಂತೆ ಇರಬೇಕು. ಇದೇ ಅದರ ಮುಖ್ಯ ಲಕ್ಷಣವು.

**ಪತ್ರಬರಹಃ—** ಸಾಲೆಯನ್ನು ಬಿಡುವದರೊಳಗೆ ಎಲ್ಲ ವಿದ್ಯಾರ್ಥಿಗಳಿಗೂ ಪತ್ರ ಬರೆದು ತಮ್ಮ ಅಭಿಪ್ರಾಯವನ್ನು ಎರಡನೆಯುವರಿಗೆ ತಿಳಿಸಲಿಕ್ಕೆ ಬರುತ್ತಿರಬೇಕು. ಆದದರಿಂದ ನಿಬಂಧ ವಿಷಯುದ ತಾಸಿನಲ್ಲಿ ವಾರಕ್ಕೊಮ್ಮೆ ನಿಯಮಿತವಾಗಿ ಪತ್ರಬರಹವನ್ನು ಇಡತಕ್ಕದ್ದು.

ಆರಂಭದಲ್ಲಿ ಸಾದಾಪತ್ರಗಳನ್ನು ಬರೆದರೆ ಸಾಕು. ಆದರೆ ಕಡೆತನಕ ಇದೇ ತರದ ಪತ್ರಗಳನ್ನು ಬರೆಯುವದರಿಂದ ಈ ವಿಷಯುದಲ್ಲಿ ಪ್ರಗತಿಯಾಗಲಾರದು. ಪತ್ರಬರಹದಲ್ಲಿ ಒಕ್ಕಣಿಕೆ ಶ್ರೀ, ಕ್ಷೇಮ, ತಾ|| ಅಥವಾ ಮಿತಿ ಮೊದಲಾದ ಆರಂಭದ ಕ್ರಮ, ವಿಷಯದ ಹೊಂದಿಕೆ, ಪತ್ತೆ ಇವುಗಳಿಗೆ ವಿಶೇಷ ಲಕ್ಷ್ಯಕೊಡಬೇಕು.

ಪತ್ರಗಳಲ್ಲಿ ಕ್ಷೇಮ ಸಮಾಚಾರದ ಪತ್ರ, ವ್ಯವಹಾರದೊಳಗಿನ ಪತ್ರ ( ಪ್ರಾಮಿಸರಿ ನೋಟ, ಬಾಡಿಗೆಪತ್ರ, ಕೆಲಸದ ದೆಶೆಯಿಂದ ಅರ್ಜಿ ಮೊದಲಾದವು ) ಪ್ರವಾಸಕ್ಕೆ ಹೋದಾಗ ವರ್ಣನೆಯ ಪತ್ರ ಹೀಗೆ ಅನೇಕ ಪ್ರಕಾರಗಳಿರುವವು. ಅವೆಲ್ಲವುಗಳನ್ನು ಬರೆಯುವ ರೂಢಿಯು ಬಾಲಕರಿಗೆ ಆಗುವದು ಅವಶ್ಯವದೆ. ಮತ್ತು ಪತ್ರ ಅಥವಾ ಅರ್ಜಿಗಳನ್ನು ಅವಶ್ಯವಿದ್ದಂತೆ ಕಾರ್ಡಿನ ಮೇಲೆ ಪಾಕೀಟನಲ್ಲಿ ಅಥವಾ ಅರ್ಧಹಾಳಿಯ ಮೇಲೆ ಹೇಗೆ ಬರೆಯಬೇಕೆಂಬದು ಗೊತ್ತಾಗತಕ್ಕದ್ದು. ಇಂಥ ಪತ್ರಗಳನ್ನು ನೋಟಪುಸ್ತಕದಲ್ಲಿ ಬರೆಯುವದಕ್ಕಿಂತ ವ್ಯವಹಾರದಲ್ಲಿ ಉಪಯೋಗಿಸುವಂತೆ ಕಾರ್ಡು, ಗಿರ್ಧಹಾಳಿ, ಅರ್ಧಹಾಳಿ ಇವುಗಳ ಮೇಲೆಯೇ ಪತ್ತೆ ಸಹಿತ ಬರೆಯಿಸತಕ್ಕದ್ದು.

**ತಿದ್ದುವದುಃ—** ಶಿಕ್ಷಕರು ಎಲ್ಲ ತಪ್ಪುಗಳನ್ನು ತಿದ್ದಿ ಶುದ್ಧರೂಪಗಳನ್ನು ಬರೆದು ವಿಷಯುವನ್ನು ಹೇಗೆ ಸುಧಾರಿಸಬಹುದೆಂಬದನ್ನು ತೋರಿಸಬೇಕು. ವಾಡಿಕೆಯಾಗಿ ಆಗುವ ತಪ್ಪುಗಳೆಂದರೆ:—

**೧. ಶಬ್ದದೋಷಗಳು—** ಬಹಳ ಮಾಡಿ ಸಂಸ್ಕೃತ ಶಬ್ದಗಳಲ್ಲಿ ಈ ದೋಷಗಳು ಆಗುವದು ಹೆಚ್ಚು. ಹ್ರಸ್ವ, ದೀರ್ಘ, ಮಹಾಪ್ರಾಣ, ಅಲ್ಪಪ್ರಾಣ ಇವು ತಪ್ಪಾಗುವದು ವಿಶೇಷ.

**೨. ವ್ಯಾಕರಣ ದೋಷಗಳು—** ಪುರುಷ, ವಚನ, ಕಾಲ ಇವುಗಳ ದೋಷಗಳನ್ನು ತಿದ್ದಿ ಕರೇಹಲಿಗೆಯ ಮೇಲೆ ಬರೆಯಬೇಕು.

(೩) ಶೈಲಿಯ ಅಥವಾ ವಿಷಯದ ದೋಷಗಳು—ವಾಕ್ಯಗಳ ಅರ್ಥವನ್ನು ಹೆಚ್ಚು ಸ್ಪಷ್ಟವಾಗುವಂತೆ ಹೇಗೆ ಸುಧಾರಿಸಬಹುದು ಎಂಬದನ್ನು ವಿದ್ಯಾರ್ಥಿಗಳಿಗೆ ಕೇಳಿ ಅವರ ಉತ್ತರಗಳ ಸಹಾಯದಿಂದ ಅವನ್ನು ತಿದ್ದಬೇಕು.

ವಿಷಯದ ಹೊಂದಿಕೆಯು ಸರಿಯಾಗಿರದಿದ್ದರೆ ಯಾವ ಯಾವ ಮುದ್ದೆಗಳನ್ನು ಹೇಗೆ ಬರೆಯಬೇಕೆಂಬದನ್ನು ತಿಳಿಸಿಕೊಡಬೇಕು.

(೪) ವಿರಾಮಚಿಹ್ನಗಳಿಗೆ ದುರ್ಲಕ್ಷ—ವಾಕ್ಯವು ಮುಗಿದಕೂಡಲೆ ಪೂರ್ಣವಿರಾಮಚಿಹ್ನವನ್ನು ಹಾಕಬೇಕೆಂಬ ನಿಯಮವನ್ನು ಮಾತ್ರ ಯಾವ ವಿದ್ಯಾರ್ಥಿಯೂ ಮರೆಯಕೂಡದು. ವಿರಾಮಚಿಹ್ನಗಳ ರೂಢಿಯು ವಿಶೇಷವಾಗಲಿಕ್ಕೆ ಒಂದು ಪಾಠದ ಭಾಗವನ್ನು ಕರೇಹಲಿಗೆಯ ಮೇಲೆ ಬರೆದು ವಿರಾಮಚಿಹ್ನಗಳನ್ನು ಹಾಕಲಿಕ್ಕೆ ವಿದ್ಯಾರ್ಥಿಗಳಿಗೆ ಹಚ್ಚಬೇಕು.

---

## ೧೪ ಗಣಿತ.

೧ ಗಣಿತ ವಿಷಯವು ಮಾನಸಿಕ ಶಿಕ್ಷಣದ ಉತ್ತಮ ಸಾಧನವಾಗಿರುವದಲ್ಲದೆ ವ್ಯವಹಾರದಲ್ಲಿ ಬಹಳ ಉಪಯುಕ್ತವಾದ ವಿಷಯವು. ಈ ವಿಷಯದಿಂದ ಬಾಲಕರಲ್ಲಿ ವಿಚಾರಮಾಡುವ ಪದ್ಧತಿಯೂ ಅವಧಾನವನ್ನು ಒಂದೇ ವಿಷಯದಲ್ಲಿ ಕೇಂದ್ರೀಕರಿಸುವ ಚಟವೂ ಉಂಟಾಗುವವು. ಇಗಲ್ಲದೆ ವಿಚಾರದಲ್ಲಿ ಅವಶ್ಯವಾದ ನಿಗಮನ ವಿಗಮನ ಪದ್ಧತಿಗಳ ಉಪಯೋಗವು ಈ ವಿಷಯದಲ್ಲಿ ಆದಷ್ಟು ಬೇರೆ ಯಾವ ವಿಷಯದಲ್ಲಿಯೂ ಆಗುವದಿಲ್ಲ. ಅಚ್ಚುಕಟ್ಟುತನವೂ ಸುವ್ಯವಸ್ಥಿತತನವೂ ಸ್ವಾವಲಂಬನವೂ ವಿದ್ಯಾರ್ಥಿಗಳಲ್ಲಿ ನೆಲೆಗೊಳ್ಳುವವು. ಇದರಿಂದ ಸಾರಾಸಾರ ವಿಚಾರ ಮಾಡುವ ರೂಢಿಯುಂಟಾಗುವದು.

೨ ಮೇಲೆ ಹೇಳಿದ ಉದ್ದೇಶಗಳು ಸಫಲವಾಗಬೇಕಾದರೆ ಶಿಕ್ಷಕನು ಕೆಲವು ತತ್ವಗಳನ್ನು ಲಕ್ಷದಲ್ಲಿಡಬೇಕಾಗುವದು. ಅವು ಯಾವವೆಂದರೆ:—

೧ ಆದಷ್ಟು ಮಟ್ಟಿಗೆ ಈ ವಿಷಯದ ಶಿಕ್ಷಣವು ವಸ್ತುಗಳಿಂದ ಪ್ರಾರಂಭವಾಗಬೇಕು. ವಸ್ತುವಾಚಕದಿಂದ ಭಾವವಾಚಕಕ್ಕೆ ಸಾಗು ಎಂಬ ಬೋಧನದ ತತ್ವವನ್ನು ಪೂರ್ಣವಾಗಿ ಅನುಸರಿಸಬೇಕು.

೨ ವಿದ್ಯಾರ್ಥಿಗಳ ಮಾನಸಿಕ ವಿಕಾಸಕ್ಕೆ ಅನುಸರಿಸಿ ಪ್ರಶ್ನಗಳನ್ನು ಕೇಳಬೇಕು. ಮತ್ತು ಒಂದೇ ಮಾತನ್ನು ಅನೇಕ ಉದಾಹರಣೆಗಳಿಂದ ಸ್ಪಷ್ಟೀಕರಿಸಬೇಕು.

೩ ಸಣ್ಣ ಲೆಕ್ಕಗಳನ್ನು ಮಾಡಲಿಕ್ಕೆ ಹೇಳುವದರಿಂದ ಅವುಗಳಲ್ಲಿ ಗರ್ಭಿತವಾದ ತತ್ವವು ತಿಳಿದದೆಯೋ ಇಲ್ಲವೋ ಎಂಬದು ಗೊತ್ತಾಗುವದು. ಉದ್ದ ಲೆಕ್ಕಗಳನ್ನು ವಿದ್ಯಾರ್ಥಿಗಳ ಏಕಾಗ್ರತೆಯನ್ನೂ ದೀರ್ಘಪ್ರಯತ್ನವನ್ನೂ ಅಚ್ಚುಕಟ್ಟುತನವನ್ನೂ ಪರೀಕ್ಷಿಸಲಿಕ್ಕೆ ಪ್ರಸಂಗಾನುಸಾರವಾಗಿ ಹೇಳಬಹುದು.

೪ ಒಂದೇ ಪಾಠದಲ್ಲಿ ಅನೇಕ ತತ್ವಗಳನ್ನು ತಿಳಿಸುವ ಯತ್ನಮಾಡಬಾರದು. ಸಾವಕಾಶವಾಗಿ ಒಂದೊಂದೇ ಮಾತನ್ನು ತಿಳಿಸಿ ಹೇಳಿ ಅನೇಕ ಉದಾಹರಣೆಗಳಿಂದ ಅದರ ಸತ್ಯತೆಯು ಮನಸ್ಸಿಗೆ ಹೊಳೆಯುವಂತೆ ಮಾಡಬೇಕು.

೫ ಹೇಳಿದ ಉದಾಹರಣೆಗಳಲ್ಲಿ ಏನು ಕೇಳಿದ್ದಾರೆಂಬವನ್ನು ತಿಳಿದು ನೋಡುವ ಮತ್ತು ಕೊನೆಯ ಉತ್ತರವು ಎಷ್ಟು ಬರಬಹುದೆಂಬದನ್ನು ಅಂದಾಜು ಮಾಡುವ ಚಟವನ್ನು ವಿದ್ಯಾರ್ಥಿಗಳಿಗೆ ಹಚ್ಚುವದು ಅವಶ್ಯವದೆ. ಎಷ್ಟೋ ಸಾರೆ ಬಾಲಕರು ವಿಚಾರಮಾಡದೆ ಯಾಂತ್ರಿಕ ರೀತಿಯಿಂದ ಉದಾಹರಣೆಗಳನ್ನು ಬಿಡಿಸುವದರಿಂದ ಅವರಲ್ಲಿ ಅಜಾಗ್ರತೆಯ ದೋಷವುಂಟಾಗುವದು.

೬ ಈ ವಿಷಯದಲ್ಲಿ ವರ್ಗದ ಎಲ್ಲ ಬಾಲಕರ ಪ್ರಗತಿಯು ಅಷ್ಟೇ ಆಗಲಾರದು. ಅದು ಭಿನ್ನಭಿನ್ನವಾಗುವದು. ವಾಚನ, ಬರಹ, ಭೂಗೋಲುಗಳಲ್ಲಿ ಸಮಾನ ಯೋಗ್ಯತೆಯಿದ್ದ ಬಾಲಕರಲ್ಲಿ ಸಹ ಈ ಪ್ರಕಾರದ ಹೆಚ್ಚುಕಡಿಮೆಯು ಕಂಡು ಬರುವದು. ಆದದರಿಂದ ವರ್ಗದಲ್ಲಿ ಅವರವರ ಯೋಗ್ಯತೆಗನುಸರಿಸಿ ಬಾಲಕರ ವರ್ಗೀಕರಣವನ್ನು ಮಾಡಬೇಕು.

೭ ಗಣಿತ ವಿಷಯವನ್ನು ಇತರ ವಿಷಯಗಳಿಗೆ ಸಂಬಂಧಿಸಿ ಕಲಿಸಬೇಕು.

೮ ಈ ವಿಷಯವು ನಡೆದಾಗ ಬಾಲಕರು ಒಬ್ಬರಿಗೊಬ್ಬರು ಉತ್ತರಗಳನ್ನು ಹೇಳುವರು. ಇದನ್ನು ತಪ್ಪಿಸಲಿಕ್ಕೆ ಬಾಲಕರನ್ನು ದೂರದೂರ ಕೂಡ್ರಿಸುವದಲ್ಲದೆ ಶಿಕ್ಷಕನು ಯೋಗ್ಯ ದಕ್ಷತೆಯನ್ನಿಡಬೇಕು. ಸಂಶಯ ಬಂದಕೂಡಲೆ ಲೆಕ್ಕದ ರೀತಿಯನ್ನು ವಿವರಿಸಲಿಕ್ಕೆ ಹೇಳಬೇಕು. ಅಂದರೆ ಉದಾಹರಣೆಯನ್ನು ತಿಳಿದು ಮಾಡಿದವನು ಯಾರು ಉತ್ತರವನ್ನು ನೋಡಿ ಮಾಡಿದವನು ಯಾರು ಎಂಬದು ಕೂಡಲೆ ತಿಳಿಯುವದು.

**೩ ಸಂಖ್ಯೆಯ ಕಲ್ಪನೆ:—** ಪ್ರಾ. ಶಾ. ಗಳಿಗೆ ಬರುವಂಥ ಬಾಲಕರು ೬-೭ ವರ್ಷದವರಿರುವರು. ಅವರು ಅಂಕಿಗಳನ್ನು ಹೇಗಾದರೂ ಎಣಿಸಲಿಕ್ಕೆ ರೂಢಿಯಿಂದ ಗೊತ್ತುಮಾಡಿಕೊಂಡಿರುವರು. ಅವುಗಳನ್ನು ಕ್ರಮಗೊಳಿಸಿ ೧೦ ಅಂದರೆ ಒಂದು ಪತ್ತರ ಗಂಟು ಬಿಡಿಕಾಳು ಇಲ್ಲ ಎಂಬ ಕಲ್ಪನೆಯುಂಟಾಗುವಂತೆ ೧೦ ಬಿಡಿಮಣಿಗಳಿಂದ ಮಾಡಿದ ೧ ಸರ ಅಥವಾ ೧೦ ಕಡ್ಡಿಗಳ ಒಂದು ಕಟ್ಟು ಎಂದು ತೋರಿಸಬೇಕು. ಆನಂತರ ಬಾಲಕರಿಗೇ ಇಂಥ ಸರಗಳನ್ನಾಗಲಿ ಕಟ್ಟುಗಳನ್ನಾಗಲಿ ಮಾಡಿ

ತರಲಿಕ್ಕೆ ಹೇಳಬೇಕು, ೧೧ ಅಂದಕೂಡಲೆ ಒಂದು ಹತ್ತರ ಗಂಟು ೧ ಬಿಡಿಕಾಳು ಎಂಬ ಕಲ್ಪನೆಯು ಅವನಿಗೆ ಪ್ರತ್ಯಕ್ಷವಾಗಬೇಕು. ಹೀಗೆಯೇ ಮುಂದಿನ ಅಂಕಿಗಳನ್ನು ಕಲಿಸಬೇಕು. ಮತ್ತು ಅವನಿಗೆ ಸಂಖ್ಯಾಲೇಖನವನ್ನು ಅಕ್ಷರ ಬರಹದ ಸಂಗಡವೇ ಕಲಿಸಬೇಕು. ಅಕ್ಷರ ಲೇಖನವು ಪೂರ್ಣ ಮುಗಿದ ಮೇಲೆ ಅಂಕ ಲೇಖನವನ್ನು ಆರಂಭಿಸುವದು ತಪ್ಪು. ಬರಹ, ವಾಚನ, ಅಂಕಿ ಈ ಮೂರು ವಿಷಯುಗಳು ಸ್ವಲ್ಪ ಹೆಚ್ಚುಕಡಿಮೆ ಒಂದೇ ಕಾಲಕ್ಕೆ ಪ್ರಾರಂಭವಾಗತಕ್ಕದ್ದು. ಬಾಲಕರು ಕೇಳಿಕೆಯಿಂದ ಅಂಕಿಗಳನ್ನು ಅನುಕ್ರಮವಾಗಿ ಅನ್ನುತ್ತಿದ್ದರೂ ಶಿಕ್ಷಕರು ಅತ್ತಕಡೆಗೆ ಪೂರ್ಣ ಲಕ್ಷ್ಯಮಾಡುವರು. ಹುಡುಗರಲ್ಲಿ ಈ ವಿಷಯವನ್ನು ಕಲಿಯುವ ಕುತೂಹಲವು ಅಕ್ಷರ ಬರಹದ ಕೂಡ ಪ್ರಾರಂಭವಾಗುವದು. ಕಾರಣ ಅಕ್ಷರಗಳ ಗುಂಪಿನಲ್ಲಿ ಅಂಕಿಗಳನ್ನು ಸೇರಿಸಬಹುದು. ಹೇಗೆಂದರೆ–

೧ನೇ ಗುಂಪು—೦ [ಶೂನ್ಯ]

೩ ,, —೧, ೮, ೪

೪ ,, —೨

೫ ,, —೩, ೬, ೯

೧೨ ,, —೫ [ಖದಂತೆ ಬರೆಯುವದು]

೭ [ಶ ,, ,, ]

ಅಕ್ಷರಪಟಗಳನ್ನು ಸಾಲೆಗಳಲ್ಲಿ ತೂಗಹಾಕುವಂತೆ ಅಂಕೆಗಳ ಪಟಗಳನ್ನು ಸಹ ತೂಗಹಾಕತಕ್ಕದ್ದು. ಅಂಕಿಗಳ ಪ್ರುಥಕ್ಕರಣದ ವಿಷಯದಲ್ಲಿ ಬಾಲಕರಿಗೆ ಅನೇಕ ಉದಾಹರಣೆಗಳನ್ನು ಕೇಳಬೇಕು. ಉದಾ- ೧೨ ಮತ್ತು ೨೧, ೨೩ ಮತ್ತು ೩೨, ೧೬ ಮತ್ತು ೬೧ ಹೀಗೆ ಜೋಡುಗಳಲ್ಲಿ ಪ್ರುಥಕ್ಕರಣದಿಂದ ಅವುಗಳಲ್ಲಿಯ ಅಂತರವನ್ನು ಗೊತ್ತುಮಾಡಿಕೊಡಬೇಕು. ಮೇಲೆ ಹೇಳಿದ ಪದ್ಧತಿಯಿಂದಲೇ ' **ನೂರರ** ' ಸಂಖ್ಯಾಲೇಖನವನ್ನು ಮಾಡಿಸಬಹುದು. ಹತ್ತರ ೧೦ ಗಂಟುಗಳನ್ನು ತೆಗೆದುಕೊಂಡರೆ ನೂರು ಆಗುವದೆಂಬ ಕಲ್ಪನೆಯನ್ನು ಮೊದಲು ೯೯ ರ ಪ್ರುಥಕ್ಕರಣ ಮಾಡಿಸಿ ೧ ಕೂಡಿಸಿದರೆ ಏನಾಗುವದೆಂದು ಕೇಳಿ ಪ್ರತ್ಯಕ್ಷ ಅದರಂತೆ ಗಂಟುಗಳನ್ನು ತೆಗೆದುಕೊಂಡು ಕೂಡಿಸಿ ತೋರಿಸಿದರೆ ನೂರರ ಕಲ್ಪನೆಯು ನಿಶ್ಚಿತವಾಗುವದು. ಮತ್ತು ಈ ಸಂಖ್ಯೆಯನ್ನು ಬರೆಯಿಸುವಾಗ ಪಾಟಿಯ ಮೇಲೆ ಅಥವಾ ಕರೇಹಲಿಗೆಯ ಮೇಲೆ ೩ ಮನೆಮಾಡಿ ಬರೆಯಿಸಬೇಕು. ಮತ್ತು ನೂರು ಬರೆಯುವಾಗ ೩ ಸ್ಥಾನಗಳಿರುವವೆಂಬದು ಬಾಲಕರಿಗೆ ತಿಳಿಯಬೇಕು. ಆನಂತರ ಕೆಳಗೆ ತೋರಿಸಿದ ಉದಾಹರಣೆಗಳಂತೆ ಅನೇಕ ಉದಾಹರಣೆಗಳನ್ನು ಬರೆಯಿಸಬೇಕು:—

೪ ನ್ನು ಮೂರು ಸ್ಥಾನಗಳೊಂದಿಗೆ ಬರೆ. = ೦೦೪
೭೦ ನ್ನು ,, ,, ,, = ೦೭೦
೫ ನ್ನು ,, ,, ,, = ೦೦೫

ಈ ಉದಾಹರಣೆಗಳನ್ನು ಬರೆದ ಮೇಲೆ ೧೦೪. ೬೭೦, ೩೦೫ ಈ ಸಂಖ್ಯೆಗಳನ್ನು ಬರೆಯುವದೂ ಅವುಗಳ ಪ್ರಥಕ್ಕರಣ ಮಾಡುವದೂ ಕಠಿಣವಾಗಲಾರದು. ನೂರಕ್ಕಿಂತ ದೊಡ್ಡ ಸಂಖ್ಯೆಗಳನ್ನು ಬರೆಯುವಾಗ ಸ್ಥಾನಗಳಿಗನುಸರಿಸಿ ಗುಂಪು ಮಾಡಿ ನಡುವೆ ಅಲ್ಪವಿರಾಮಗಳನ್ನು ಹಾಕಬೇಕು.

ಉದಾಃ— ೨೭.೪೯,೦೫೮

( ೨೭ ಲಕ್ಷ, ೪೯ ಸಾವಿರ, ೫೮ )

ಸಂಖ್ಯೆಗಳನ್ನು ಬರೆಯುವಾಗ ಮತ್ತೊಂದು ಲಕ್ಷದಲ್ಲಿಡತಕ್ಕ ಸಂಗತಿ ಏನಂದರೆಃ—ಸ್ಥಾನದಲ್ಲಿ ಇದ್ದ ಅಂಕೆಗಳನ್ನು ಮಾತ್ರ ಹೇಳುತ್ತೇವೆ; ಆದರೆ ಅಂಕೆಗಳು ಇಲ್ಲದ ಸ್ಥಾನವನ್ನು ಬಿಟ್ಟು ಹಾಗೆಯೇ ಮುಂದಕ್ಕೆ ಸಾಗುತ್ತೇವೆ.

ಉದಾ— ೨೦೦೮ ( ಎರಡು ಸಾವಿರ, ನೂರು ಇಲ್ಲ, ಹತ್ತು ಇಲ್ಲ, ಎಂಟು; ಆದರೆ ಹೇಳುವಾಗ ಎರಡುಸಾವಿರ ಎಂಟು ಅನ್ನುತ್ತೇವೆ.) ಹೆಚ್ಚಿನ ಸ್ಥಾನದಿಂದ ಕಡಿಮೆಯ ಸ್ಥಾನಗಳನ್ನು ಎಣಿಸುವ ರೂಢಿ ಮಾಡಿಸಬೇಕು. ಈಗ ಎಕ್ಕಂದಿಂದ, ದಹಂ, ಶತಂ, ಸಾವಿರ, ದಸಾವಿರ, ಲಕ್ಷ ಹೀಗೆ ಎಣಿಸುವರು. ಆದರೆ ಲಕ್ಷದಿಂದ ದಶಸಾವಿರ, ಸಾವಿರ, ಶತಂ, ದಹಂ, ಎಕ್ಕಂ ಹೀಗೆ ಎಣಿಸುವ ರೂಢಿಯನ್ನು ಮಾಡಿದರೆ ಯಾವ ಯಾವ ಸ್ಥಾನಗಳಲ್ಲಿ ಅಂಕಿಗಳನ್ನು ಹಾಕಬೇಕೆಂಬದು ಗೊತ್ತಾಗುವದು.

ಬೇರೀಜು ವಜಾಬಾಕಿಗಳಲ್ಲಿ ಪ್ರಥಕ್ಕರಣದ ಉಪಯೋಗವು ಬಹಳ ಮಟ್ಟಿಗೆ ಆಗುವದು ಉದಾ— ೪೬೭+೫೯೨=

೪ ನೂರರ ಗಂಟು ೬ ಹತ್ತರಗಂಟು ೭ ಬಿಡಿಕಾಳು
+ ೫ , ೯ ,, ೨ ,,
೧೦ ,, ೫ ,, ೯ ,, = ೧೦೫೯

ಇದೇ ಉದಾಹರಣೆಯು ವಜಾಬಾಕಿಯನ್ನು ಮಾಡುವ ರೀತಿ—

೯ ಹತ್ತರ ಗಂಟುಗಳಲ್ಲಿ ಒಂದು ಗಂಟು ಬಿಚ್ಚಿ ಬಿಡಿಕಾಳು ಮಾಡಿದೆ.

೫೯೨—೪೬೭ =

೫ ನೂರರ ಗಂಟು ೮ ಹತ್ತರಗಂಟು ೧೨ ಬಿಡಿಕಾಳು
೪ ,, ೬ ,, ೭ ,,
೧ ,, ,, ೫ ,, =

೪. **ಗುಣಾಕಾರ:—** ಪ್ರತ್ಯಕ್ಷ ವಸ್ತುಗಳನ್ನು ಕೂಡಿಸುವದರಿಂದ ಬೇರೀಜಿನ ಕಲ್ಪನೆಯು ಉಂಟಾಗುವದು. ಮತ್ತು ಒಂದೇ ಸಂಖ್ಯೆಯನ್ನು ಒಂದು ಸಾರೆ, ಎರಡು ಸಾರೆ, ಹೀಗೆ ಅನೇಕ ಸಾರೆ ಬೇರೀಜು ಮಾಡುತ್ತ ಹೋಗುವದರಿಂದ ಆ ಸಂಖ್ಯೆಯ ಗುಣಾಕಾರವು ಬರುವದೆಂಬದು ಅವರಿಗೆ ತಿಳಿಯಹತ್ತುವದು. ಬೇರೀಜುಗಳನ್ನು ಮಾಡುವ ಸುಲಭಕೃತಿಯೆಂದರೆ ಗುಣಾಕಾರವು. ಹೀಗೆ ಬೇರೀಜದ ಸಹಾಯದಿಂದ ಮಗ್ಗಿಗಳನ್ನು ರಚಿಸುತ್ತ ಕಲಿಸಬೇಕು. ಯುರೋಪದ ದೇಶಗಳಲ್ಲಿ ೧೨×೧೨ ಇಷ್ಟು ಮಗ್ಗಿಗಳನ್ನು ಮಾತ್ರ ಕಲಿಸುವರು. ನಮ್ಮಲ್ಲಿ ೧೬×೧೨ ಇಷ್ಟು ಕಲಿಸಿದರೆ ಸಾಕಾಗಬಹುದು. ಯಾಕೆಂದರೆ ನಮ್ಮಲ್ಲಿ ರು. ಗೆ ೧೬ ಅಣೆಗಳು. ಫೂಟಿಗೆ ೧೨ ಇಂಚುಗಳು. ಆಣೆಗೆ ೧೨ ಪೈಗಳು. ಆದರೆ ಸುಮ್ಮನೆ ಗುಡ್ಡಕ್ಕೆ ಕಲ್ಲು ಹೊತ್ತಂತೆ ೩೦ರವರೆಗೆ ಮಗ್ಗಿಗಳನ್ನು ಕಲಿಸುವದರಿಂದ ಬಾಲಕರಿಗೆ ವ್ಯರ್ಥವಾಗಿ ತ್ರಾಸವಾಗುವದೆಂದು ಹೇಳಬಹುದು. ಅವುಗಳ ಅವಶ್ಯಕತೆಯು ವ್ಯವಹಾರದಲ್ಲಿ ಕಂಡುಬರುವದಿಲ್ಲ.

ಎರಡು ಅಥವಾ ಹೆಚ್ಚು ಅಂಕಿಗಳುಳ್ಳ ಸಂಖ್ಯೆಯಿಂದ ಗುಣಿಸುವದು:— ಗುಣಕದಲ್ಲಿ ೨ ಅಂಕಿಗಳಿದ್ದರೆ ಪ್ರಥಕ್ಕರಣದಿಂದ ಅದರಲ್ಲಿ ಹತ್ತರಗಂಟು ಬಿಡಿಕಾಳು ಹೀಗೆ ಬೇರೆ ಮಾಡಿಕೊಂಡು ಅವುಗಳಿಂದ ಗುಣಿಸಿ ಬಂದ ಗುಣಾಕಾರವನ್ನು ಕೂಡಿಸಿದರೆ ಉತ್ತರವು ಹೊರಡುವದು.

ಉದಾ:— ೩೪೫೮×೨೪=

೩೪೫೮×೨೦ = ೬೯೧೬೦

× ೪ = ೧೩೮೩೨

―――――

೮೨೯೯೨

ಇದರಂತೆಯೇ ೩, ೪, ೫, ಅಂಕಿಗಳುಳ್ಳ ಸಂಖ್ಯೆಗಳಿಂದ ಸುಲಭವಾಗಿ ಗುಣಿಸಬಹುದು.

ಇನ್ನು ಗುಣ್ಯಗುಣಕಗಳಲ್ಲಿ ಕಡೆಯ ಸ್ಥಾನಗಳು ಶೂನ್ಯಗಳಿದ್ದರೆ ಗುಣ್ಯಗುಣಕಗಳಲ್ಲಿದ್ದ ಶೂನ್ಯಗಳನ್ನು ಗುಣಾಕಾರದ ಮುಂದೆ ಬರೆದರೆ ತೀರಿತು.

## ಗುಣಾಕಾರದ ಸಂಕ್ಷಿಪ್ತ ಪದ್ಧತಿ.

೧. ೨೫ರಿಂದ ಗುಣಿಸುವದಿದ್ದರೆ ಗುಣ್ಯದ ಮುಂದೆ ೨ ಪೂಜಿಗಳನ್ನು ಬರೆದು ೪ ರಿಂದ ಭಾಗಿಸಬೇಕು.

೨. ೧೨೫ರಿಂದ ಗುಣಿಸುವಾಗ ಮೂರು ಪೂಜಿಗಳನ್ನು ಬರೆದು ೮ ರಿಂದ ಭಾಗಿಸುವದು.

೩. ೬೨೫ರಿಂದ ಗುಣಿಸುವಾಗ ನಾಲ್ಕು ಪೂಜಿಗಳನ್ನು ಬರೆದು ೧೬ ರಿಂದ ಭಾಗಿಸುವದು

೪. ೯೯, ೯೯೯, ೯೮, ೯೯೮ರಿಂದ ಗುಣಿಸುವದಿದ್ದರೆ ಅವಶ್ಯವಿದ್ದಂತೆ, ೩, ೪ ಪೂಜಿಗಳನ್ನು ಗುಣ್ಯದ ಒಂದು ಪಟ್ಟು, ಎರಡು ಪಟ್ಟು ಗುಣಾಕಾರದೊಳಗಿಂದ ವಜಾ ತೆಗೆಯುವದು. ಸಂಕ್ಷಿಪ್ತ ಪದ್ಧತಿಯು ಚನ್ನಾಗಿ ಗೊತ್ತಾದ ಮೇಲೆ ಇದೇ ಪದ್ಧತಿಯಿಂದಲೇ ಗುಣಾಕಾರಮಾಡುತ್ತ ಹೋಗಬೇಕು.

**೫. ಭಾಗಾಕಾರ**—ಗುಣಾಕಾರವು ಬೇರೀಜನ ಸಂಕ್ಷಿಪ್ತಪದ್ಧತಿ ಇದ್ದಂತೆ ಭಾಗಾಕಾರವು ವಜಾಬಾಕಿಯು ಸಂಕ್ಷಿಪ್ತಪದ್ಧತಿಯೆಂಬದು ಗೊತ್ತಾಗುವಂತೆ ಪ್ರತ್ಯಕ್ಷ ಗುಂಡು ಗುಂಡಿನ ಚೌಕಟ್ಟು ತೆಗೆದುಕೊಂಡು ೧೨ ಗುಂಡುಗಳನ್ನು ಬಾಲಕರ ಮುಂದಿಟ್ಟು ೪ ರಂತೆ ಎಷ್ಟುಸಾರೆ ತೆಗೆದುಕೊಳ್ಳಲಿಕ್ಕೆ ಬರುತ್ತದೆ ನೋಡಿರಿ. ಒಂದು ಸಾರೆ ತೆಗೆದುಕೊಂಡರೆ ೮ ಉಳಿಯುವವು. ಎರಡನೇ ಸಾರೆ ತೆಗೆದುಕೊಂಡರೆ ೪ ಉಳಿಯುವವು. ಮೂರನೇ ಸಾರೆ ಏನೂ ಉಳಿಯುವದಿಲ್ಲ. ಅಂದರೆ ೧೨ರಲ್ಲಿ ೪ರ ಗಂಪುಗಳು ಮೂರು ಆಗುವವು ಇದರಂತೆಯೇ ಅನೇಕ ಉದಾಹರಣೆಗಳಿಂದ ಭಾಗಾಕಾರದ ಮರ್ಮವು ತಿಳಿದನಂತರ ಭಾಜ್ಯ, ಭಾಜಕ, ಭಾಗಾಕಾರ, ಶೇಷ ಈ ಹೆಸರುಗಳನ್ನು ಬಾಲಕರಿಗೆ ಹೇಳಬಹುದು. ಶೇಷವು ಭಾಜಕಕ್ಕಿಂತ ಎಂದೂ ಹೆಚ್ಚು ಇರಕೂಡದು. ಇನ್ನು ಮಾದರಿಗಾಗಿ ಒಂದು ಉದಾಹರಣೆಯನ್ನು ಕೊಡುವೆವು.

| ೬೮೦೭೬÷೯೮ | ಹೀಗೆ ಭಾಜಕದ ಗುಣಾಕಾರಗಳನ್ನು ಬರೆಯಬೇಕು. |
| --- | --- |
| ೯೮ ) ೬೮೦೭೬ ( ೬೯೪ | ೯೮ |
| ೫೮೮ | ೧೯೬ |
| —— | ೨೯೪ |
| ೯೨೭ | ೩೯೨ |
| ೮೮೨ | ೪೯೦ |
| —— | ೫೮೮ |
| ೪೫೬ | ೬೮೬ |
| ೩೯೨ | ೭೮೪ |
| —— | ೮೮೨ |
| ೬೪ | ೯೮೦ |

ಉತ್ತರ—ಭಾಗಾಕಾರ ೬೯೪

ಶೇಷ ೬೪

**ಭಾಗಾಕಾರದ ತಾಳೆ**—ಭಾಗಾಕಾರದ ತಾಳೆಯನ್ನು ನೋಡುವದಕ್ಕೆ ಕೆಳಗೆ ಹೇಳಿದ ಸೂಚನೆಗಳನ್ನು ಕೊಟ್ಟಿದೆ.

| ಯಾವದೊಂದು ಸಂಖ್ಯೆಗೆ | | ಈ ಅಂಕಿಯಿಂದ ಭಾಗಹೋಗುವದು. |
|---|---|---|
| ೨<br>೫<br>೧೦ | ಈ ಅಂಕಿಯಿಂದ ನಿಃಶೇಷ ಭಾಗ ಹೋಗಬೇಕಾದರೆ ಕಡೆಯು ಅಂಕಿಗೆ | ೨<br>೫<br>೧೦ |
| ೪<br>೨೫ | ಈ ಅಂಕಿಯಿಂದ ನಿ. ಭಾ. ಹೋ. ಕಡೆಯು ೨ ಅಂಕಿಗಳಿಗೆ | ೪<br>೨೫ |
| ೮<br>೧೨೫ | ಈ ಅಂಕಿಯಿಂದ ನಿ. ಭಾ. ಹೋ. ಕಡೆಯು ೩ ಅಂಕಿಗಳಿಗೆ | ೮<br>೧೨೫ |
| ೩<br>೯ | ಅಂಕಿಗಳ ಬೇರೀಜಿಗೆ | ೩<br>೯ |
| ೬— | ಈ ಅಂಕಿಯಿಂದ ನಿ. ಭಾ. ಹೋ. ೨ ಮತ್ತು ೩ ರಿಂದ ಭಾಗಹೋದರೆ | ೬ |
| ೧೨— | ೪ ಮತ್ತು ೩ ,, ,, | ೧೨ |
| ೧೧— | ಸಮ - ವಿಷಮ ಸ್ಥಾನಗಳಲ್ಲಿದ್ದ ಅಂಕಿಗಳ ಬೇರೀಜುಗಳ ಅಂತರ ಶೂನ್ಯ ಇದ್ದರೆ ಅಥವಾ ೧೧ರಿಂದ ಭಾಗಹೋದರೆ | ೧೧ |

**೬. ಲೆಕ್ಕಗಳು**—ವ್ಯವಹಾರಕ್ಕೆ ಹಚ್ಚಿ ಲೆಕ್ಕಗಳನ್ನು ಹೇಳುವದರಿಂದ ಬಾಲಕರಲ್ಲಿ ಉತ್ಸಾಹವು ಹುಟ್ಟುವದು. ಇಲ್ಲವಾದರೆ ಬೇಸರವುಂಟಾಗುವದು. ಗಡಚಾದ ಉದಾಹರಣೆಗಳನ್ನು ಬಾಲಕರಿಗೆ ಹೇಳಬಾರದು. ಅವರು ಹಿಂದೆ ಕಲಿತ ನೇಮಗಳ ಉಜಳಣಿಯಾಗುವಂತೆ ಕೆಳಗೆ ಹೇಳಿದ ಲೆಕ್ಕಗಳನ್ನು ಬಿಡಿಸಬಹುದು.

(ಅ) ಒಂದು ಸಾಲೆಯಲ್ಲಿ ೫೭೨ ಹುಡುಗ ಹುಡಿಗೆಯರಿದ್ದಾರೆ. ಅವರಲ್ಲಿ ೨೧೮ ಹೆಣ್ಣುಹುಡಿಗೆಯರು ಇದ್ದರೆ ಗಂಡು ಹುಡುಗರು ಎಷ್ಟು ?

(ಬ) ಒಬ್ಬ ಮೋಟಾರದವನು ತಾಸಿಗೆ ೨೬ ಮೈಲಿನಂತೆ ೩೪ ತಾಸುಗಳಲ್ಲಿ ಎಷ್ಟು ಹಾದೀ ಹೋಗುವನು? ಅವನಿಗೆ ೧೪೫೬ ಮೈಲು ಹೋಗಲಿಕ್ಕೆ ಎಷ್ಟು ತಾಸು ಹತ್ತುವವು.

(ಕ) ೫೬೮ ರು. ಬೆಲೆಬಾಳುವ ೩೪ ಕುದುರೆಗಳನ್ನು ಮಾರಿ ೧೩೬ ರು. ಬೆಲೆಬಾಳುವ ಎಷ್ಟು ಆಕಳುಗಳನ್ನು ಕೊಳ್ಳಬಹುದು!

(ಡ) ಒಂದು ವ್ಯಾಪಾರದಲ್ಲಿಲ್ಲಿ ಅ, ಬ, ಕ, ಈ ಮೂವರಿಗೆ ಕೂಡಿ ೬೩೪ ರು. ಉಳಿದವು ಅ, ಬ, ಇವರಿಗೆ ೪೦೮ ಮತ್ತು ಬ, ಕ, ಇವರಿಗೆ ಕೂಡಿ ೪೧೯ ರು. ಸಿಕ್ಕರೆ ಪ್ರತಿಯೊಬ್ಬನ ಲಾಭವೆಷ್ಟು!

ಇಂಥ ಲೆಕ್ಕಗಳನ್ನು ಬಿಡಿಸುವದಕ್ಕಿಂತ ಮೊದಲು ಬಾಲಕರಿಗೆ ಚನ್ನಾಗಿ ವಿಚಾರಮಾಡಲಿಕ್ಕೆ ಹೇಳಬೇಕು. ಅವರು ಕೆಲವು ಹೊತ್ತು ಶಾಂತರೀತಿಯಿಂದ ವಿಚಾರಮಾಡಿದ ನಂತರ ಒಂದೊಂದೇ ಮೆಟ್ಟಿನ ವಿಷಯಕ್ಕೆ ಪ್ರಶ್ನಮಾಡಬೇಕು. ಬಾಲಕರು ಸರಿಯಾಗಿ ಉತ್ತರ ಕೊಟ್ಟಮೇಲೆ ಲೆಕ್ಕವನ್ನು ಮಾಡಹಚ್ಚಬೇಕು. ಇದರಂತೆಯೇ ಗಣಿತ ಪುಸ್ತಕಗಳನ್ನು ಬಾಲಕರ ಕೈಯಲ್ಲಿ ಕೊಟ್ಟು ಉದಾಹರಣೆಗಳನ್ನು ಓದಿಸಿ ಬಾಯಿಂದ ಆ ಲೆಕ್ಕಗಳನ್ನು ಬಿಡಿಸುವ ರೀತಿಗಳನ್ನು ಕೇಳಬೇಕು. ಹೀಗೆ ಮಾಡುವದರಿಂದ ಅಂಕಗಣಿತದೊಳಗಿನ ತತ್ವಗಳ ನಿಶ್ಚಿತ ಕಲ್ಪನೆಯಾಗುವದು.

೭. **ಕೋಷ್ಟಕಗಳು**–ದೇಶೀಕೋಷ್ಟಕಗಳಿಗೂ ವಿದೇಶೀ ಕೋಷ್ಟಕಗಳಿಗೂ ಇರುವ ಸಂಬಂಧವನ್ನು ತಿಳಿಸಿಕೊಟ್ಟು ವಿದೇಶೀ ಕೋಷ್ಟಕಗಳನ್ನು ಕಲಿಸಬೇಕು. ಉದಾ:—

೨ ಮೊಳ=೧ ಯಾರ್ಡು
೧ ಅಂಸು=೨॥ ತೊಲಿ
೧ ಪೌಂಡು (ತೂಕ)=೩೯ ತೊಲಿ (೨ ಶೇರು)
೧ ಕ್ವಾರ್ಟರ=೫೬ ಶೇರು (೧ ಮಣ)
೧ ಹ. ವೇಟ=೪ ಮಣ
೧ ಟನ್=೮೦ ,,
೧ ಮೀಟರ=೪೦ ಇಂಚು (೩೯·೩೭೦೭೯ ಇಂಚು)
೧ ಕಿಲೋಮೀಟರ (೧೦೦೦ ಮೀಟರ) =⅝ ಮೈಲು
೧ ತಾಸು=೨॥ ಗಳಿಗೆ
೨೪ ಮಿನಿಟು=೧ ಗಳಿಗೆ
೧ ಗಳಿಗೆ=೬೦ ಪಳ
೧ ಪಳ=⅖ ಸೇಕಂದು.
೧ ಗ್ಯಾಲನ್=೨೦ ಶೇರು (ತೂಕ)
೧ ಚಿಮಣಿಯೆಣ್ಣಿಯ ಡಬ್ಬಿ=೩೬ ಪೌಂಡು (೭೨ ಶೇರು)
ರೇಲ್ವೆ (ಬಂಗಾಲೀ) ಶೇರು ೧=೮೦ ತೊಲಿ =೪ ಕಚ್ಚಾ ಶೇರು
,, ಮಣ ೧=೪೦ ಶೇರು

**ಚೌರಸ ಅಳತೆಗಳು**— ಹೊಲ, ಮನೆಗಳನ್ನು ಅಳೆಯುವಾಗ ಚೌರಸ ಅಳತೆಗಳು ಬೇಕಾಗುವವು. ೧ ಗುಂಠೆ ಸ್ಥಳವೆಂದರೆ ೩೩ ಫೂಟು ಅಗಲು ೩೩ ಫೂ. ಉದ್ದ ಅಥವಾ ಚೌರಸ ೧ ಸರಪಳಿ ಎಂದು ತಿಳಿಯಬೇಕು.

ಈ ಅಳತೆಯನ್ನು ಗೊತ್ತು ಮಾಡಿಕೊಡುವಾಗ ಸಾಲೆಯ ಸುತ್ತಲಿನ ಬೈಲಿನ ಅಥವಾ ಹೊಲದ ಅಳತೆಮಾಡಿಸಿ ತೋರಿಸಬೇಕು. ಒಂದು ಹೊಲದ ಉದ್ದವು ೭೯೨ ಫೂ. ಅಗಲವು ೪೬೨ ಫೂಟು ಇದ್ದರೆ ಆ ಹೊಲವು ೧೨×೭ ಸರಪಳಿ=೮೪ ಗುಂಠೆ ಅಂದರೆ ೨ ಎಕರೆ ೪ ಗುಂಠೆ ಆಗುವದು. ೫ ಗುಂಠೆ ಸ್ಥಳವು ಮನೆಯನ್ನು ಕಟ್ಟಲಿಕ್ಕೆ ಸಾಕು

**ಘನ ಅಳತೆಗಳು:**— ಇಮಾರತಿಗೆ ಬೇಕಾಗುವ ಕಟ್ಟಿಗೆಯನ್ನು ಘನಫೂಟನಿಂದ ಅಳೆಯುವದುಂಟು. ಬೆಲೆಯಾವರೂ ಘನಫೂಟಿಗೆ ೧೫-೨೦ ರೂ. ಎಂದು ಹೇಳುವರು. ಘನಫೂಟು ಎಂದರೆ ೧ ಫೂ ಉದ್ದ, ೧ ಫೂ. ಅಗಲ, ೧ ಫೂ. ದಪ್ಪ, ಎಂದು ತಿಳಿಯಬೇಕು. ಅದರಂತೆ ೧ ಘನಫೂಟು ನೀರು ಎಂದರೆ ೧೦೦೦ ಔಂಸುಗಳಾಗುವದು. ( ಅಂದರೆ ೨೫ ಕಚ್ಚಾಶೇರು)

**ಏಕಮಾನ ಪದ್ಧತಿ:**—ಪ್ರಮಾಣ ಗಣಿತದಲ್ಲಿ ಏಕಮಾನ ಪದ್ಧತಿಯ ಮಹತ್ವವು ಮತ್ತು ಸೌಲಭ್ಯವು ಪ್ರಾ. ಶಿಕ್ಷಕರಿಗೆ ತಿಳಿದಂತೆ ಕಂಡು ಬರುವದಿಲ್ಲ. ಸಮಪರಿಮಾಣಗಳ ಪ್ರಮಾಣದಿಂದಲೇ ತ್ರೈರಾಶಿಕಗಳನ್ನು ಇಡಲಿಕ್ಕೂ ಬಿಡಿಸಲಿಕ್ಕೂ ಬಾಲಕರಿಗೆ ಹಚ್ಚುವರು. ಪರಿಮಾಣಗಳು ಅಸಮಾನವಿದ್ದಾಗ ವ್ಯಸ್ತಪ್ರಮಾಣದ ಕಲ್ಪನೆಯು ಬಾಲಕರಿಗೆ ತಿಳಿಯದೆ ಅವರು ಯಾಂತ್ರಿಕ ರೀತಿಯಿಂದ ಲೆಕ್ಕಗಳನ್ನು ಬಿಡಿಸಹತ್ತುವರು. ಗಣಿತವು ತಿಳುವಳಿಕೆಯನ್ನು ಹುಟ್ಟಿಸುವದಕ್ಕೆ ಮುಖ್ಯ ಸಾಧನವಾದದರಿಂದ ಬಾಲಕರಿಗೆ ಸಮಂಜಸವಾಗಿ ತಿಳಿಯುವಂತೆ ಸುಲಭ ಪದ್ಧತಿಯ ಉಪಯೋಗವನ್ನು ಮಾಡುವದು ಅವಶ್ಯವದೆ. ಇಂಥ ಸುಲಭ ಪದ್ಧತಿಯು ಏಕಮಾನ ಪದ್ಧತಿಯು. ಪ್ರಮಾಣದ ಚಿಹ್ನಗಳನ್ನಿಟ್ಟು ಲೆಕ್ಕಗಳನ್ನು ಬಿಡಿಸುವದು ಆಕ್ಷೇಪಾರ್ಹವೆಂದು ಹೊಸ ದೃಷ್ಟಿಯ ಪರೀಕ್ಷಕರು ಅನ್ನುತ್ತಾರೆ. ಆದದರಿಂದ ಪ್ರಾ. ಶಿಕ್ಷಕರು ಏಕಮಾನ ಪದ್ಧತಿಯನ್ನು ರೂಢಿಯಲ್ಲಿ ತರುವದು ಅವಶ್ಯವದೆ. ಈ ಪದ್ಧತಿಯಿಂದ ದಡ್ಡಹುಡುಗರಿಗೆ ವಿಷಯಜ್ಞಾನವು ಸುಲಭವಾಗಿ ಆಗುವದು.

**೧ ನೇ ಮೆಟ್ಟು**—ಒಂದು ವಸ್ತುವಿನ ಬೆಲೆಕೊಟ್ಟಾಗ ಅಂಥ ಅನೇಕ ವಸ್ತುಗಳ ಬೆಲೆ ತೆಗೆಯುವದು.

ಬೆಲ್ಲವು ಪಂಛೇರಿಗೆ ೫ ಆ. ಆದರೆ ಒಂದು ಮಣದ ಬೆಲೆ ಏನು? ಇಂಥ ಅನೇಕ ಉದಾಹರಣೆಗಳನ್ನು ಸಾದಾ ಗುಣಾಕಾರದಿಂದ ಬಿಡಿಸ ಬಹುದೆಂಬದು ಬಾಲಕರಿಗೆ ಸಹಜವಾಗಿ ತಿಳಿಯುವದು.

**೨ ನೇ ಮೆಟ್ಟು**— ಕೆಲವು ವಸ್ತುಗಳ ಬೆಲೆಕೊಟ್ಟಾಗ ಒಂದರ ಬೆಲೆ ತೆಗೆಯುವದು. ಉದಾ-೨೪ ಪುಸ್ತಕಗಳ ಬೆಲೆ ೧೪೪ ರು. ಆದರೆ ಒಂದರ ಬೆಲೆ ಏನು?

ಈ ಮೆಟ್ಟು ಹಿಂದೆ ಹೇಳಿದ ಮೆಟ್ಟಿನ ವಿರುದ್ಧವೆಂಬದು ತಟ್ಟನೆ ತಿಳಿಯುವದು.

ಗುಣಾಕಾರದ ಬದಲು ಇಲ್ಲಿ ಭಾಗಾಕಾರವನ್ನು ಮಾಡಿದರೆ ಬೆಲೆ ಬರುವದೆಂಬದ ಗೊತ್ತಾಗುವದು. ಒಟ್ಟು ಬೆಲೆಗೆ ಪುಸ್ತಕಗಳ ಸಂಖ್ಯೆಯಿಂದ ಭಾಗಿಸಿದರೆ ಒಂದು ಪುಸ್ತಕದ ಬೆಲೆಬರುವದು.

**೩ ನೇ ಮೆಟ್ಟು**—ಕೆಲವು ವಸ್ತುಗಳ ಬೆಲೆಕೊಟ್ಟಾಗ ಅಂಥ ಬೇರೆ ಕೆಲವು ವಸ್ತುಗಳ ಬೆಲೆ ತೆಗೆಯುವದು.

೩೬ ಕಂಬಳಿಗಳಿಗೆ ೨೩೪ ರು. ಆದರೆ ೪೮ ಕಂಬಳಿಗಳ ಬೆಲೆ ಏನು?

ಇದರಲ್ಲಿ ಮೊದಲು ಒಂದು ಕಂಬಳಿಯ ಬೆಲೆಯನ್ನು ತೆಗೆದಿಟ್ಟುಕೊಂಡು ನಂತರ ೪೮ ಕಂಬಳಿಗಳ ಬೆಲೆಯನ್ನು ತೆಗೆಯುವದು ಸುಲಭವಾಗುವದು.

೩೬ ಕಂಬಳಿಗಳಿಗೆ ೨೩೪ ರು.

೧ ,, $\frac{೨೩೪}{೩೬}$ = ೬ ರು. ೮ ಆ.

೪೮ ,, ೬ ರು. ೮ ಆ. × ೪೮ = ೨೮೮
೨೪
———
೩೧೨ ರು.

**ಸಮಪ್ರಮಾಣದ ಪದ್ಧತಿ:**—ಪ್ರಮಾಣವೆಂದರೇನೆಂಬದರ ತಿಳುವಳಿಕೆಯಿಲ್ಲದ್ದರಿಂದ ಬಾಲಕರಿಗೆ ತ್ರೈರಾಶಿಕಗಳಿಂದ ಉದಾಹರಣೆಗಳನ್ನು ಬಿಡಿಸುವದು ಕಠಿಣವಾಗುವದು. ಆದದರಿಂದ ಮೊದಲು ಪ್ರಮಾಣದ ಕಲ್ಪನೆಯನ್ನು ಮಾಡಿಕೊಡುವದು ಅತ್ಯವಶ್ಯವದೆ. ಅಪೂರ್ಣಾಂಕ ಅಥವಾ ಪ್ರಮಾಣವೆಂದರೆ ಒಂದೇ ಎಂಬ ತಿಳುವಳಿಕೆಯು ಹುಡುಗರಿಗೆ ಇರುವದಿಲ್ಲ. ಅದನ್ನು ಅನೇಕ ಉದಾಹರಣೆಗಳಿಂದ ತಿಳಿಸಿಕೊಡುವದು ಅತ್ಯವಶ್ಯವು. ಎರಡು ಪದಗಳು ಯಾವ ಪ್ರಮಾಣದಲ್ಲಿ ಅವೆಯೆಂಬುವದನ್ನು ಬರೆಯಬೇಕಾದರೆ ಪ್ರಮಾಣದ ಎರಡೂ ಪದಗಳು ಒಂದೇ ಜಾತಿಯವರಿಬೇಕೆಂಬದು ಗೊತ್ತಾಗಲಿಕ್ಕೆ ಬೇಕು.

ಉದಾ:— ೨ ಆಣೆ : ೧ ರು. ಎಂಬದನ್ನು ಬರೆಯಬೇಕಾದರೆ ರೂ. ಗೆ ಆಣೆ ಮಾಡಿಕೊಂಡು ೨ : ೧೬ ಅಥವಾ ೧ : ೮ ಅಥವಾ $\frac{೧}{೮}$ ಹೀಗೆ ಬರೆಯಬೇಕು.

ಪ್ರಮಾಣದ : ಈ ಚಿಹ್ನವು ಭಾಗಾಕಾರದ ÷ ಈಚಿಹ್ನದ ಸಂಕ್ಷಿಪ್ತ ರೂಪವು. ಮೇಲಿನ ವಿವರಣೆಯು ಮೇಲಿಂದ ಪ್ರಮಾಣದಲ್ಲಿಯು ಎರಡು ಪದಗಳು ಅಪೂರ್ಣಾಂಕದಲ್ಲಿಯ ಅಂಶಭೇದಗಳಂತೆ ಇರುವವೆಂಬದು ಗೊತ್ತಾಗುವದು. ಮತ್ತು ಅವುಗಳಲ್ಲಿ

ಯಾವದು ಅಂಶವು ಯಾವದು ಛೇದವು ಎಂಬ ಕಲ್ಪನೆಯನ್ನು ಉದಾಹರಣೆಗಳಿಂದ ಸ್ಪಷ್ಟವಾಗಿ ತಿಳಿಸಿಕೊಡಬೇಕು. ಮತ್ತು ಹಿಂದಿನ ಪದ ಹಾಗೂ ಮುಂದಿನ ಪದಗಳೆಂಬ ಸುಲಭ ಶಬ್ದಗಳನ್ನು ಉಪಯೋಗಿಸಬೇಕು. ಆನಂತರ ಕೆಲವು ಉದಾಹರಣೆಗಳನ್ನು ಹೇಳಿ ಪ್ರಮಾಣದಂತೆಯೂ ಅಪೂರ್ಣಾಂಕದಂತೆಯೂ ಕೊಟ್ಟ ಪದಗಳನ್ನು ಬರೆಯಲಿಕ್ಕೆ ಹಚ್ಚಬೇಕು.

ಉದಾ:—

ಪೈ. ಪೈ.

$$\text{೫ ಆ. ೪ ಪೈ. : ೧ ರು.} = \text{೬೪ : ೧೯೨} = \frac{\text{೬೪}}{\text{೧೯೨}} = \frac{\text{೧}}{\text{೩}}$$

$$\text{೧ ಯಾ. ೪ ಇ. : ೧ ಫೂ. ೪ ಇ.} = \text{೪೦}'' : \text{೧೬}'' = \frac{\text{೫}}{\text{೨}}$$

ಇಲ್ಲಿ ಒಂದೇ ಜಾತಿಯ ಪದಗಳನ್ನು ಮಾಡಿಕೊಳ್ಳಲಿಕ್ಕೆ ರೂಪಾಂತರವನ್ನು ಮಾಡುವದು ಅವಶ್ಯವೆಂಬದು ಕಂಡು ಬರುವದು.

ಆನಂತರ ಎರಡೆರಡು ಪದಗಳ ಜೋಡುಗಳನ್ನು ತೆಗೆದುಕೊಂಡು ಅವುಗಳನ್ನು ತುಲನೆ ಮಾಡಲಿಕ್ಕೆ ಹಚ್ಚಬೇಕು. ಇಂಥ ಮೊದಲನೇ ಜೋಡಿನಿಂದ ಹೊರಡುವ ಗುಣೋತ್ತರವು ೨ನೇ ಜೋಡಿನಿಂದ ಬರುವ ಗುಣೋತ್ತರಕ್ಕೆ ಸರಿಯಾಗಬೇಕಾಗುವದು. ಉದಾ:

೨ ಆ. ೮ ಪೈ. : ೧ ರು. = ೮ ಶೇ. : ೧ ಮಣ.

ಇದರಲ್ಲಿ ಮೊದಲನೇ ಪದದ ೬ ಪಟ್ಟು ೨ನೇ ಪದವು ಇರುವದು.

ಹಾಗೆಯೇ ೩ನೇ „ „ ೪ನೇ „ „

ಅಂದರೆ ಇವೆರಡು ಜೋಡುಗಳಲ್ಲಿಯ ಗುಣೋತ್ತರಗಳು (ಅಂದರೆ ೬ ಪಟ್ಟು) ಸರಿ ಇರುವವು. ಇದಕ್ಕೇ ಪ್ರಮಾಣವೆನ್ನುವರು. ಪ್ರಮಾಣದಲ್ಲಿ ನಾಲ್ಕು ಪದಗಳಿರುವವು. ಅವುಗಳಲ್ಲಿ ಮೊದಲನೇ ಪದಕ್ಕೆ ಆದಿ, ಕಡೆಯದಕ್ಕೆ ಅಂತ್ಯವೆಂದೂ ನಡುವಿನ ಎರಡೂ ಪದಗಳಿಗೆ ಮಧ್ಯ ಪದಗಳೆಂದೂ ಅನ್ನುವರು. ಉದಾ:

೧೨ : ೪ = ೫೧ : ೧೭. ಈ ಪ್ರಮಾಣದಲ್ಲಿ,

೧೨ ಆದಿಪದ, ೧೭ ಅಂತ್ಯಪದ, ೪ ಹಾಗೂ ೫೧ ಇವು ಮಧ್ಯ ಪದಗಳೆಂಬದು ಗೊತ್ತಾಗುವದು. ಇದರಂತೆ ಅನೇಕ ಉದಾಹರಣೆಗಳನ್ನು ಕೊಟ್ಟು ಬಾಲಕರಿಗೆ ಬೇರೆ ಬೇರೆ ಪದಗಳನ್ನು ಹೇಳಲಿಕ್ಕೆ ಹಚ್ಚಬೇಕು. ಆನಂತರ ಆದಿ, ಅಂತ್ಯ ಪದಗಳನ್ನು ಒತ್ತಟ್ಟಿಗೆ ಮಧ್ಯ ಪದಗಳನ್ನು ಮತ್ತೊತ್ತಟ್ಟಿಗೆ ಗುಣಾಕಾರ ಮಾಡಲಿಕ್ಕೆ

ಹಚ್ಚಬೇಕು. ಅಂದರೆ ಅವೆರಡೂ ಗುಣಾಕಾರಗಳು ಸರಿಯೆಂದು ಕಂಡು ಬರುವದು. ಉದಾ :

೨೮ : ೭ = ೮ : ೨ ಈ ಪ್ರಮಾಣದಲ್ಲಿ ೨೮ × ೨ = ೭ × ೮ = ೫೬

ಇದೇ ಪ್ರಕಾರ ಇನ್ನೂ ಅನೇಕ ಉದಾಹರಣೆಗಳನ್ನು ಹೇಳಿದ ಮೇಲೆ ಪ್ರಮಾಣದಲ್ಲಿ "ಆದಿ ಅಂತ್ಯ ಪದಗಳ ಗುಣಾಕಾರವು ಮಧ್ಯ ಪದಗಳ ಗುಣಾಕಾರಕ್ಕೆ ಸರಿ ಇರುವದು" ಎಂಬ ನಿಯಮವನ್ನು ಕಂಡು ಹಿಡಿಯ ಬಹುದು.

ಆದದರಿಂದ ಪ್ರಮಾಣದಲ್ಲಿ ಕೊಟ್ಟ ನಾಲ್ಕು ಪದಗಳಲ್ಲಿ ಯಾವ ಪದವನ್ನಾದರೂ ಹೇಳದೆ ಬಿಟ್ಟರೆ ಅದು ಎಷ್ಟೆಂಬದನ್ನು ಗೊತ್ತು ಹಚ್ಚಲಿಕ್ಕೆ ಬರುವದು. ಉದಾ :

೨೫ : ? = ೩೦ : ೬ ಈ ಪ್ರಮಾಣದಲ್ಲಿ,

೨೫ × ೬ = ೩೦ × ?

∴ ೧೫೦ = ೩೦ × ?

∴ $\frac{೧೫೦}{೩೦}$ = ?

∴ ೫ = ?

ಕೊಡದಿದ್ದ ಪದವು ೫ ಎಂಬದು ಗೊತ್ತಾಗುವದು.

ಹೀಗೆ ಪ್ರಮಾಣದಲ್ಲಿಯ ೩ ಪದಗಳನ್ನು (ರಾಶಿಗಳನ್ನು) ಕೊಟ್ಟಾಗ ೪ನೇ ಪದವನ್ನು (ರಾಶಿಯನ್ನು) ಗೊತ್ತು ಮಾಡಿಕೊಳ್ಳಬಹುದು. ಈ ಗೊತ್ತು ಹಚ್ಚುವ ಕ್ರಮಕ್ಕೆ ತ್ರೈರಾಶಿಕದಿಂದ (ಮೂರು ಪದಗಳಿಂದ) ಲೆಕ್ಕವನ್ನು ಬಿಡಿಸುವ ಪದ್ಧತಿ ಎನ್ನುವರು.

ಪ್ರಮಾಣದ ತತ್ವವು ಅವಗತವಾದ ಮೇಲೆ ಅನೇಕ ಉದಾಹರಣೆಗಳಿಂದ ಅದು ದೃಢವಾಗುವಂತೆ ಮಾಡಬೇಕು. ಉದಾ:

೧೮ ಜರದ ಟೊಪ್ಪಿಗೆಗಳ ಬೆಲೆ ೭೨ ರೂ. ಆದರೆ ೨೫ ಟೊಪ್ಪಿಗೆಗಳಿಗೆ ಏನು ಕೊಡಬೇಕು.

ಈ ಲೆಕ್ಕವನ್ನು ಪ್ರಮಾಣಕ್ಕನುಸರಿಸಿ ಬರೆಯಬೇಕು.

೧೮ : ೭೨ = ೨೫ : ?

ಇದರಲ್ಲಿ ಅಂತ್ಯ ಪದವನ್ನು ಕೊಟ್ಟಿಲ್ಲ. ಅದು ೨೫ ಟೊಪ್ಪಿಗೆಗಳ ಬೆಲೆ ಇರಬೇಕು. ಆದದರಿಂದ—

$$೭೨ \times ೨೫ \div ೧೮ = ೧೦೦.$$

ಇದು ನೂರು ರು. ಆಗುವದು

ಈ ಲೆಕ್ಕವನ್ನು ಏಕಮಾನ ಪದ್ಧತಿಯಿಂದ ಬಿಡಿಸುವದು ಸುಲಭವೆಂದು ಕಂಡು ಬರುವದು.

೧ಕ್ಕೆ = ೪ ರು.

೨೫ಕ್ಕೆ = ೧೦೦ ರು. ಎಂದು ಬಾಲಕರು ತಟ್ಟನೆ ಹೇಳುವರು. ಮತ್ತು ದೊಡ್ಡ ಸಂಖ್ಯೆಗಳಿದ್ದಲ್ಲಿ ಒಮ್ಮೊಮ್ಮೆ ತ್ರೈರಾಶಿಕಗಳನ್ನು ಬಿಡಿಸುವಾಗ ಗುಣಾಕಾರ, ಭಾಗಾಕಾರ ತಪ್ಪುವರು. **ಆದದರಿಂದ ೪ ನೇ ಇಯತ್ತೆಯಲ್ಲಿ ಏಕಮಾನ ಪದ್ಧತಿಯಿಂದಲೇ ಉದಾಹರಣೆಗಳನ್ನು ಬಿಡಿಸತಕ್ಕದ್ದು.**

**ವ್ಯವಹಾರೀ ಅಪೂರ್ಣಾಂಕ:—** ಅಳತೆ, ತೂಕ, ಹಣ ಇವುಗಳ ಭಾಗಗಳನ್ನು ತಿಳಿದುಕೊಂಡು ಅಗವುಳನ್ನು ಉದಾಹರಣೆಗಳಲ್ಲಿ ಉಪಯೋಗಿಸಿಕೊಳ್ಳಲಿಕ್ಕೆ ವ್ಯ. ಅ. ಗಳು ಬೇಕು. ಆರಂಭದಲ್ಲಿ ಅಂದರೆ ೧ ನೇ ಇಯತ್ತೆಯಲ್ಲಿ ಅನೇಕ ಮೂರ್ತ ಉದಾಹರಣೆಗಳಿಂದ ಭಾಗಗಳ ಕಲ್ಪನೆಯಾದನಂತರ ಅವುಗಳನ್ನು ಬರೆಯುವ ಪದ್ಧತಿಯನ್ನು ಬಾಲಕರಿಗೆ ತಿಳಿಸಿಕೊಡಬೇಕು. ಅಪೂರ್ಣಾಂಕ, ಹಾಗೂ ಅಂಶಛೇದಗಳ ಕಲ್ಪನೆಯು ನಿಶ್ಚಿತವಾಗಬೇಕು. ಬೇರೆ ಬೇರೆ ಅಪೂರ್ಣಾಂಕಗಳ ತುಲನೆಮಾಡಿ **ಒಂದೇ ಛೇದವುಳ್ಳ** ಅಪೂರ್ಣಾಂಕಗಳಲ್ಲಿ ಹೆಚ್ಚಿನ ಅಂಶವುಳ್ಳ ಅಪೂರ್ಣಾಂಕ ದೊಡ್ಡದು. **ಒಂದೇ ಅಂಶವುಳ್ಳ** ಅಪೂರ್ಣಾಂಕಗಳಲ್ಲಿ ಹೆಚ್ಚಿನ ಛೇದವುಳ್ಳ ಅಪೂರ್ಣಾಂಕ ತೀರ ಸಣ್ಣದು ಎಂಬ ಮಾತನ್ನು ಗೊತ್ತು ಹಿಡಿಯಬೇಕು. ಉದಾ:—

$\frac{೭}{೮}, \frac{೩}{೮}, \frac{೨}{೮}, \frac{೫}{೮}, \frac{೬}{೮}$ ಇವುಗಳಲ್ಲಿ $\frac{೭}{೮}$ ಇದು ಎಲ್ಲಕ್ಕೂ ದೊಡ್ಡದು.

$\frac{೪}{೧೬}, \frac{೪}{೯}, \frac{೪}{೫}, \frac{೪}{೧೮}$ ಇವುಗಳಲ್ಲಿ $\frac{೪}{೧೮}$ ಇದು ತೀರ ಸಣ್ಣದು ಎಂಬದು ಸಹಜವಾಗಿ ಗೊತ್ತಾಗುವದು.

**೨ ನೇ ಮೆಟ್ಟು**— ಅಪೂರ್ಣಾಂಕದಲ್ಲಿ ಮತ್ತೊಂದು ಮಹತ್ವದ ಸಂಗತಿ ಏನಂದರೆ— ಅಂಶಛೇದಗಳಿಗೆ ಒಂದೇ ಸಂಖ್ಯೆಯಿಂದ ಗುಣಾಕಾರ ಅಥವಾ ಭಾಗಾ

ಕಾರ ಮಾಡಿದರೆ ಅಪೂರ್ಣಾಂಕದ ಬೆಲೆಯು ಹೆಚ್ಚು ಕಡಿಮೆ ಯಾಗುವದಿಲ್ಲ ಉದಾ—

$$\frac{೧}{೪} = \frac{೨}{೮} = \frac{೩}{೧೨} = \frac{೫}{೨೦}$$

ಅನಂತರ ಬೆಲೆಯು ಹೆಚ್ಚು ಕಡಿಮೆ ಯಾಗದಂತೆ ಅಪೂರ್ಣಾಂಕಗಳನ್ನು ಬದಲಿಸಲಿಕ್ಕೆ ಅನೇಕ ಉದಾಹರಣೆಗಳನ್ನು ಹೇಳಬೇಕು.

ಬಾಲಕರಿಗೆ ಸಮ, ವಿಷಮ, ಮಿಶ್ರ, ಪ್ರಭಾಗಜಾತಿಯ ಅಪೂರ್ಣಾಂಕ, ಮತ್ತು ಭಾಗಾನುಬಂಧ ಪೂರ್ಣಾಂಕ (ಭಾಗಗಳುಳ್ಳ ಪೂರ್ಣ ಅಂಕ) ಎಂಬ ಭಾಗಗಳ ಹೆಸರುಗಳನ್ನು ಹೇಳುವದು ಅವಶ್ಯ ತೋರುವದಿಲ್ಲ.

**ಸಮಚ್ಛೇದರೂಪ**— ಕೊಟ್ಟ ಅನೇಕ ಅಪೂರ್ಣಾಂಕಗಳಿಗೆ ಬೇರೆ ಬೇರೆ ಛೇದಗಳಿದ್ದಾಗ ಒಂದೇ ಛೇದವನ್ನು ಮಾಡುವ ಕ್ರಮವು ಗೊತ್ತಾಗಲಿಕ್ಕೆ ಬೇಕು. ಅಂದರೆ ಅವುಗಳ ಬೇರೀಜು ವಜಾಬಾಕಿಗಳನ್ನು ಮಾಡಲಿಕ್ಕೆ ಬರುವದು. ಛೇದಗಳು ದೊಡ್ಡ ಅಂಕಿಗಳಾಗಿದ್ದರೆ ಅವುಗಳ ಲ. ಸಾ. ಭಾಜ್ಯವನ್ನು ತೆಗೆಯಬೇಕು. ಹೀಗೆ ಒಂದೇ ಛೇದವು ಗೊತ್ತಾದ ನಂತರ ಅಂಶಗಳಲ್ಲಿ ಸಹ ಅದಕ್ಕನುಸರಿಸಿ ಹೆಚ್ಚು ಕಡಿಮೆ ಮಾಡಬೇಕಾಗುವದು. ಉದಾ—

$$\frac{೫}{೬} + \frac{೭}{೯} - \frac{೨}{೩} = \frac{೧೫ + ೧೪ - ೧೨}{೧೮} = \frac{೧೭}{೧೮}$$

ಇನ್ನು ವ್ಯವಹಾರೀ ಅಪೂರ್ಣಾಂಕಗಳ ಉಪಯೋಗವು ತ್ರೈರಾಶಿಕಗಳನ್ನು ಬಿಡಿಸುವಾಗ ಆಗುವದು. ಅಮೂರ್ತ ಅಂಕಗಳನ್ನು ಇಟ್ಟುಕೊಂಡು ಉದ್ದ ಉದ್ದವಾದ ಅಪೂರ್ಣಾಂಕಗಳ ಲೆಕ್ಕಗಳನ್ನು ಬಿಡಿಸುವದು ಪ್ರಾ ಶಾ. ಗಳ ೪ನೇ ಇಯತ್ತೆಯಲ್ಲಿ ಅವಶ್ಯವಿಲ್ಲ. ಮೇಲಿನ ಇಯತ್ತೆಯ ಬಾಲಕರು ಅವುಗಳನ್ನು ಕಲಿಯ ಬಹುದು.

**ದಶಾಂಶ ಅಪೂರ್ಣಾಂಕ**— ದಶಾಂಶದ ತತ್ವವು ಬಾಲಕರಿಗೆ ತಿಳಿಯುವ ಮೊದಲು ಶುದ್ಧ ಸಂಖ್ಯೆಯಲ್ಲಿ ಬಲಗಡೆಗೆ ಪ್ರತಿಯೊಂದು ಸ್ಥಾನಕ್ಕೆ ಹೋದಂತೆ ಹತ್ತು ಪಟ್ಟನಿಂದ ಸಂಖ್ಯೆಯು ಕಡಿಮೆಯಾಗುತ್ತ ಹೋಗುತ್ತದೆಂಬ ಮಾತನ್ನು ಅವರ ಲಕ್ಷಕ್ಕೆ ತಂದುಕೊಡಬೇಕು. ಉದಾ—

೧೧೧೧ ಈ ಸಂಖ್ಯೆಯಲ್ಲಿ ಸಾವಿರ ಸ್ಥಾನಕ್ಕಿಂತ ನೂರರ ಸ್ಥಾನವು ೧೦ ಪಟ್ಟಿನಿಂದ ಕಡಿಮೆಯಾಗುವದು. ಹೀಗೇಯೇ ಮುಂದೆ

ಅದರಂತೆ ಏಕ್ಕಂಸ್ಥಾನದ ಮುಂದೆ ಅಂಕಗಳನ್ನು ಬರೆದರೆ ಅವು ಸಹ ಇದೇ ಪ್ರಮಾಣದಿಂದ ಕಡಿಮೆಯಾಗುತ್ತ ಹೋಗುವವು. ಉದಾ—

೪೫೯ . ೧೨೩ ಇದನ್ನು ಪ್ರಥಃಕರಣಮಾಡಿ ಬರೆದರೆ

೪೦೦ + ೫೦ + ೯ + $\frac{೧}{೧೦}$ + $\frac{೨}{೧೦೦}$ + $\frac{೩}{೧೦೦೦}$ ಹೀಗೆ ಆಗುವದು.

ದಶಾಂಶ ಚಿಹ್ನೆವು ಪೂರ್ಣ ಹಾಗು ಅಪೂರ್ಣ ಅಂಕಗಳನ್ನು ಬಿಡಿಬಿಡಿಯಾಗಿ ತೋರಿಸುವ ಬಾಂದಿನ ಗುರುತು ಎಂದು ತಿಳಿಯುವದು. ಈ ಪ್ರಾಥಮಿಕ ಕಲ್ಪನೆಯಾದ ನಂತರ ಬಾಲಕರು ದಶಾಂಶ ಅಪೂರ್ಣಾಂಕವನ್ನು ವ್ಯವಹಾರೀ ಅಪೂರ್ಣಾಂಕಕ್ಕೆ ರೂಪಾಂತರ ಮಾಡಬಹುದು. ಆದರಂತೆ ಬೇರೀಜು ವಜಾಬಾಕಿಗಳನ್ನು ಮಾಡಬಹುದು ಹಾಗು ಶುದ್ಧಸಂಖ್ಯೆಯಿಂದ ಗುಣಾಕಾರ ಅಥವಾ ಭಾಗಾಕಾರ ಮಾಡಬಹುದು ಅನೇಕ ಉದಾಹರಣೆಗಳಿಂದ ದಶಾಂಶದ ತತ್ವವು ಮನವರಿಕೆಯಾಗುವಂತೆ ಮಾಡಬೇಕು. ಉದಾ—

(೧) ೪೬ ಪೂರ್ಣಾಂಕ $\frac{೧}{೧೦೦}$ ಇದನ್ನು ದಶಾಂಶದಲ್ಲಿ ಬರೆ.

(೨) ೧೪ ಸಾವಿರ ೮ ಮತ್ತು $\frac{೭}{೧೦೦೦}$ ಇದನ್ನು ದಶಾಂಶದಲ್ಲಿ ಬರೆ.

(೩) ೫೯೭, $\frac{೩}{೧೦}$, $\frac{೯}{೧೦೦}$, $\frac{೬}{೧೦೦೦}$ ಇವುಗಳನ್ನು ದಶಾಂಶದಲ್ಲಿ ಬರೆ.

ಹತ್ತರ ಘಾತಗಳಿಂದ ದಶಾಂಶಕ್ಕೆ ಗುಣಾಕಾರ ಮತ್ತು ಭಾಗಾಕಾರವನ್ನು ಮಾಡುವಾಗ ಬಲಕ್ಕೆ ಅಥವಾ ಎಡಕ್ಕೆ ಚಿಹ್ನವನ್ನು ಸರಿಸಬೇಕಾಗುವದೆಂಬ ಮಾತನ್ನು ಕೆಲವು ಉದಾಹರಣೆಗಳಿಂದ ಸ್ಪಷ್ಟಮಾಡಿಕೊಡಬೇಕು—

(೧) ಕೆಳಗಿನ ಸಂಖ್ಯೆಗಳಿಗೆ ೧೦, ೧೦೦, ೧೦೦೦, ಗಳಿಂದ ಗುಣಿಸು.

(ಅ) ·೩ (ಬ) ·೦೭ (ಕ) ೪೮·೬ (ಡ) ೯೫೮·೦೨೩ (ಇ) ·೦೦೪೭

(೨) ಮೇಲಿನ ಸಂಖ್ಯೆಗಳ $\frac{೧}{೧೦}$, $\frac{೧}{೧೦೦}$, $\frac{೧}{೧೦೦೦}$ ನೇ ಅಂಶಗಳನ್ನು ಬರೆಯಿರಿ

**ಗುಣಾಕಾರ—** ಗುಣ್ಯ, ಗುಣಕಗಳಲ್ಲಿ ದಶಾಂಶ ಅಪೂರ್ಣಾಂಕಗಳಿದ್ದಾಗ ಆರಂಭದಲ್ಲಿ ದಶಾಂಶದಿಂದಲೂ ವ್ಯವಹಾರೀ ಅಪೂರ್ಣಾಂಕದಿಂದಲೂ ಗುಣಾಕಾರವನ್ನು ಮಾಡಿಸಬೇಕು. ಉಧಾ—

(೧) ೧೮·೫೬ = ೧೮ $\frac{೫೬}{೧೦೦}$ × ೭ $\frac{೫}{೧೦೦}$

೭·೦೫ = $\frac{೧೮೫೬}{೧೦೦}$ × $\frac{೭೦೫}{೧೦೦}$

೯೨೮೦

೧೨೯೯೨

೧೩೦·೮೪೮೦ = $\frac{೧೩೦೮೪೮೦}{೧೦೦೦೦}$ = ೧೩೦ $\frac{೮೪೮}{೧೦೦೦}$

ಮೇಲೆ ಹೇಳಿದ ಉದಾಹರಣೆಗಳಿಂದ ಕೊಟ್ಟ ದಶಾಂಶ ಅಪೂರ್ಣಾಂಕಗಳ ಗುಣಾಕಾರವು ವ್ಯವಹಾರೀ ಅಪೂರ್ಣಾಂಕದಂತೆ ಆಗುವದೆಂಬದು ತಿಳಿಯುವದು. ಅದರ ಅಂಶವು ಕೊಟ್ಟ ಸಂಖ್ಯೆಗಳ ಗುಣಾಕಾರವು, ಮತ್ತು ಛೇದವು ೧ರ ಮುಂದೆ ಗುಣ್ಯಗುಣಕಗಳಲ್ಲಿ ದಶಾಂಶಸ್ಥಾನಗಳಿದ್ದಷ್ಟು ಪೂಜಿಗಳುಳ್ಳದ್ದು ಆಗುವವು. ಇದಕ್ಕೆ ಪುನಃ ದಶಾಂಶರೂಪ ಕೊಡಬೇಕಾದರೆ ಛೇದದಲ್ಲಿದ್ದಷ್ಟು ಸ್ಥಾನಗಳನ್ನು ಎಣಿಸಿ ದಶಾಂಶ ಚಿಹ್ನವನ್ನು ಕೊಡಬೇಕು. ಹೀಗೆ ದಶಾಂಶ ಗುಣಾಕಾರದ ನಿಯಮವು ಗೊತ್ತಾಗುವದು.

ಸಾದಾ ಗುಣಾಕಾರದ ಕೃತಿಯಲ್ಲಿ ಗುಣಕದಲ್ಲಿ ಬಲಗಡೆಯ ಅಂಕೆಯಿಂದ ಗುಣಾಕಾರವನ್ನು ಮಾಡುತ್ತ ಹೋಗುವದುಂಟು. ದಶಾಂಶದಲ್ಲಿ ಹಾಗೆ ಗುಣಾಕಾರವನ್ನು ಮಾಡುವದಲ್ಲದೆ ಎಡಗಡೆಯಿಂದ ಸಹ ಮಾಡಬಹುದೆಂಬದನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಕೊಡಬೇಕು. ಉದಾ—

| | |
|---|---|
| ೧೫ . ೯೬ | |
| ೮ . ೫೪ | |
| ೧೨೭ . ೬೮ | ೮ ರಿಂದ |
| ೭ . ೯೮೦ | . ೫ ,, |
| . ೬೩೮೪ | . ೦೪ ,, |
| ೧೩೬ . ೨೯೮೪ | |

ಹೀಗೆ ಗುಣಕದೊಳಗಿನ ಸಂಖ್ಯೆಯಲ್ಲಿ ಬೇರೆಬೇರೆ ಭಾಗಗಳನ್ನು ಮಾಡಿ ಒಂದೊಂದೇ ಭಾಗದಿಂದ ಗುಣಿಸುತ್ತ ಹೋಗಬೇಕು. ಮತ್ತು ಅವುಗಳ ಬೇರೀಜು ಮಾಡಬೇಕು.

ಮತ್ತೊಂದು ಉದಾಹರಣೆ —

೧೯ . ೪೭೫ × ೩.೨೮

| | |
|---|---|
| ೧೯ . ೪೭೫ | |
| ೩.೨೮ | |
| ೫೮೪೨೫೦೦ | ೩೦೦ ರಿಂದ |
| ೩೮೯೫೦೦ | ೨೦ ,, |
| ೧೫೫೮೦೦ | ೮ ,, |
| ೬೩೮೭ . ೮೦೦ | ೩೨೮ ರಿಂದ |

ವಿವರಣೆ:— $೧೯·೪೭೫ \times ೩೨೮ = \frac{೧೯·೪೭೫ \times ೧೦೦೦ \times ೩೨೮}{೧೦೦೦} =$ ೬೩೮೭·೮.

**ಭಾಗಾಕಾರ:** – ಭಾಜಕವು ಪೂರ್ಣ ಸಂಖ್ಯೆಯಿದ್ದಾಗ ಸಾದಾ ಭಾಗಾಕಾರದಂತೆ ಭಾಗಾಕಾರವನ್ನು ಮಾಡಿದರೆ ಸಾಕು. ಉದಾ—

೩೯·೬೧೬ ÷ ೧೬.

೧೬ ) ೩೯·೬೧೬ ( ೨·೪೭೬
೩೨
———
೭೬
೬೪
———
೧೨೧
೧೧೨
———
೯೬
೯೬
———
೦೦

ಮೇಲಿನ ಮಾತನ್ನು ಸ್ಪಷ್ಟಮಾಡಲಿಕ್ಕೆ ಮತ್ತೊಂದು ಉದಾಹರಣೆಯನ್ನು ತಕ್ಕೊಳ್ಳುವಾ.

೯·೪೩೭೫ ÷ ೧೨೫.

೧೨೫) ೯·೪೩೭೫ ( ·೦೭೫೫
೮ ೭೫
———
೬೮೭
೬೨೫
———
೬೨೫
೬೨೫
———
೦೦೦

ಭಾಜ್ಯ ಭಾಜಕಗಳಲ್ಲಿ ದಶಾಂಶಗಳಿದ್ದಾಗ ಭಾಗಾಕಾರದಲ್ಲಿಯು ದಶಾಂಶ ಚಿಹ್ನೆಯನ್ನು ತೆಗೆದುಹಾಕಿ ಅವನ್ನು ಪೂರ್ಣ ಸಂಖ್ಯೆಯೆಂದು ತಿಳಿಯತಕ್ಕದ್ದು. ಮತ್ತು

ಭಾಜ್ಯ ಭಾಜಕಗಳಲ್ಲಿಯ ದಶಾಂಶ ಸ್ಥಾನಗಳನ್ನು ಎಣಿಸಿ ಭಾಜ್ಯದಲ್ಲಿ ಅವೆಲ್ಲವು ಬರುವಂತೆ ಬಲಗಡೆಗೆ ಅಂಕಿಗಳನ್ನು ಸರಿಸಿ, ಅವಶ್ಯವಿದ್ದಷ್ಟು ಪೂಜ್ಯಗಳನ್ನು ಬರೆದು, ದಶಾಂಶ ಚಿಹ್ನವನ್ನು ಕೊಡತಕ್ಕದ್ದು. ಉದಾ–

೪ . ೮೨೪ ÷ ೨ . ೪.

ಮೊದಲು ಭಾಜ್ಯಕ್ಕೂ ಭಾಜಕಕ್ಕೂ ೧೦ ರಿಂದ ಗುಣಿಸು ಅಂದರೆ

೨೪ ) ೪೮.೨೪ ( ೨.೦೧
೪೮
———
೨೪
೨೪
———
೦೦

ಭಾಜ್ಯಭಾಜಕಗಳಿಗೆ ಒಂದೇ ಸಂಖ್ಯೆಯಿಂದ ಗುಣಿಸಿದರೆ ಭಾಗಾಕಾರದಲ್ಲಿ ಏನೂ ಹೆಚ್ಚು ಕಡಿಮೆಯಾಗುವದಿಲ್ಲೆಂಬ ಮಾತನ್ನು ಬಾಲಕರ ಲಕ್ಷಕ್ಕೆ ತಂದುಕೊಡಬೇಕು.

**ಮೀಟರದ ಪದ್ಧತಿ:—** ಈ ಪದ್ಧತಿಯು ಪ್ರಾಯಶಃ ದಶಾಂಶ ಪದ್ಧತಿಯ ಮೇಲೆಯೇ ರಚಿಸಲ್ಪಟ್ಟಿದೆ. ಇದರಲ್ಲಿ ಉದ್ದಳತೆ, ತೂಕ, ಕ್ಷೇತ್ರ ಇವುಗಳನ್ನು ಅಳೆಯಲಿಕ್ಕೆ ಅನುಕೂಲವಾದ ಕೋಷ್ಟಕಗಳಿರುವವು. ಅದರ ಉಪಯೋಗವು ಯುರೋಪದ ದೇಶಗಳಲ್ಲಿ ಶಾಸ್ತ್ರೀಯ ವಿಷಯದ ಅಭ್ಯಾಸದಲ್ಲಿ ಉಪಯೋಗಿಸುವದು ವಾಡಿಕೆಯಾಗಿದೆ. ಹೆಚ್ಚಿನ ಅಥವಾ ಕಡಿಮೆ ಪರಿಮಾಣಗಳಿಗೆ ರೂಪಾಂತರ ಮಾಡುವ ಕೆಲಸವು ಈ ಪದ್ಧತಿಯಲ್ಲಿ ಬಹು ಸುಲಭವು.

| | |
|---|---|
| ೧೦ ಮೀಟರ = ೧ ಡೆಕಾಮೀ. | ೧ ಮೀಟರ = ೧೦ ಡೆಸಿಮೀ. |
| ೧೦ ಡೆ. ಮೀ = ೧ ಹೆಕ್ಟೋಮೀ. | ೧ ಡೆ. ಮೀ = ೧೦ ಸೆಂಟಿಮೀ. |
| ೧೦ ಹೆ. ಮೀ. = ೧ ಕಿಲೋಮೀ. (೧೦೦೦ ಮೀಟರ) (⅝ ಮೈಲು) | ೧ ಸೆ. ಮೀ = ೧೦ ಮಿಲಿಮೀ. ($\frac{೧}{೧೦೦೦}$ ಮೀಟರ) |

ಇದರಂತೆ 'ಗ್ರಾಮು' ಇದನ್ನು ತೂಕದಲ್ಲಿಯೂ 'ಲಿಟರ' ಇದನ್ನು ಘನ ಅಳತೆಯಲ್ಲಿಯೂ ಉಪಯೋಗಿಸುವರು. ಅವುಗಳ ಕೋಷ್ಟಕಗಳನ್ನು ಸಹ ಮೇಲೆ ಹೇಳಿದಂತೆ ಬಾಲಕರು ರಚಿಸಬಹುದು. ಮತ್ತು ಅವು ಪಾರಿಭಾಷಿಕ ಶಬ್ದಗಳಾದ್ದರಿಂದ ಅವು

ಇದ್ದಂತೆಯೇ ಕರೆಯಬೇಕು, ಉದಾ— ಡೆಕಾಮೀಟರ ಇವನ್ನು ಭಾಷಾಂತರಿಸಿ ೧೦ ಮೀಟರ, ಡೆಸಿ ಮೀಟರ ಇದರ ಬದಲು ದಶಾಂಶ ಮೀಟರ ಹೀಗೆ ಅನ್ನಕೂಡದು.

**ಮೇಲಿನ ಇಯತ್ತೆಗಳ ಗಣಿತ:—** ಗಣಿತದ ಉಳಿದ ಭಾಗಗಳನ್ನು ಕಲಿಯುವಾಗ ಅಂದರೆ ಬಡ್ಡಿ, ಲಾಭಹಾನಿ, ಠೇವು, ವೇಗ, ಕಾಲಶಕ್ತಿ, ಈ ಸಂಬಂಧದ ಲೆಕ್ಕಗಳನ್ನು ಬಿಡಿಸುವಾಗ ಹೊಸ ತತ್ವಗಳನ್ನು ಕಲಿಯಬೇಕಾಗುವದಿಲ್ಲ. ಹಿಂದೆ ಕಲಿತ ತತ್ವಗಳನ್ನು ಮನನ ಮಾಡಿಕೊಂಡು, ಬೇರೆ ಬೇರೆ ಭಾಗಗಳಲ್ಲಿ ಬರುವ ಪಾರಿಭಾಷಿಕ ಶಬ್ದಗಳನ್ನೂ ಅವುಗಳ ಅರ್ಥವನ್ನೂ ತಿಳಿದುಕೊಂಡರೆ ಸಾಕು. ಎಷ್ಟೋ ಉದಾಹರಣೆಗಳನ್ನು ಬೀಜಗಣಿತದ ಸಮೀಕರಣಪದ್ಧತಿಯಿಂದ ಬಿಡಿಸುವದು ಸುಲಭವಾಗುವದು. ಲೆಕ್ಕಗಳನ್ನು ಬಿಡಿಸುವಾಗ ಮೇಲು ಬುದ್ಧಿಯನ್ನು ಉಪಯೋಗಿಸಿ ವ್ಯವಹಾರವಲ್ಲಿದ್ದ ಪದ್ಧತಿಯನ್ನು ಅನುಸರಿಸಬೇಕು. ಚಕ್ರಬಡ್ಡಿ, ಆವರ್ತ ದಶಾಂಶ. ಠೇವು ಇವು ವ್ಯವಹಾರದಲ್ಲಿ ಅಷ್ಟು ಉಪಯುಕ್ತವಾದವುಗಳಲ್ಲ. ಸ್ವಲ್ಪ ಮಟ್ಟಿಗೆ ಈ ಭಾಗಗಳನ್ನು ಕಲಿಸಿದರೆ ಸಾಕು. ವ್ಯವಹಾರದಲ್ಲಿ ಉಪಯೋಗ ಬೀಳುವಂಥ ಕ್ಷೇತ್ರಫಲ, ಘನಫಲ ಮುಂತಾದ ಭಾಗಗಳಿಗೆ ಹೆಚ್ಚು ಕಾಲವನ್ನು ಕಳೆಯಬಹುದು.

**ಗಣಿತ ಪುಸ್ತಕಗಳ ಉಪಯೋಗ:—** ಗಣಿತ ಪುಸ್ತಕಗಳನ್ನು ಉಪಯೋಗಿಸುವದರಿಂದ ಶಿಕ್ಷಕನ ಕಾಲ ಮತ್ತು ಪ್ರಯತ್ನ ಇವು ಉಳಿಯುವವು. ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಕೆಲಸಕ್ಕೆ ಹಚ್ಚಲಿಕ್ಕೆ ಅನುಕೂಲವಾಗುವದು. ಒಬ್ಬರ ಪಾಟಿಯನ್ನು ಮತ್ತೊಬ್ಬರು ನೋಡಿ ನಕಲು ಮಾಡುವ ಪದ್ಧತಿಯನ್ನು ತಪ್ಪಿಸಲಿಕ್ಕೆ ಬೇರೆ ಬೇರೆ ಬಾಲಕರಿಗೆ ಬೇರೆ ಬೇರೆ ಉದಾಹರಣೆಗಳನ್ನು ಹೇಳಬೇಕು. ಚುರುಕು ಹುಡುಗರು ಕಠಿಣವಾದ ಉದಾಹರಣೆಗಳನ್ನು ಬಿಡಿಸಲಿಕ್ಕೆ ಅನುಕೂಲವಾಗುವದು.

## ೧೫. ಭೂಗೋಲ.

**೧. ಉಪಯುಕ್ತತೆ:—**ಭೂಗೋಲ ವಿಷಯವು ವ್ಯವಹಾರದಲ್ಲಿ ಅತ್ಯುಪಯುಕ್ತವಾದ ವಿಷಯವು. ಇದರಿಂದ ಮಾನಸಿಕ ಶಿಕ್ಷಣವು ಸಹ ದೊರೆಯುವದು. ಯಾವದಾದರೊಂದು ದೇಶದ ಪರಿಸ್ಥಿತಿ ಪ್ರಾಕೃತಿಕ ಸ್ವರೂಪಗಳ ಮೇಲಿಂದ ಅಲ್ಲಿಯ ಹವೆಯು ಹೇಗಿರಬಹುದೆಂಬದನ್ನು ತಿಳಿಯುವದು, ಹವೆಯ ಮೇಲಿಂದ ಅಲ್ಲಿಯ ಬೆಳೆ, ಜನರ ಆಹಾರ, ಅವರ ಉದ್ಯೋಗ ಮೊದಲಾದವುಗಳನ್ನು ತಿಳಿದುಕೊಳ್ಳುವದು, ಈ ಕ್ರಮದಿಂದ ಬಾಲಕರ ವಿಚಾರ, ನಿರ್ಣಯ ಶಕ್ತಿಗಳು ಬಲಪಡುವವು. ಬಾಲಕರು ನೋಡಿದ ನದಿಪರ್ವತಗಳ ಮೇಲಿಂದ ನೋಡದೆ ಇದ್ದ ದೇಶಗಳ ನದಿಪರ್ವತಗಳ ಬಗ್ಗೆ ಸ್ಥೂಲಮಾನದಿಂದ ಕಲ್ಪನೆಯನ್ನು ಮಾಡುವದರಿಂದ ಅವರ ಕಲ್ಪನಾಶಕ್ತಿಯು ಬೆಳೆಯುವದು. ಪ್ರಾರಂಭದ ಪಾಠಗಳಲ್ಲಿ ಬಾಲಕರು ಹೆಚ್ಚು ನಿರೀಕ್ಷಣ ಮಾಡಬೇಕಾಗು

ವದರಿಂದ ಅವರ ನಿರೀಕ್ಷಣ ಸಾಮರ್ಥ್ಯವು ಬೆಳೆಯುವದು. ಬೇರೆ ಬೇರೆ ದೇಶಗಳ ಸಂಬಂಧವ ಉಪಯುಕ್ತ ಮಾಹಿತಿಯನ್ನು ನೆನಪಿನಲ್ಲಿಡಬೇಕಾಗುವವರಿಂದ ಅವರ ಸ್ಮರಣಶಕ್ತಿಯು ಬಲಪಡುವದು.

೨. **ಭಾಗಗಳು** :—ಭೂಗೋಲವಲ್ಲಿ ಪ್ರಾಕೃತಿಕ, ರಾಜಕೀಯ ಮತ್ತು ವ್ಯಾಪಾರವಿಷಯಕವೆಂಬ ಭಾಗಗಳನ್ನು ಮಾಡಬಹುದು.

**ಪ್ರಾಕೃತಿಕ** ಭೂಗೋಲವೆಂದರೆ ಸೃಷ್ಟಿವ್ಯಾಪಾರಗಳನ್ನೂ ಅವುಗಳಿಂದ ಪ್ರಾಣಿವರ್ಗದ ಮೇಲೂ ಸಸ್ಯವರ್ಗದ ಮೇಲೂ ಆಗುವ ಪರಿಣಾಮವನ್ನೂ ವರ್ಣಿಸುವ ವಿಷಯವು. ಇದಲ್ಲದೆ ಪೃಥ್ವಿಯ ಆಕಾರ, ಗತಿ, ಅಕ್ಷಾಂಶ ರೇಖಾಂಶ, ಸೂರ್ಯಮಾಲೆಯಲ್ಲಿ ಅದಕ್ಕಿರುವ ಸ್ಥಾನ ಮತ್ತು ಮಹತ್ವ ಇವುಗಳನ್ನು ಬೋಧಿಸುವದು.

**ರಾಜಕೀಯ** ಭೂಗೋಲವೆಂದರೆ ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ವಾಸಿಸುವ ಜನರ ಉದ್ಯೋಗ, ಸಾಂಪತ್ತಿಕ ಹಾಗೂ ಸಾಮಾಜಿಕ ಸ್ಥಿತಿ, ರಾಜಕೀಯ ಮತ್ತು ಧಾರ್ಮಿಕ ಸಂಸ್ಥೆ ಇವುಗಳನ್ನು ವರ್ಣಿಸುವದು. ರಾಜಕೀಯ ಭೂಗೋಲವನ್ನು ತಿಳಿದುಕೊಳ್ಳಲಿಕ್ಕೆ ಪ್ರಾಕೃತಿಕ ಭೂಗೋಲದ ಅನೇಕ ಸಂಗತಿಗಳನ್ನು ತಿಳಿದುಕೊಳ್ಳಬೇಕಾಗುವದು.

**ವ್ಯಾಪಾರವಿಷಯಕ** ಭೂಗೋಲವೆಂದರೆ ಬೇರೆ ಬೇರೆ ದೇಶಗಳ ನಡುವೆ ನಡೆಯುತಕ್ಕ ಪದಾರ್ಥಗಳ ವಿನಿಮಯ, ಅವು ಹುಟ್ಟತಕ್ಕ ಸ್ಥಾನ ಹಾಗೂ ಅವುಗಳನ್ನು ಹುಟ್ಟಿಸುವ ರೀತಿ, ಅವುಗಳನ್ನು ಒಯ್ಯತಕ್ಕ ರೀತಿ ಇವುಗಳಿಗೆ ಸಂಬಂಧಿಸಿರುವದು. ಹೀಗೆ ಈ ಭಾಗವು ಪ್ರಾಕೃತಿಕ ರಾಜಕೀಯ ಭಾಗಗಳಿಗೆ ನಿಕಟವಾಗಿ ಸಂಬಂಧಿಸಿರುವದು. ಬೇರೆ ಬೇರೆ ಉದ್ಯೋಗಗಳು, ಅವುಗಳಿಗಿರುವ ಅನುಕೂಲ ಪ್ರತಿಕೂಲ ಪರಿಸ್ಥಿತಿ, ಉದ್ಯೋಗಗಳನ್ನು ಮಾಡತಕ್ಕ ಜನರ ಸ್ಥಿತಿ ಇವುಗಳ ವಿಷಯಕ್ಕೆ ವಿಚಾರ ಮಾಡುವದು ಸಹ ಈ ಭಾಗದ ಕಾರ್ಯವು.

ಆರಂಭದಲ್ಲಿ ಪ್ರಾಕೃತಿಕ ಸ್ವರೂಪವು ಬಾಲಕರ ಕಣ್ಮುಂದೆ ಇರುವದರಿಂದ ನಿರೀಕ್ಷಣದಿಂದ ಅವರು ಅದರ ಬಗ್ಗೆ ಅನೇಕ ಸಂಗತಿಗಳನ್ನು ಗೊತ್ತುಮಾಡಿಕೊಳ್ಳುವಂತೆ ಯತ್ನಿಸಬೇಕು. ಪ್ರಾರಂಭದಲ್ಲಿ ಬಾಲಕರು ಇರುವ ಊರಿನ ಭೂಗೋಲದ ಬಗ್ಗೆ ನಿರೀಕ್ಷಣದಿಂದ ಅನೇಕ ಸಂಗತಿಗಳನ್ನು ಕಲಿಯುವದು ಅವಶ್ಯವದೆ.

೩. **ಮಹತ್ವದ ಸಂಗತಿಗಳು** :—ಈ ವಿಷಯವನ್ನು ಕಲಿಸುವಾಗ ಕಲಿಯುವವರ ಆಸ್ಥೆಯನ್ನು ಕಾಯ್ದುಕೊಳ್ಳಲಿಕ್ಕೂ ವಿಷಯದ ಉಪಯುಕ್ತತೆಯನ್ನೂ ಮಹತ್ವವನ್ನೂ ಹೆಚ್ಚಿಸಲಿಕ್ಕೂ ಕೆಲವು ಮಹತ್ವದ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕಾಗುವದು. ಅವು ಯಾವವೆಂದರೆ :—

**೧. ದೃಷ್ಟಾಂತ, ಉಪಕರಣ ಮುಂತಾದವು :—** ಈ ವಿಷಯದಲ್ಲಿ ದೃಷ್ಟಾಂತ, ಉಪಕರಣ ಮೊದಲಾದವುಗಳ ಉಪಯೋಗವನ್ನು ಹೆಚ್ಚೆಚ್ಚು ಮಾಡಬೇಕಾಗುವದು. ಆದರೆ ಅವುಗಳನ್ನು ಸಿದ್ಧಮಾಡಿಕೊಳ್ಳುವದು ಸುಲಭಸಾಧ್ಯವಲ್ಲ. ಪ್ರಾಕೃತಿಕ ಭೂಗೋಲದ ಕೆಲವು ಸಂಗತಿಗಳ ಮನವರಿಕೆ ಮಾಡಿಕೊಡಲಿಕ್ಕೆ ಕಲಿಯುವವರ ಅನುಭವವು ಸಾಕು. ಉದಾ:–ಋತುಗಳು ಬದಲಾಗುವದು, ಪೃಥ್ವಿಯ ಭಿನ್ನ ಭಿನ್ನ ಪೃಷ್ಠಭಾಗ ಮುಂತಾದವು. ಆದರೆ ವ್ಯಾಖ್ಯೆಗಳ ಅರ್ಥವು ಬಾಲಕರಿಗೆ ಸ್ಪಷ್ಟವಾಗಿ ತಿಳಿಯಲಿಕ್ಕೆ ಸರೋವರ, ನಡುಗಡ್ಡೆ, ಸಂಯೋಗಜಲ ಅಥವಾ ಸಂಯೋಗ ಭೂಮಿ, ದ್ವೀಪಕಲ್ಪ ಇವು ಗೊತ್ತಾಗಬೇಕಾದರೆ ಬಾಲಕರ ನೆರವಿನಿಂದ ಅವುಗಳ ಮಾದೆಲ್ಲುಗಳನ್ನು ಸಿದ್ಧಮಾಡಿಕೊಳ್ಳಬೇಕು. ಇವುಗಳನ್ನು ಮಣ್ಣಿನಿಂದ ಸುಲಭವಾಗಿ ಮಾಡಲಿಕ್ಕೆ ಬರುವಂತಿರುವದು. ಯಾವದೊಂದು ಪ್ರದೇಶದ ನದಿಪರ್ವತಗಳ ಬಗ್ಗೆ ಪಾಠ ಕೊಡುವದಿದ್ದರೆ ಆ ಪ್ರದೇಶದ ಮಾಡೆಲನ್ನು ಸಿದ್ಧಮಾಡಿಟ್ಟುಕೊಂಡರೆ ಅನುಕೂಲವಾಗುವದು. ನಕಾಶಗಳನ್ನೂ ಚಿತ್ರಗಳನ್ನೂ ಯಥೇಚ್ಛವಾಗಿ ಉಪಯೋಗಿಸಬೇಕು. ಶಿಕ್ಷಕರು ಕರೀ ಹಲಿಗೆಯ ಮೇಲೆ ಬೇರೆ ಬೇರೆ ಬಣ್ಣದಲ್ಲಿ ತೆಗೆದಂಥ ನಕಾಶಗಳು ಬಹು ಪರಿಣಾಮಕಾರಿಗಳು. ಬೇರೆ ಬೇರೆ ದೇಶದ ಕಟ್ಟಡಗಳ, ಜನರ, ಸೃಷ್ಟಿಸೌಂದರ್ಯದ ನೋಟಗಳ ಚಿತ್ರಗಳನ್ನು ಸಂಗ್ರಹಿಸಿ, ಬಾಲಕರಿಗೆ ತೋರಿಸುತ್ತಿರಬೇಕು. ಇತ್ತಲಾಗಿ ಈ ವಿಷಯದ ಶಿಕ್ಷಣದಲ್ಲಿ ಮ್ಯಾಜಿಕ್‌ಲ್ಯಾಂಟರ್ನದ ಉಪಯೋಗವು ಆಗಹತ್ತಿದೆ.

**೨. ವಿಚಾರಶಕ್ತಿಯ ಉಪಯೋಗ :—** ಬಾಲಕರು ಭೂಗೋಲವನ್ನು ಕಲಿಯುವಾಗ ಮೇಲಿಂದ ಮೇಲೆ ವಿಚಾರಶಕ್ತಿಯ ಉಪಯೋಗವನ್ನು ಮಾಡಬೇಕಾಗುತ್ತದೆ. ಯಾವದಾದರೊಂದು ಪ್ರದೇಶದ ಪ್ರಾಕೃತಿಕ ಸ್ವರೂಪಕ್ಕೂ ಅಲ್ಲಿಯ ಹವೆಗೂ ಇರುವ ಸಂಬಂಧ, ಹವೆಗೂ ಮಳೆ ಬೆಳೆಗೂ ಇರುವ ಸಂಬಂಧ, ಬೆಳೆಗೂ ಜನರ ಆಹಾರ ಉದ್ಯೋಗಗಳಿಗೂ ಇರುವ ಸಂಬಂಧ ಇವುಗಳನ್ನು ತಿಳಿಯಬೇಕಾದರೆ ಇಂಥ ಪರಿಣಾಮವನ್ನುಂಟುಮಾಡಲಿಕ್ಕೆ ಯಾವ ಯಾವ ಕಾರಣಗಳಿರಬಹುದೆಂಬದನ್ನು ಅರಿತುಕೊಳ್ಳಬೇಕಾಗುವದು. ಉದಾ :— ಬಂಗಾಲಿಗಳು ಬುದ್ಧಿವಂತರಾಗಲಿಕ್ಕೂ ಮರಾಟರು ಶೂರರಾಗಲಿಕ್ಕೂ ಅವರವರ ಆಹಾರ, ದೇಶದ ಪ್ರಾಕೃತಿಕಸ್ವರೂಪ ಇವೇ ಕಾರಣಗಳಿರಬಹುದೆಂಬದನ್ನು ಅವರು ಊಹಿಸಬಹುದು. ಜಗತ್ತಿನ ಒಂದು ದೇಶದಲ್ಲಿ ವ್ಯಾಪಾರವು ಹೆಚ್ಚಿದ್ದರೆ ಮತ್ತೊಂದರಲ್ಲಿ ಕಾರಖಾನೆಗಳು ಬಹಳ; ಇನ್ನೊಂದರಲ್ಲಿ ಒಕ್ಕಲತನವೇ ವಿಶೇಷ. ಇದಕ್ಕೆ ಕಾರಣವೇನೆಂಬದನ್ನು ತಿಳಿದುಕೊಳ್ಳಲಿಕ್ಕೆ ಬಾಲಕರನ್ನು ಹಚ್ಚಬೇಕು. ಯಾವದೊಂದು ದೇಶದ ಭೂಗೋಲದ ಮಹತ್ವದ ಸಂಗತಿಯ ವಿಷಯಕ್ಕೆ ವಿವರಿಸುವಾಗ ಶಿಕ್ಷಕನು ಬೇರೆ ದೇಶದಲ್ಲಿರುವ ಅದೇ ಪ್ರಕಾರದ ಅಥವಾ ತದ್ವಿರುದ್ಧವಾದ ಸಂಗ

ತಿಗಳ ಕಡೆಗೆ ಬಾಲಕರ ಲಕ್ಷ್ಯವನ್ನು ಎಳೆಯಬೇಕು. ಮತ್ತು ಹೀಗಿರುವದರಿಂದ ಏನು ಪರಿಣಾಮವಾಗುತ್ತದೆಂಬದನ್ನು ಕಂಡು ಹಿಡಿಯಲಿಕ್ಕೆ ಅವರನ್ನು ಹಚ್ಚಬೇಕು. ಕಾರಣಗಳ ಶೋಧನೆ, ಸಾಮ್ಯವೈಷಮ್ಯಗಳ ತುಲನೆ, ಒಂದೇ ಪ್ರಕಾರದ ಸಂಗತಿಗಳ ವರ್ಗೀಕರಣ, ಅನೇಕ ಉದಾಹರಣೆಗಳಿಂದ ಸಾಮಾನ್ಯ ತತ್ವಗಳನ್ನು ಗೊತ್ತು ಹಚ್ಚುವ ಕ್ರಮ ಇವುಗಳಿಂದ ಭೂಗೋಲದ ಅಭ್ಯಾಸವು ಮನೋರಂಜಕವೂ ಮಾನಸಿಕ ಶಿಕ್ಷಣಕ್ಕೆ ಉತ್ತೇಜನಕರವೂ ಆಗುವದು.

**೩. ಸ್ಮರಣಶಕ್ತಿಯ ವಿಕಾಸ:**—ಹಳೇ ಪದ್ಧತಿಯಿಂದ ಭೂಗೋಲವನ್ನು ಕಲಿಸುವದೆಂದರೆ ಭೂಶಿರ, ಉಪಸಾಗರ. ಪರ್ವತ. ನದಿ, ಪಟ್ಟಣ, ಹುಟ್ಟುವಳಿ ಇವುಗಳನ್ನು ಪಾಠಮಾಡಿಸುವದಾಗಿತ್ತು. ಪರೀಕ್ಷೆಗಳಲ್ಲಿ ಅದೇ ತರದ ಪ್ರಶ್ನೆಗಳು ಬರುವದರಿಂದ ವಿದ್ಯಾರ್ಥಿಗಳು ಇವೆಲ್ಲ ಸಂಗತಿಗಳನ್ನು ಮುಖೋದ್ಗತವಾಗಿ ಮಾಡಬೇಕಾಗುತ್ತಿತ್ತು. ಈಗ ಈ ವಿಷಯವನ್ನು ಕಲಿಸುವ ಪದ್ಧತಿಯಲ್ಲಿ ಸುಧಾರಣೆಯಾದಂತೆ ಪರೀಕ್ಷೆಯ ರೀತಿಯಲ್ಲಿಯೂ ಹೆಚ್ಚು ಕಡಿಮೆಯಾಗಿದೆ. ಭೂಗೋಲದಲ್ಲಿ ಕೆಲವು ಸಂಗತಿಗಳನ್ನು ನೆನಪಿನಲ್ಲಿಡುವದು ಅವಶ್ಯವದೆ. ಅವು ನೆನಪಿನಲ್ಲಿ ಉಳಿಯುವಂತೆ ಮಾಡಲಿಕ್ಕೆ ಹಿಂದೆ ಹೇಳಿದ ಸೂಚನೆಗಳು ಉಪಯುಕ್ತವಾಗಿವೆ. ಅಂದರೆ ಮುಖ್ಯವಾಗಿ ಯೋಗ್ಯ ದೃಷ್ಟಾಂತಗಳನ್ನೂ ಉಪಕರಣಗಳನ್ನೂ ಉಪಯೋಗಿಸಿ, ಸಾಮ್ಯ-ವೈಷಮ್ಯಗಳಿಂದ ಇಲ್ಲವೆ ಕಾರ್ಯಕಾರಣಭಾವದಿಂದ ಆ ಸಂಗತಿಗಳು ಅನಾಯಾಸವಾಗಿ ನೆನಪಿಗೆಬರುವಂತೆ ಶಿಕ್ಷಕರು ಹೊಸ ಪದ್ಧತಿಯನ್ನು ಉಪಯೋಗಿಸಬೇಕು. ಪ್ರತಿಯೊಂದು ಸಂಗತಿಯನ್ನು ಹೆಚ್ಚೆಚ್ಚು ಮನೋರಂಜಕವಾಗುವಂತೆ ಮಾಡಿದರೆ ಅದು ಬಾಲಕರ ಸ್ಮರಣದಲ್ಲಿ ಹೆಚ್ಚೆಚ್ಚು ದೃಢವಾಗಿ ಉಳಿಯುವದೆಂಬದರಲ್ಲಿ ಸಂಶಯವಿಲ್ಲ. ಮತ್ತು ಕಲಿತ ಸಂಗತಿಗಳ ಪುನರುಚ್ಚಾರವು ಹೊಸ ಸಂಗತಿಗಳನ್ನು ಕಲಿಯುವಾಗ ಆಗಹತ್ತಿದರೆ ಬಾಲಕರು ಅವುಗಳನ್ನು ಮರೆಯರು.

ಮೊದಲು ತಮ್ಮ ಗ್ರಾಮದ, ತಾಲೂಕಿನ, ಜಿಲ್ಹೆಯ, ಪ್ರಾಂತದ ಮತ್ತು ದೇಶದ ಭೂಗೋಲದೊಳಗಿನ ಯಾವತ್ತು ಸಂಗತಿಗಳನ್ನು ನೆನಪಿನಲ್ಲಿಟ್ಟುಕೊಂಡು ಬೇರೆ ಭಾಗದ ಅಥವಾ ದೇಶದ ಭೂಗೋಲವನ್ನು ಕಲಿಯುವಾಗ ಅದರ ವಿಸ್ತಾರ, ಜನಸಂಖ್ಯೆ ಮುಂತಾದವು ನಮ್ಮ ಭಾಗದ ಅಥವಾ ದೇಶದ ಇಷ್ಟು ಪಟ್ಟು ಅವೆ ಎಂಬವನ್ನು ಹೇಳಿದರೆ ಸಾಕು. ಮತ್ತು ಅಂಕಿಗಳನ್ನು ಹೇಳುವಾಗ ದುಂಡಂಕಿಗಳನ್ನು ಹೇಳಿದರೆ ಸಾಕು. ಉದಾ; ಧಾರವಾಡ ತಾಲೂಕಿನ ಜನಸಂಖ್ಯೆ ೧ ಲಕ್ಷ ಇಷ್ಟು ಹೇಳಿದರೆ ಸಾಕು. ಅದು ೧ ಲಕ್ಷ ೮,೩೦೫ ಅದೆಯೆಂದು ಹೇಳುವ ಅವಶ್ಯಕತೆ ಇಲ್ಲ. ಧಾರವಾಡ ಜಿಲ್ಹೆಯ ಜನಸಂಖ್ಯೆ ೧೦॥ ಲಕ್ಷ. ಮುಂಬೈ ಇಲಾಖೆಯ ಜ. ಸ. ೨॥. ಕೋಟಿ. ಧಾರವಾಡ ಜಿಲ್ಹೆಯಷ್ಟು ಜ. ಸ. ಯುಳ್ಳ ಜಿಲ್ಹೆಗಳೆಂದರೆ:— **ಪೂರ್ವಖಾನದೇಶ, ಪುಣೆ, ಸಾತಾರೆ,**

ಮತ್ತು ರತ್ನಾಗಿರಿ. ಒಂದು ಊರಿಂದ ಮತ್ತೊಂದು ಊರಿಗೆ ಅಥವಾ ದೇಶಕ್ಕೆ ಅಂತರವನ್ನು ಗೊತ್ತು ಮಾಡಿಕೊಳ್ಳಬೇಕಾದರೆ ಆ ಪ್ರವಾಸಕ್ಕೆ ಉಗಿಬಂಡಿಯಿಂದ ಅಥವಾ ಉಗಿ ಹಡಗದಿಂದ ಹತ್ತುವ ಕಾಲವನ್ನು ಗೊತ್ತು ಮಾಡಿಕೊಳ್ಳಬೇಕು. ಉಗಿಬಂಡಿಯ ಒಂದು ತಾಸಿನ ಪ್ರವಾಸಕ್ಕೆ ೧೮ ಮೈಲು ಉಗಿ ಹಡಗದ ಪ್ರವಾಸಕ್ಕೆ ೧೦ ಮೈಲು ಎಂದು ತಿಳಿದರೆ ಅಂತರವು ಸ್ಥೂಲಮಾನದಿಂದ ಗೊತ್ತಾಗುವದು.

೪. **ವರ್ಣನೆ ಮತ್ತು ಕಲ್ಪನೆ:—** ಭೂಗೋಲವನ್ನು ಸರಿಯಾಗಿ ಕಲಿಸುವದಕ್ಕೆ ಪ್ರಾ. ಶಿಕ್ಷಕನಿಗೆ ತೊಂದರೆಯುಂದರೆ— ಉತ್ತಮ ಭೂಗೋಲ ಪುಸ್ತಕಗಳ ಹಾಗೂ ಪ್ರವಾಸದ ವರ್ಣನೆಯ ಪುಸ್ತಕಗಳ ಅಭಾವ. ಕಲಿಸುವ ಭಾಗದ ಪೂರ್ಣ ಜ್ಞಾನವಿಲ್ಲದೆ ಕುರುಡರಂತೆ ಕಲಿಸುವದು ಸಾಹಸವಕೆಲಸವೆಂದು ಎಲ್ಲರೂ ಒಪ್ಪುವರು. ಇತ್ತಿತ್ತ ಕೆಲವು ಪುಸ್ತಕಗಳು ಇಲ್ಲಿಯೂ ಮೈಸೂರಲ್ಲಿಯೂ ಪ್ರಸಿದ್ಧವಾಗಿವೆ. ಅವುಗಳನ್ನು ತರಿಸಿಕೊಂಡು ಓದಿ, ಭೂಗೋಲವನ್ನು ಕಲಿಸಲಿಕ್ಕೆ ಶಿಕ್ಷಕರು ಪ್ರಾರಂಭಮಾಡತಕ್ಕದ್ದು. ಪ್ರಚಲಿತ ರಾಜಕೀಯ ಅದಲು ಬದಲುಗಳನ್ನು ತಿಳಿದುಕೊಳ್ಳಲಿಕ್ಕೆ ವೃತ್ತಪತ್ರಗಳನ್ನು ಓದುವದು ಅವಶ್ಯವದೆ. ಬಾಲಕರು ನೋಡದೆ ಇದ್ದ ಸ್ಥಳಗಳ ಅಥವಾ ವಸ್ತುಗಳ ಕಲ್ಪನೆಯುಂಟಾಗುವದಕ್ಕೆ ಕಲ್ಪನಾಶಕ್ತಿಯ ಉಪಯೋಗವನ್ನು ಮಾಡಿಕೊಳ್ಳಬೇಕಾಗುವದು. ಮಾಡೆಲ್ಲು, ಚಿತ್ರ, ನಮೂನೆಗಳ ಸಹಾಯದಿಂದ ಭೂಗೋಲದ ಅಭ್ಯಾಸವು ಹೆಚ್ಚು ಮೂರ್ತವಾಗುವಂತೆ ಮಾಡಬೇಕು. ಬೇರೆ ಬೇರೆ ಭಾಗಗಳಿಗೆ ಬಂದ ಹೆಸರುಗಳು ಯಾವ ಕಾರಣದಿಂದ ಬಂದವೆಂಬವನ್ನು ಗೊತ್ತು ಮಾಡಿಕೊಳ್ಳುವದು ಮನೋರಂಜಕ ವಿಷಯುವಾಗಿರುವದು. ಉದಾ:—ಪೀತ ಸಮುದ್ರ, ಸೂರ್ಯೋದಯದ ದೇಶ (ಜಪಾನ), ಯುರೋಪದ ಬೇನೆಯ ಮನುಷ್ಯ (ತುರ್ಕಸ್ತಾನದ ಬಾದಶಹ), ಬಾಬೆಲ್‌ಮಾಂಡೆಬ (ಕಣ್ಣೀರುಗಳ ಭೂಶಿರ) ಮುಂತಾದವು.

೫ **ನಕಾಶವಾಚನ—**ಮುಖ್ಯಪಟ್ಟಣ, ದೇಶದಮೇರೆ, ಪರ್ವತಾವಳಿ ಇವುಗಳನ್ನು ತೋರಿಸಲಿಕ್ಕೆಮಾತ್ರ ಶಿಕ್ಷಕರು ನಕಾಶದ ಉಪಯೋಗವನ್ನು ಮಾಡುವರು. ಆದರೆ ನಕಾಶದಿಂದ ತಿಳಿದುಕೊಳ್ಳಬಹುದಾದ ಅನೇಕ ಸಂಗತಿಗಳು ಇರುತ್ತವೆಂಬದು ಎಷ್ಟೋಶಿಕ್ಷಕರಿಗೆ ಗೊತ್ತಿಲ್ಲ. ವಾಚನ ಪುಸ್ತಕದ ಅಭ್ಯಾಸ ಮಾಡುವಾಗ ವಾಚನವಲ್ಲದೆ ಓದಿದ ಭಾಗದ ಅರ್ಥವನ್ನೂ ಅದರಲ್ಲಿಬಂದ ಸಂದರ್ಭಗಳನ್ನೂ ಅದರ ಮರ್ಮವನ್ನೂ ತಿಳಿದುಕೊಳ್ಳಲಿಕ್ಕೆ ಯತ್ನಿಸುವಂತೆ **ನಕಾಶದ ಅಭ್ಯಾಸವನ್ನು ಮಾಡುವ ಪದ್ಧತಿಯನ್ನು ಬಾಲಕರಿಗೆ ಹಚ್ಚುವದು ಅವಶ್ಯವದೆ.** ಅದು ಹೇಗೆಂದರೆ—ಪ್ರಾಕೃತಿಕ ಸ್ವರೂಪದ ಮೇಲಿಂದ, ಹಾಗು ಭೂಗೋಲದಲ್ಲಿ ಆ ಪ್ರದೇಶಕ್ಕಿರುವ ಸ್ಥಾನದ ಮೇಲಿಂದ ಅದರ ಹವಾಮಾನವನ್ನು ತಿಳಿದುಕೊಳ್ಳುವದು; ಪರ್ವತಾವಳಿ, ಭೂಮಿಯ ಉಬ್ಬು ತಗ್ಗು ಇವುಗಳ ಮೇಲಿಂದ ನದಿಗಳು ಹರಿಯುವದಿಕ್ಕು, ಅವುಗ

ಳಿಂದ ನೌಕಾಗಮನಕ್ಕೆ ಆಗುವ ಅನುಕೂಲ, ಜಲಪಾತದಿಂದ ಮಾಡಿಕೊಳ್ಳತಕ್ಕ ವಿದ್ಯುಚ್ಛಕ್ತಿನ ಶಕ್ತಿ, ಜನಸಂಖ್ಯೆ ಹೆಚ್ಚು ಅಥವಾ ಕಡಿಮೆ ಇರುವ ಕಾರಣ ಮುಂತಾದ ಸಂಗತಿಗಳನ್ನು ತಿಳಿದುಕೊಳ್ಳುವದು ನಕಾಶವಾಚನದ ಮುಖ್ಯ ಉದ್ದೇಶವು. ಇದಲ್ಲದೆ ನಕಾಶದಲ್ಲಿ ಬೇರೆ ಬೇರೆ ಸ್ಥಳಗಳ ಎತ್ತರವನ್ನು ಫೂಟಿನ ಅಂಕಿಯಿಂದ ಹಾಕಿರುವರು. ಆ ಅಂಕಿಗಳು ಸಮುದ್ರಸಪಾತಳಿಯಿಂದ ಆಯಾ ಸ್ಥಳಗಳ ಎತ್ತರವನ್ನು ತೋರಿಸುತ್ತವೆ. ತಾಲೂಕಿನ ನಕಾಶಗಳಲ್ಲಿ ಸಹ ಮೋಜಣಿಯವರು ಅಳತೆಮಾಡಿದ ಕೆಲವು ಸ್ಥಳಗಳ ಎತ್ತರವನ್ನು ಕೊಟ್ಟಿರುವದು. ಇದರಿಂದ ಇಳಿಜಾರು ಎತ್ತಕಡೆಗೆ ಅದೆ ಎಂಬದು ಗೊತ್ತಾಗುವದು. ಮತ್ತು ಆ ಪ್ರದೇಶದ ಮೋಡೆಲನ್ನು ಮಾಡಲಿಕ್ಕೆ ಇದರಿಂದ ಅನುಕೂಲವಾಗುವದು. ಭೂಗೋಲವು ಉಳಿದ ವಿಜ್ಞಾನಶಾಸ್ತ್ರಗಳಂತೆ ಅನುಭವ ಜನ್ಯಶಾಸ್ತ್ರವಾಗಿದೆ ಎಂಬದನ್ನು ಶಿಕ್ಷಕರು ನೆನಪಿನಲ್ಲಿಡತಕ್ಕದ್ದು. ವಾಙ್ಮಯದಿಂದ ಎಲ್ಲಕಾಲದ ಪ್ರಸಿದ್ಧ ಜನರ ವಿಚಾರಗಳು ತಿಳಿಯುವವು. ಇತಿಹಾಸದಿಂದ ಜನರ ಸಾಮಾಜಿಕ ಹಾಗು ರಾಜಕೀಯ ಸ್ಥಿತಿಯೂ ಅವರಲ್ಲಿದ್ದ ರಾಷ್ಟ್ರೀಯ ಭಾವನೆಯೂ ಗೊತ್ತಾಗುವವು. ಭೂಗೋಲದಿಂದ ಮಾನವಸೃಷ್ಟಿಯ ಜೀವಿತವೂ ಚಲನವಲನವೂ ಹೇಗೆ ನಡೆದಿರುವವೆಂಬದು ಮನವರಿಕೆಯಾಗುವದು.

೬. ಜಗತ್ತಿನಲ್ಲಿದ್ದ ಯಾವದಾದರೊಂದು ಪ್ರದೇಶದ ಜನರ ಜೀವಿತಕ್ಕೂ ಚಲನವಲನೆಗೂ ಪ್ರಗತಿಗೂ ನಿಕಟ ಸಂಬಂಧವುಳ್ಳ ಸಂಗತಿಗಳನ್ನು ಅರಿಯುವದು ಭೂಗೋಲದಲ್ಲಿ ಅವಶ್ಯವದೆ. ಅವುಯಾವವೆಂದರೆ— (ಅ) ಆ ಪ್ರದೇಶದ ಪ್ರಾಕೃತಿಕಸ್ವರೂಪ. (ಆ) ಜಗತ್ತಿಗ ಉಳಿದ ಜನರ ಕೂಡ ಈಜನರ ವ್ಯವಹಾರ (ಇ) ಅದರ ಪೂರ್ವೇತಿಹಾಸ ಮತ್ತು ಪರಂಪರೆ. ಇವುಗಳ ವಿಷಯಕ್ಕೆ ಒಂದೊಂದಾಗಿ ವಿಚಾರ ಮಾಡುವಾ.

(ಅ) ಪ್ರಾಕೃತಿಕಸ್ವರೂಪ—ಪ್ರಾಕೃತಿಕಸ್ವರೂಪವು ಶಾಶ್ವತವಾಗಿರುವದು. ಇದರಲ್ಲಿ ಮುಖ್ಯವಾಗಿ ಪರ್ವತ, ದರಿ, ಬೈಲು, ನದಿ, ಸಮುದ್ರವಂಡೆ, ಹವೆ, ಭೂಮಿ, ಖನಿಗಳೂ ಖನಿಜಗಳೂ ಇವು ಸಮಾವೇಶವಾಗುತ್ತವೆ. ಇವುಗಳಿಂದ ಜನರ ಜೀವಿತಕ್ಕೂ ಪ್ರಗತಿಗೂ ಅನುಕೂಲ ಪ್ರತಿಕೂಲ ಸಂದರ್ಭಗಳು ಉಂಟಾಗುವವು. ಸೃಷ್ಟಿಯಿಂದ ಮನುಷ್ಯನು ಆಹಾರ, ವಸ್ತ್ರ, ಮೊದಲಾದ ಜೀವಿತದ ಸಾಧನಗಳನ್ನು ಪೂರೈಸಿಕೊಳ್ಳುವನು. ಸೃಷ್ಟಿಯು ಫಲದ್ರೂಪ ಅಥವಾ ರುಕ್ಷವಾಗಿದ್ದಂತೆ ಜನರು ಸೋಮಾರಿಗಳು ಅಥವಾ ಉದ್ಯೋಗಿಗಳಾಗುವರು. ಆಹಾರದ ಕೊರತೆ ಇದ್ದಂತೆ ಜನರಲ್ಲಿ ಉತ್ಸಾಹವೂ ದೀರ್ಘಪ್ರಯತ್ನವೂ ಸ್ಪರ್ಧೆಯೂ ಸಹಕಾರವೂ ಉಂಟಾಗುವವು. ಉದಾ—ಹಾಲಂಡದ ಜನರನ್ನು ನೋಡಿರಿ. ಇದು ಸಮುದ್ರಕ್ಕಿಂತಲೂ ತಗ್ಗಾದ ಪ್ರದೇಶವಾದ್ದರಿಂದ ಗೋಡೆಗಳನ್ನು ಕಟ್ಟಿ ಸಮುದ್ರದ ನೀರು ದೇಶದೊಳಗೆ ಬರದಂತೆ

ಮಾಡಿದ್ದಾರೆ. ಮತ್ತು ಸಮುದ್ರದಲ್ಲಿ ಉಂಟಾಗುವ ಬಿರುಗಾಳಿಯಿಂದ ಅದಕ್ಕೆ ಅಪಾಯ ವಾಗಬಾರದೆಂದು ಅವರು ಯಾವಾಗಲೂ ಎಚ್ಚರದಿಂದ ಕಾಯಬೇಕಾಗುತ್ತದೆ. ಹೀಗಾಗಿ ಅವರಲ್ಲಿ ಸತತೋದ್ಯೋಗದ ಅವಶ್ಯಕತೆಯು ನೆಲೆಗೊಂಡಿತು. ಅದರಂತೆರತ್ನಾಗಿರಿ, ಕುಲಾಬಾ ಜಿಲ್ಲೆಗಳ ಮಾನವಳೆ ಜನರನ್ನು ಪರೀಕ್ಷಿಸಿರಿ ಆ ಜನರಿಗಿರುವ ಭೂಮಿಗಳೆಂದರೆ ಕಾಡುಕಲ್ಲು. ಅವು ಸಹ ಗುಡ್ಡಗಳಮೇಲೆ ಅಲ್ಲಿ ಬೀಜವು ನಾಟಲಿಕ್ಕೆ ಸಾಕಾಗುವಷ್ಟು ಮಣ್ಣು ಸಹ ಇಲ್ಲ. ಅದರಿಂದ ಅವರು ಕೆಳಗಿಂದ ಮಣ್ಣು ಹೊತ್ತು, ಗುಡ್ಡದಮೇಲೆ ಹರವಿ, ಗೊಬ್ಬರಹಾಕಿ ಬೆಳೆತೆಗೆದುಕೊಳ್ಳಬೇಕಾಗುವದು. ಇಂಥಲ್ಲಿ ರಾಗಿಯಂಥ ಸತ್ವಹೀನ ಧಾನ್ಯದ ಹೊರತು ಮತ್ತೇನೂ ಬೆಳೆಯುವದಿಲ್ಲ. ಹೀಗೆ ಅವರು ಉದ್ಯೋಗಿಗಳೂ ಅಲ್ಪ ಸಂತುಷ್ಟರೂ ಹಸಿವೆ ನೀರಡಿಕೆಗಳನ್ನು ತಡೆದುಕೊಳ್ಳುವಂಥ ಕಷ್ಟ ಸಹಿಷ್ಣುಗಳೂ ಆದರು. ಇವರ ನೆರವಿನಿಂದಲೇ ಶಿವಾಜಿಯು ಸ್ವರಾಜ್ಯವನ್ನು ಸ್ಥಾಪಿಸಲಿಲ್ಲವೇ? ಇನ್ನು ಸಾಮಾನ್ಯವಾಗಿ ಹಿಂದುಸ್ಥಾನದ ಬಹಳ ಪ್ರದೇಶವು ಫಲದ್ರೂಪವಾದ್ದರಿಂದ ಜನರಲ್ಲಿ ಆಲಸ್ಯವೂ ಕಲಹಪ್ರಿಯತೆಯೂ, ವ್ಯಸನಾಧೀನತೆಯೂ ಕಂಡು ಬರುವದರಲ್ಲಿ ಆಶ್ಚರ್ಯವೇನು? ಪ್ರತಿಕೂಲ ಪರಿಸ್ಥಿತಿಯಲ್ಲಿ ಜೀವಿಸಬೇಕಾದರೆ ಜನರು ತಮ್ಮ ದೇಹಸಾಮರ್ಥ್ಯವನ್ನೂ ಬುದ್ಧಿಬಲವನ್ನೂ ಉಪಯೋಗಿಸಿ ಜೀವಿತವನ್ನು ಸಹಿಸಲಿಕ್ಕೆ ಬರುವಷ್ಟಾದರೂ ಸುಖಕರವಾಗಿ ಮಾಡಿಕೊಳ್ಳಬೇಕಾಗುವದು. ಹೀಗೆ ಪರಿಸ್ಥಿತಿಯ ಆಘಾತವು ಮಾನವೀ ಪ್ರಯತ್ನದ ಮೇಲೆಯೂ, ಪ್ರಯತ್ನದ ಆಘಾತವು ಪರಿಸ್ಥಿತಿಯ ಮೇಲೂ ಆಗುತ್ತಿರುತ್ತವೆ ಈ ಆಘಾತದಿಂದ ಆ ಜನರ ಪ್ರಗತಿಯಾಗಿ ಅವರ ಭಾಷೆ, ಜ್ಞಾನ, ಕೌಶಲ್ಯ, ಕಲೆ, ಉದ್ಯೋಗ, ಸಾಂಪತ್ತಿಕಸ್ಥಿತಿ, ಸಮಾಜದ ರಚನೆ, ರಾಜಕೀಯ ವ್ಯವಸ್ಥೆ ಇವುಗಳಲ್ಲಿ ಸುಧಾರಣೆಯಾಗುತ್ತ ಹೋಗುತ್ತದೆ.

## (ಅ) ಜಗತ್ತಿನ ಉಳಿದ ಜನರಕೂಡ ಈ ಜನರ ವ್ಯವಹಾರ.

ನಮ್ಮ ಜೀವಿತಕ್ಕೆ ಅವಶ್ಯವಾದ ಪದಾರ್ಥಗಳನ್ನು ಅಂದರೆ ಆಹಾರ, ವಸ್ತ್ರ, ವಸತಿ, ಉದ್ಯೋಗ ಕೃಷಿಗಳಿಗೆ ಬೇಕಾಗುವ ಆಯುಧ, ಮನೆಗಳಲ್ಲಿ ಉಪಯೋಗಿಸುವ ಪಾತ್ರೆ, ಸಾಮಾನುಗಳು ಮುಂತಾದವುಗಳನ್ನು ದೊರಕಿಸಲಿಕ್ಕೆ ಜಗತ್ತಿನ ಎಲ್ಲ ದೇಶಗಳ ಕೂಡ ವ್ಯವಹಾರ ಮಾಡಬೇಕಾಗುವದೆಂಬದು ಸ್ವಲ್ಪ ವಿಚಾರಮಾಡಿ ನೋಡಿದರೆ ತಿಳಿಯುವದು. ಈ ವ್ಯವಹಾರದಿಂದ ನಾಗರಿಕತೆಯು ಹೆಚ್ಚುವದಲ್ಲದೆ ಬೇರೆ ಬೇರೆ ಜನಾಂಗಗಳ ಸಂಬಂಧವು ದೃಢವಾಗುವದು. ನಮ್ಮ ಸಮೀಪದಲ್ಲಿಯೇ ನೋಡಿದರೆ ವ್ಯಾಪಾರದ ಸ್ಥಳ, ಮತ್ತು ಸುತ್ತಲಿನ ಹಳ್ಳಿ ಇವುಗಳ ನಡುವೆ ಸರಕುಗಳ ವಿನಿಮಯದ ಮುಖಾಂತರವಾಗಿ ಮೇಲೆ ಹೇಳಿದ ಪರಿಣಾಮಗಳು ಉಂಟಾಗುವವು. ಹಳ್ಳಿಯ ಜನರು ಪಟ್ಟಣಗಳಿಗೆ ಕಾಳುಕಡಿ ತಂದು ಮಾರಿ, ಅರಿವೆ, ಪಾತ್ರೆ, ಒಕ್ಕಲತನದ ಸಾಮಾನು ಮುಂತಾದವುಗಳನ್ನು ಕೊಂಡುಕೊಳ್ಳುವರು. ಈ ಪ್ರಕಾರದ ವಿನಿಮ

ಯವು ಸುಸೂತ್ರವಾಗಿ ಸಾಗಲಿಕ್ಕೆ ಸಂತೆಗಳೂ ಜಾತ್ರೆಗಳೂ ನೆರೆಯ ಹತ್ತಿದವು. ಲೈನದಾರಿಗಳೂ ಲೋಹಮಾರ್ಗವೂ ಪೋಷ್ಟ-ತಾರ ಆಫೀಸುಗಳೂ ಏರ್ಪಾಡಾದವು. ಪಟ್ಟಣಗಳಲ್ಲಿದ್ದ ವರ್ತಕರೂ ಕೆಲಸಗಾರರೂ ಜನರ ಜೀವಿತಕ್ಕೆ ಅವಶ್ಯವಾಗಿ ಬೇಕಾಗುವ ಪದಾರ್ಥಗಳನ್ನು ಒದಗಿಸಿಕೊಡುವರು. ಇವರನ್ನು ರಕ್ತದಲ್ಲಿಯ ಕೆಂಪು ಗೋಲಕಗಳಿಗೆ ಹೋಲಿಸಬಹುದು. ಹೀಗೆ ವ್ಯಾಪಾರದ ಶುದ್ಧ ರಕ್ತ ವಾಹಿನಿಗಳೆಂದರೆ ಮಹಾಸಾಗರದೊಳಗಿನ ಮಾರ್ಗಗಳೂ ಒಂದು ಖಂಡದಿಂದ ಮತ್ತೊಂದು ಖಂಡಕ್ಕೆ ಹೋಗುವ ಲೋಹಮಾರ್ಗಗಳೂ ಆಗಿವೆ. ಈ ವ್ಯಾಪಾರದಿಂದ ಬೇರೆ ಬೇರೆ ಜನಾಂಗಗಳ ನಡುವೆ ಪ್ರೇಮಭಾವಬಾಗಲಿ, ದ್ವೇಷಭಾವವಾಗಲಿ ಹುಟ್ಟುವದು, ಮತ್ತು ಜನರಲ್ಲಿ ಸಾಹಸವೂ ಶೋಧಕ ಬುದ್ಧಿಯೂ ಉಂಟಾಗುವವು. ಪ್ರತಿಯೊಂದು ಪ್ರದೇಶದಲ್ಲಿ ವ್ಯಾಪಾರದ ಪಡಸಾಲಿಯ ಸ್ಥಳಗಳಿರುವವು. ಮತ್ತು ಆಸ್ಥಳಗಳಿಗೂ ಮುಖ್ಯ ಬಂದರಗಳಿಗೂ ನಿಕಟಸಂಬಂಧ ಉಂಟಾಗುವದು.

ಪ್ರಾಚೀನ ಕಾಲದಿಂದ ವ್ಯಾಪಾರ ಮಾಡುವ ಸಾಹಸ ಬುದ್ಧಿಯಿಂದ ಹೊಸ ಹೊಸ ಪ್ರದೇಶಗಳ ಶೋಧವೂ, ಆ ಪ್ರದೇಶಗಳಲ್ಲಿ ಕಾರಖಾನೆಗಳನ್ನು ಸ್ಥಾಪಿಸುವದರಿಂದಾಗಲಿ ಅವುಗಳನ್ನು ಮೂಲ ನಿವಾಸಿಗಳಿಂದ ಗೆದ್ದುಕೊಳ್ಳುವದರಿಂದಾಗಲಿ ಪರದೇಶದವರು ಅವುಗಳನ್ನು ಆಕ್ರಮಿಸಿಕೊಂಡು ಹೊಸ ಸಾಮಾಜಿಕ ರಾಜಕೀಯ ಧಾರ್ಮಿಕ ಕಲ್ಪನೆಗಳನ್ನೂ ಸಂಸ್ಥೆಗಳನ್ನೂ ಅಲ್ಲಲ್ಲಿ ಉಂಟುಮಾಡುವರು. ಹೀಗಾಗುವದರಿಂದ ಜಗತ್ತಿನಲ್ಲಿ ಹೊಸ ಚಟವಟಿಕೆಯು ಕಂಡುಬರುವದು. ಇದೇ ರೀತಿಯಿಂದಲೇ ಅಮೇರಿಕಾದ ಶೋಧದಿಂದಲೂ ಪೂರ್ವದ ದೇಶಗಳಿಗೆ ಬರಲಿಕ್ಕೆ ಪಾಶ್ಚಾತ್ಯರಿಗೆ ಕೇಪ ಆಫ ಗುಡ್ ಹೋಪದ ಹಾದಿಯು ದೊರೆತದರಿಂದಲೂ ಜಗತ್ತಿನ ವ್ಯಾಪಾರವು ಹೆಚ್ಚಾಗಹತ್ತಿದೆ. ಮತ್ತು ಈ ವ್ಯಾಪಾರದ ಹವ್ಯಾಸದಿಂದ ಬೇರೆ ಬೇರೆ ಪ್ರದೇಶಗಳಲ್ಲಿ ಪಾಶ್ಚಾತ್ಯರು ವಾಸಮಾಡಹತ್ತಿ ಅವುಗಳನ್ನು ಯುಕ್ತಿಯಿಂದ ತಮ್ಮ ವಶಕ್ಕೆ ತೆಗೆದುಕೊಂಡರು. ಮತ್ತು ತಮ್ಮಲ್ಲಿಯ ಸಂಸ್ಕೃತಿಯನ್ನು ಪ್ರಸಾರಮಾಡಿದರು. ಸ್ಪೇನ, ಹಾಲಂಡ, ಪೋರ್ತುಗಾಲ, ಫ್ರಾನ್ಸ, ಇಂಗ್ಲಂಡ ಈ ದೇಶಗಳು ಜಗತ್ತಿನಲ್ಲಿ ತಮತಮಗೆ ಸಾರ್ವಭೌಮತ್ವವು ದೊರೆಯಬೇಕೆಂದು ಹವಣಿಸಹತ್ತಿದವು. ಅವರಲ್ಲಿ ಉಂಟಾದ ಜಗಳಗಳಿಂದ ಹಿಂದುಸ್ಥಾನದ ಮತ್ತು ಅದರ ಪೂರ್ವಕ್ಕೆ ಇದ್ದ ಪ್ರದೇಶಗಳ ಬೆಳವಣಿಗೆಯು ನಿಶ್ಚಿತವಾಯಿತು. ೧೯ನೇ ಶತಕದಲ್ಲಿ ಆದ ಯಾಂತ್ರಿಕ ಶೋಧಗಳಿಂದಲೂ ಸುಧಾರಣೆಗಳಿಂದಲೂ ವ್ಯಾಪಾರಕ್ಕಾಗಿ ಹೊಸ ಹೊಸ ಪ್ರದೇಶಗಳನ್ನು ತಮ್ಮ ವಶದಲ್ಲಿ ತೆಗೆದುಕೊಳ್ಳುವದು ಅಗತ್ಯವಾದುದರಿಂದ ಸಮಶೀತೋಷ್ಣ ಪ್ರದೇಶದಲ್ಲಿಯ ಬೀಳು ಭಾಗಗಳಲ್ಲಿ ಜನವಸತಿಯಾದದ್ದಲ್ಲದೆ ಉಷ್ಣ ಕಟಿಬಂಧದಲ್ಲಿದ್ದ ಏಸಿಯಾ ಆಫ್ರಿಕಾ ಖಂಡಗಳಲ್ಲಿ ಸಹ ಬೇರೆ ಬೇರೆ ರಾಷ್ಟ್ರಗಳು ತಮತಮಗೆ ಬೇಕಾದಂತೆ ತುಂಡುಗಳನ್ನು ಮಾಡಿ

ಕೊಂಡವು ಮಧ್ಯ ಮತ್ತು ದಕ್ಷಿಣ ಅಮೇರಿಕಗಳಲ್ಲಿ ಮನ್ರೋನೀತತ್ವವು ಅಡ್ಡಬಂದದರಿಂದ ಅಲ್ಲಿ ಭಾಗಗಳನ್ನು ಮಾಡಿ ಹಂಚಿಕೊಳ್ಳುವದು ಸಾಧ್ಯವಾಗದಿದ್ದರೂ ದುಡ್ಡಿನಿಂದ ತಮ್ಮ ವರ್ಚಸ್ವವನ್ನು ಸ್ಥಾಪಿಸಿ ಆ ಆ ಭಾಗಗಳನ್ನು ತಮ್ಮ ವಶದಲ್ಲಿ ಇಟ್ಟುಕೊಳ್ಳುವ ಪ್ರಯತ್ನವು ನಡೆದೇ ಅದೆ. ಮೊನ್ನಿನ ಮಹಾಯುದ್ಧದಲ್ಲಿ ಈ ಸ್ಪರ್ಧೆಯು ಪರಮಾವಧಿಯು ಜನರಿಗೆ ತಿಳಿದು ಬಂತು.

**(ಇ) ಪೂರ್ವೇತಿಹಾಸ ಮತ್ತು ಪರಂಪರೆ:**—ಜನಾಂಗದ ಇತಿಹಾಸದಲ್ಲಿ ಮೂರನೇ ಮಹತ್ವದ ಸಂಗತಿಯೆಂದರೆ ಅದರ ಪೂರ್ವೇತಿಹಾಸವೂ ಪರಂಪರೆಯೂ. ಹಿಂದಿನ ಪರಂಪರೆಯನ್ನು ಬಿಟ್ಟು ಯಾವ ಜನಾಂಗಕ್ಕೂ ಮುಂದೆ ಹೆಜ್ಜೆಯಿಡಲಿಕ್ಕೆ ತಿಳಿಯುವದಿಲ್ಲ. ಯಾಕೆಂದರೆ-ಅವರ ಸಾಮಾಜಿಕ ರಾಜಕೀಯ ಪದ್ಧತಿಗಳು ಬಹು ದಿವಸ ನೆಲೆಗೊಂಡದ್ದರಿಂದ ಬದಲಿಸಲಿಕ್ಕೆ ಅಸಾಧ್ಯವಾಗಿರುವವು. ಆದದರಿಂದ ಯಾವದೊಂದು ಜನಾಂಗದ ವಿಷಯಕ್ಕೆ ಅಭ್ಯಾಸಿಸುವದಾದರೆ ಅದರ ಪೂರ್ವೇತಿಹಾಸವನ್ನೂ ಪರಂಪರೆಯನ್ನೂ ತಿಳಿದುಕೊಳ್ಳಬೇಕಾಗುವದು.

ಇನ್ನು ನಾವು ಭೂಗೋಲವನ್ನು ಅಭ್ಯಾಸಿಸುವಾಗ ಅತಿ ಪ್ರಾಚೀನ ಕಾಲದಿಂದ ಮನುಷ್ಯನು ತನ್ನ ಸುಖದ ದೆಶೆಯಿಂದ ಎಷ್ಟು ಪ್ರಗತಿಯನ್ನುಂಟುಮಾಡಿದ್ದಾನೆಂಬದನ್ನು ವಿಚಾರಮಾಡುವೆವು. ಮನುಷ್ಯನಲ್ಲಿ ವಿಲಕ್ಷಣವಾದ ಚೈತನ್ಯಶಕ್ತಿ ಇದ್ದದರಿಂದ ಬೇಟೆಯಿಂದ ಜೀವಿಸುವ ಸ್ಥಿತಿಯನ್ನು ಬಿಟ್ಟು ತನ್ನ ಕುರಿಯ ಹಿಂಡಿನೊಳಗೆ ವಾಸಮಾಡಹತ್ತಿದನು. ತಂಡಕಟ್ಟಿಕೊಂಡು ತಿರುಗುವದನ್ನು ಬಿಟ್ಟು ಒತ್ತಟ್ಟಿಗೆ ಸ್ಥಿರವಾಗಿ ಕಾಲೂರಿ ಭೂಮಿಯನ್ನು ಸಾಗುಮಾಡಹತ್ತಿದನು. ಅಡವಿಯನ್ನು ಕಡಿದು ಜವಳನ್ನು ಒಣಗಿಸಿ ಅನಾರೋಗ್ಯಕರವಾಗಿದ್ದ ಭೂಭಾಗವನ್ನು ತನ್ನ ಬುದ್ಧಿಯಿಂದ ಜನವಸತಿಗೆ ತಕ್ಕದ್ದನ್ನಾಗಿ ಮಾಡಿದನು. ನದಿಗಳಿಗೆ ಒಡ್ಡುಗಳನ್ನು ಹಾಕಿ ಮರು ಭೂಮಿಯನ್ನು ಫಲದ್ರೂಪವಾಗುವಂತೆ ಮಾಡಿರುತ್ತಾನೆ. ನಿರ್ಜನ ಪ್ರದೇಶದಲ್ಲಿ ಹೊಸ ಖನಿಜಗಳನ್ನು ಹುಡುಕಿ ನಗರಗಳನ್ನೂ ಪಟ್ಟಣಗಳನ್ನೂ ಉಂಟುಮಾಡಿದ್ದಾನೆ. ಸಂಯೋಗಭೂಮಿಯನ್ನು ಕಡಿದು, ಕಾಲುವೆಮಾಡಿ, ಸಮುದ್ರಯಾನವು ಸುಲಭವಾಗುವಂತೆಯೂ ವ್ಯಾಪಾರವು ಬೆಳೆಯುವಂತೆಯೂ ಮಾಡಿದ್ದಾನೆ. ಹೀಗೆ ಸೃಷ್ಟಿ ಶಕ್ತಿಗಳನ್ನು ಉಪಯೋಗಿಸಿಕೊಂಡು ಉತ್ಕ್ರಾಂತಿಯನ್ನು ಹೊಂದುವ ಚೈತನ್ಯವು ಮನುಷ್ಯನಲ್ಲಿ ಇದ್ದದರಿಂದ ಭೂಗೋಲದ ಅಭ್ಯಾಸದಲ್ಲಿ ಈ ಮಹತ್ವದ ಸಂಗತಿಯನ್ನು ಮರೆಯಕೂಡದು. ಈಗಿರುವ ಸಂಸ್ಕೃತಿಯು ಕ್ರಮವಾಗಿ ಯಾವ ಯಾವ ಮೆಟ್ಟಿಗಳಿಂದ ಉಂಟಾಯಿತೆಂಬದನ್ನು ವಿದ್ಯಾರ್ಥಿಗಳಿಗೆ ತಿಳಿಯಪಡಿಸುವದು ಅವಶ್ಯವದೆ.

**೭. ಅಭ್ಯಾಸದ ಮೆಟ್ಟುಗಳು.:**—ಭೂಗೋಲ ಅಭ್ಯಾಸದ ಮೆಟ್ಟುಗಳ ವಿಷಯಕ್ಕೆ ವಿಚಾರ ಮಾಡಿದರೆ, ಇದರಲ್ಲಿ ಸಾಮಾನ್ಯವಾಗಿ ಎರಡು ಮೆಟ್ಟುಗಳನ್ನು

ಮಾಡಬಹುದು. ೧ನೇದು ಹನ್ನೆರಡು ವರ್ಷದ ವಯುಸ್ಸಿನೊಳಗಿನ ಬಾಲಕರಿಗೆ, ೨ನೇದು ಈ ವಯಸ್ಸನ್ನು ಮೀರಿದ ತರುಣರಿಗೆ ಸರಿಯಾಗುವದು. ಮೊದಲನೇ ಮೆಟ್ಟಿನಲ್ಲಿ ಶಿಕ್ಷಕರು ತಮ್ಮ ಹಾಗು ಬೇರೆ ದೇಶಗಳ ಜನರ ಜೀವಿತಕ್ರಮ, ಉದ್ಯೋಗ, ಆಹಾರ, ಬಟ್ಟೆ, ಮನೆ, ಪ್ರವಾಸದ ಸಾಧನ ಇವುಗಳ ವಿಷಯುಕ್ಕೆ ಮನೋರಂಜಕವಾದ ಕಥೆಗಳನ್ನೂ ವರ್ಣನೆಗಳನನ್ನು ಚಿತ್ರಗಳ ಸಹಾಯದಿಂದ ಸುಲಭವಾಗಿ ಹೇಳಬೇಕು. ಬಾಲಕರಿಗೆ ನಿತ್ಯದಲ್ಲಿ ಬೇಕಾಗುವ ಪದಾರ್ಥಗಳು ಎಲ್ಲಿ ಹುಟ್ಟುತ್ತವೆ. ಅಲ್ಲಿಂದ ಹೇಗೆ ಎರಡನೇ ಕಡೆಗೆ ಹೋಗುತ್ತವೆ ಎಂಬ ಸಂಗತಿಗಳನ್ನು ಅವರು ತಿಳಿದುಕೊಂಡರೆ ಜಗತ್ತಿನಲ್ಲಿ ಅನ್ಯೋನ್ಯವಾದ ಆರ್ಥಿಕ ಅವಲಂಬನವಿರುವದೆಂಬದು ಬಾಲಕರಿಗೆ ಮಸ ಮಸಕಾಗಿ ತಿಳಿಯ ಹತ್ತುವದು.

ಎರಡನೇ ಮೆಟ್ಟಿನಲ್ಲಿ ವಿದ್ಯಾರ್ಥಿಗಳು ಜಗತ್ತಿನ ಹಾಗು ಅದರಲ್ಲಿದ್ದ ಜನಾಂಗಗಳ ವಿಷಯಕ್ಕೆ ಆಳವಾಗಿಯೂ ಸೂಕ್ಷ್ಮವಾಗಿಯೂ ಕ್ರಮದಿಂದ ಎಲ್ಲ ಸಂಗತಿಗಳನ್ನೂ ಅಭ್ಯಾಸಿಸಬೇಕಾಗುವದು. ಈ ಅವಧಿಯಲ್ಲಿ ಕಾರ್ಯಗಳಿಗೆ ಕಾರಣಗಳನ್ನು ಶೋಧಿಸುತ್ತ ಉದಾತ್ತದೃಷ್ಟಿಯಿಂದ ಅವಲೋಕನ ಮಾಡಬೇಕಾಗುವದು. ಜಗತ್ತಿನಲ್ಲಿದ್ದ ಬೇರೆ ಬೇರೆ ಜನಾಂಗಗಳ ಆರ್ಥಿಕ ಹಾಗು ಆಂತರರಾಷ್ಟ್ರೀಯ ಪ್ರಮೇಯಗಳನ್ನು ತಿಳಿದುಕೊಳ್ಳುವಷ್ಟು ಸೂಕ್ಷ್ಮವಾಗಿ ವಿಚಾರ ಮಾಡಬೇಕಾಗುವದು.

೮. **ಆರಂಭದ ಅಭ್ಯಾಸ:**–(೧)ಆರಂಭದ ವಿಷಯವು ಬಾಲಕನಿಗೆ ಪರಿಚಿತವಾದ ಕುಟುಂಬದ ಜೀವಿತವು- ಕುಟುಂಬಕ್ಕೆ ಬೇಕಾಗುವ ಅಗತ್ಯಗಳು, ಅವುಗಳನ್ನು ಪೂರೈಸುವದಕ್ಕೆ ತಾಯಿತಂದೆಗಳು ಮಾಡುವ ಉದ್ಯೋಗ ಇವುಗಳ ವಿಷಯಕ್ಕೆ ಅವರಿಗೆ ದಿನಾಲು ಅನುಭವ ದೊರೆಯುವದು. ಈ ಅವಧಿಯಲ್ಲಿ ತಿಳಿಯತಕ್ಕ ವಿಷಯಗಳೆಂದರೆ- ಮನೆ, ಬಟ್ಟೆ, ಆಹಾಗ, ಉದ್ಯೋಗ, ಆಟನೋಟ, ಆಯುಧ, ಪಾತ್ರೆ, ಪ್ರವಾಸದ ಸಾಧನ ಮೊದಲಾದವು. ಬೇರೆ ಬೇರೆ ಪ್ರದೇಶದಲ್ಲಿಯ ಜನರ ಬಗ್ಗೆ ಮೇಲೆ ಹೇಳಿದ ಸಂಗತಿಗಳನ್ನು ತಿಳಿದುಕೊಂಡು ತಮ್ಮ ಅನುಭವಕ್ಕೆ ಅವುಗಳನ್ನು ಹೋಲಿಸಿ ನೋಡಿದರೆ ಪ್ರಗತಿಯ ಯಾವ ಯಾವ ತರಗತಿಗಳಲ್ಲಿ ಯಾವ ಯಾವ ಜನಾಂಗಗಳಿರುವವೆಂಬದು ಗೊತ್ತಾಗುವದು. ಮನೆಗೆ ಬೇಕಾಗುವ ಪದಾರ್ಥಗಳನ್ನು ದೊರಕಿಸಲಿಕ್ಕೆ ಜಗತ್ತಿನ ಇತರ ದೇಶಗಳ ಮೇಲೆ ಅವಲಂಬಿಸುವದು ಹೇಗೆ ಅವಶ್ಯವೆಂಬದು ಗೊತ್ತಾಗುವದು. ಉದಾ:--ಸೂಜಿ, ಕಂದೀಲು ಇವು ಜರ್ಮನಿ, ಅಮೇರಿಕಾ, ಇಂಗ್ಲಂಡ, ಜಪಾನ ಈ ದೇಶಗಳಿಂದ ಇಲ್ಲಿಗೆ ಬರುವವು. ಕಡ್ಡಿಪೆಟ್ಟಿಗೆಗಳು ಜಪಾನ, ಸ್ವೀಡನ ನಾರ್ವೆಗಳಿಂದ ಬರುವವು. ಆದದರಿಂದ ಈ ಭಾಗವನ್ನು ಕಲಿಸುವಾಗ ಗ್ಲೋಬನ್ನೂ ಪೃಥ್ವಿಯ ನಕಾಶವನ್ನೂ ಉಪಯೋಗಿಸಬೇಕು,

ಜಗತ್ತಿನಲ್ಲಿ ಮೂಲನಿವಾಸಿಗಳಂತೆ ಇದ್ದ ಜನರು ಪ್ರಗತಿಯನ್ನು ಹೇಗೆ ಹೇಗೆ ಹೊಂದಿದರೆಂಬದನ್ನು ಸಹ ಬಾಲಕರು ತಿಳಿಯಬಹುದು.. ಆರಂಭದಲ್ಲಿ (೧) ಮನುಷ್ಯನು ಬೇಟೆಯಿಂದ ಇಲ್ಲವೆ ಮೀನುಹಿಡಿದು ಉಪಜೀವಿಸುತ್ತಿದ್ದನು. ಈಗ್ಯೂ ಇಂಥ ಜನರು ಅಲ್ಲಲ್ಲಿ ಇರುವರು. ಉದಾ—ಚಿಗರಿಬಲಿಗಾರರು, ಭಿಲ್ಲರು, ನ್ಯೂಫೌಂಡಲಂಡದ ಹತ್ತರ 'ಕಾಡ್' ಮೀನುಗಳನ್ನು ಹಿಡಿದು 'ಕಾಡ್ಲಿವರ ಆಯಿಲ್' ಎಂಬ ಔಷಧವನ್ನು ಮಾಡುವವರು. (೨) ತಂಡಗಳನ್ನು ಕಟ್ಟಿಕೊಂಡು ದನಕರುಗಳನ್ನು ಸಾಕಿ ಗೌಳಿಗರ ಉದ್ಯೋಗ ಮಾಡುವಂಥ ಜನರು. ಉದಾ:—ಧನಗರ ಗವಳಿಗಳು, ಏಶಿಯಾದ ತಪ್ಪಲು ಭೂಮಿಗಳಲ್ಲಿದ್ದ ಕಿರಗಿಜರು. ಸುಧಾರಿಸಿದ ಜನರು ಸಹ ಕೆಲವೆಡೆಗಳಲ್ಲಿ ಈ ಉದ್ಯೋಗವನ್ನೇ ಕೈಕೊಂಡಿರುವರು. ಆಸ್ಟ್ರೇಲಿಯಾದಲ್ಲಿ ಕುರಿಗಳನ್ನೂ ಆಫ್ರಿಕಾದಲ್ಲಿ ಶಹಾಮೃಗಗಳನ್ನೂ ಕಾಲಿಫೋರ್ನಿಯಾದಲ್ಲಿ ಕೋಳಿಗಳನ್ನೂ ಸಾಕುವವರು ಸುಧಾರಣೆ ಹೊಂದಿದವರು. ಕಾಡು ಜನರಲ್ಲ. (೩)ಒಕ್ಕಲತನ ಸಾಗಿಸಿ ಉಪಜೀವಿಸುವವರು ಜಗತ್ತಿನ ಎಲ್ಲ ಭಾಗಗಳಲ್ಲಿರುವರು. ಮಳೆಯಾಗದ ಪ್ರದೇಶದಲ್ಲಿ ನದಿಗಳಿಗೆ ಒಡ್ಡು ಹಾಕಿ ಬೆಳೆಮಾಡುವರು. ಉದಾ—ಸಿಂಧ, ಪಂಜಾಬ, ಇಜಿಪ್ತ, ಮೆಸೋಪೋಟೋಮಿಯಾ. (೪) ಔದ್ಯೋಗಿಕ ವೃತ್ತಿಯಿಂದ ಇರುವವರು—ಮನುಷ್ಯನಿಗೆ ಅತ್ಯವಶ್ಯವಾಗಿ ಬೇಕಾಗುವ ಬಟ್ಟೆ, ಮಣ್ಣಿನ ಹೆಂಟೆ, ಇಟ್ಟಂಗಿ, ಪಾತ್ರೆಗಳನ್ನು ಮಾಡಲಿಕ್ಕೆ ಬೇಕಾಗುವ ಕುಂಬಾರರೂ ನೇಕಾರರೂ ಸಮಾಜದಲ್ಲಿ ಮೊದಲಿನವರು. ಈಗಿನ ಕಾಲಕ್ಕೆ ಉದ್ಯೋಗದಿಂದಲೇ ಮುಂಪರಿದ ದೇಶಗಳು ಹಲವಿರುವವು. ಉದಾ—ಜರ್ಮನಿ—ಚಾಕು, ಕತ್ತರಿ, ಕಂದೀಲು, ಯಂತ್ರ ಮುಂ. ಇಂಗ್ಲಂಡ—ಅರಿವೆ, ಯಂತ್ರ ಮುಂ ಅಮೇರಿಕಾ—ಮೋಟಾರ, ಯಂತ್ರ ಮುಂ. ಹೀಗೆ ಬಾಲಕರಿಗೆ ಅಭ್ಯಾಸಿಸಲಿಕ್ಕೆ ಸಾಮುಗ್ರಿಯು ಮೇಲೆ ಹೇಳಿದ ಸಂಗತಿಗಳಿಂದ ಯಥೇಚ್ಛವಾಗಿ ದೊರಕುವದು. ಗ್ಲೋಬು ಹಾಗು ಪೃಥ್ವಿಯ ನಕಾಶ ಇವುಗಳನ್ನು ಅವಲೋಕನಮಾಡಿ ಮುಖ್ಯ ಮುಖ್ಯ ಭಾಗಗಳು ಎಲ್ಲೆಲ್ಲಿ ಅವೆಯೆಂಬದನ್ನು ತಿಳಿದುಕೊಳ್ಳಬೇಕು.

೨ ಸದ್ಯಕ್ಕೆ ನಮ್ಮಲ್ಲಿ ಆರಂಭದ ಇಯತ್ತೆಗಳಲ್ಲಿ ತಾಲೂಕಿನ, ಜಿಲ್ಹೆಯ ಅಥವಾ ಪ್ರಾಂತದ ಭೂಗೋಲವನ್ನು ಕಲಿಸುವರು. ಕಲಿಸುವ ಪದ್ಧತಿಯಲ್ಲಿ ಈಗ ಕೆಲಪಟ್ಟಿಗೆ ಸುಧಾರಣೆಯಾಗಿದೆ. ಇದರ ಸಂಗಡಲೇ ಕೆಳಗೆ ವಿವರಿಸಿದಂತೆ ಜಗತ್ತಿನ ಎಲ್ಲ ಖಂಡಗಳ ವಿಷಯಕ್ಕೆ ಸ್ಥೂಲಮಾನದಿಂದ ಒಡೆದುಕಾಣುವಂಥ ದೊಡ್ಡ ಸಂಗತಿಗಳನ್ನು ಗೊತ್ತುಮಾಡಿಕೊಡುವದು ಅವಶ್ಯವದೆ. ಹಾಗೆ ಮಾಡುವದರಿಂದ ಬಾಲಕರಿಗೆ ಭೂಗೋಲದ ಸರಿಯಾದ ಪ್ರಾಥಮಿಕ ಕಲ್ಪನೆಯು ಉಂಟಾಗುವದು. ಈ ಪದ್ಧತಿಯಿಂದಲೇ ಜಗತ್ತಿನ ಸುಧಾರಿಸಿದ ರಾಷ್ಟ್ರಗಳಲ್ಲಿ ಭೂಗೋಲ-ಶಿಕ್ಷಣವು ನಡೆಯುವದು. ಆದರೆ ವ್ಹ. ಫಾ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿದವರಿಗೆಸಹ ಈ

ಮಹತ್ವದ ಸಂಗತಿಗಳ ಅರಿವೇ ಇರುವದಿಲ್ಲ. ಬೇರೆ ಬೇರೆ ದೇಶಗಳ ಭೂಗೋಲವನ್ನು ಪ್ರಥಕ್ ಪ್ರಥಕ್ಕಾಗಿ ಓದುವದರಿಂದ ಸಣ್ಣ ಸಂಗತಿಗಳಿಗಷ್ಟೇ ಮಹತ್ವಕೊಡುವರು. ದೊಡ್ಡ ಸಂಗತಿಗಳನ್ನು ಮರೆತುಬಿಡುವರು. ಆದ್ದರಿಂದ ಒಂದೊಂದು ಖಂಡದ ವಿಷಯಕ್ಕೆ ಕೆಳಗೆ ಹೇಳಿದಂತೆ ಮುಖ್ಯ ಸಂಗತಿಗಳನ್ನು ಹೇಳಬಹುದು.

**ಏಸಿಯಾ**– ಎಲ್ಲ ಧರ್ಮಗಳ ಉಗಮಸ್ಥಾನ (ಮುಸಲ್ಮಾನೀಧರ್ಮದ ಉ. ಸ್ಥಾ. ಅರಬಸ್ಥಾನ, ಕ್ರಿಶ್ಚಿಯನ್ ಧರ್ಮದ ಉ. ಸ್ಥಾ. ಪಾಲೆಸ್ಟೈನ, ಹಿಂದು–ಬೌದ್ಧ ಜೈನ ಧರ್ಮಗಳ ಉ. ಸ್ಥಾ. ಹಿಂದುಸ್ಥಾನ) ಅಕ್ಕಿ, ಚಹ, ಹತ್ತಿ, ಗೋದಿ ಇವು ಬೆಳೆಯುತ್ತವೆ, ಚೀನವು ವಿಸ್ತಾರದಲ್ಲಿಯೂ ಜನಸಂಖ್ಯೆಯಲ್ಲಿಯೂ ದೊಡ್ಡದು. ಜಪಾನವು ಉದ್ಯೋಗ, ಯಂತ್ರ, ಶೋಧ ಇವುಗಳಿಂದ ಮಹತ್ವದ ದೇಶವು. ಹಿಂದುಸ್ತಾನವು ಜಗತ್ತಿನ ಸಂಕ್ಷಿಪ್ತ ಸ್ವರೂಪವು.

**ಯುರೋಪ**–ಸುಧಾರಣೆಯ ಶಿಖರವನ್ನೇರಿದ ಖಂಡವು. ಸಮುದ್ರದ ದಂಡೆಗೆ ಎಲ್ಲ ದೇಶಗಳಿರುವದರಿಂದ ಜನರು ನಾವಾಡಿಗರೆಂದು ಹೆಸರಾಗಿದ್ದಾರೆ. ಹವೆಯು ಆರೋಗ್ಯಕರ; ಜನಸಂಖ್ಯೆಯು ಹೆಚ್ಚು; ಸಾಹಸದಿಂದ ಉಳಿದ ಖಂಡಗಳಲ್ಲಿ ವಸಾಹತುಗಳನ್ನು ಮಾಡಿದ್ದಾರೆ. ಉದ್ಯೋಗ, ಯಂತ್ರ, ಶೋಧ ಇವುಗಳಲ್ಲಿ ಎಲ್ಲ ದೇಶಗಳೂ ಸ್ಪರ್ಧೆಯಿಂದ ಮುಂದುವರಿಯುತ್ತವೆ, ಅವುಗಳಲ್ಲಿ ಇಂಗ್ಲಂಡ, ಫ್ರಾನ್ಸ, ಜರ್ಮನಿ ಇವು ಮುಖ್ಯ. ಇಲ್ಲಿ ಕಲ್ಲಿದ್ದಲಿ ಕಬ್ಬಿಣದ ಖಣಿಗಳು ಅವೆ.

**ಆಫ್ರಿಕಾ**–ವಿಷುವವೃತ್ತಕ್ಕೆ ಅತಿಸಮೀಪದ ಪ್ರದೇಶ; ಹವೆ ಉಷ್ಣ: ಜನರು ಕಾಡುಸ್ಥಿತಿಯವರು. ಯುರೋಪೀಯರು ಅಲ್ಲಿ ಹೋಗಿ ನೆಲೆಗೊಂಡು ಬಂಗಾರದ ಖಣಿ, ವಜ್ರದ ಖಣಿ, ಒಕ್ಕಲತನ, ಶಹಾಮೃಗಗಳನ್ನು ಸಾಕುವದು ಮೊದಲಾದ ಉದ್ಯೋಗಗಳನ್ನು ಮಾಡುವರು. ನೈಲನದಿಯಿಂದ ಇಜಿಪ್ತದಲ್ಲಿ ಉತ್ತಮ ಹತ್ತಿಯು ಬೆಳೆಯುವದು.

**ಉತ್ತರ ಅಮೇರಿಕಾ**– ಸ್ವಾತಂತ್ರ್ಯದ ತವರಮನೆಯು. ಅತಿ ಸಂಪತ್ತುಳ್ಳ ಭಾಗ. ಖನಿಗಳಲ್ಲಿ ಚಿಮಣಿಯಣ್ಣೆ, ಕಬ್ಬಿಣ, ಬಂಗಾರ ಇವು ದೊರೆಯುವವು. ಶೋಧ, ಯಂತ್ರ, ಕಲಾಕೌಶಲ್ಯಗಳಲ್ಲಿ ಯುರೋಪಖಂಡಕ್ಕಿಂತಲೂ ಮುಂದರಿದದ್ದು.

**ದಕ್ಷಿಣ ಅಮೇರಿಕಾ**– ಸ್ವಾತಂತ್ರ್ಯದ ಗಾಳಿಯು ಪೂರ್ಣವಾಗಿ ಬೀಸುವದು. ಬ್ರಾಜಿಲದ ವಿಸ್ತಾರವಾದ ಪ್ರದೇಶದಲ್ಲಿ ಗೋದಿಯು ಬೆಳೆಯುವದು.

**ಆಸ್ಟ್ರೇಲಿಯಾ**– ಯುರೋಪೀಯರು ವಸಾಹತು ಮಾಡಿದ ಪ್ರದೇಶ: ಕುರಿ ಕುದುರೆಗಳನ್ನು ಸಾಕಿ ಅವುಗಳನ್ನು ಪರದೇಶಗಳಿಗೆ ಕಳಿಸುವರು. ಖನಿಗಳಲ್ಲಿ ಬೆಳ್ಳಿ ಬಂಗಾರಗಳು ದೊರೆಯುವವು,

ಹೀಗೆ ಮುಖ್ಯ ಸಂಗತಿಗಳನ್ನು ಹೇಳಿ ಗ್ಲೋಬದಲ್ಲಿ ಆಯಾ ಖಂಡಗಳನ್ನೂ ಅವುಗಳಿಗಿರುವ ಸ್ಥಾನವನ್ನೂ ತೋರಿಸಿ ಹಿಂದುಸ್ಥಾನಕ್ಕೂ ಆ ಪ್ರದೇಶಗಳಿಗೂ ಇರುವ

ಸಾಮ್ಯವೈಷಮ್ಯಗಳನ್ನು ಸ್ಥೂಲವಾಗಿ ಉಲ್ಲೇಖಿಸಬೇಕು. ಹೀಗೆ ಸಂಕ್ಷಿಪ್ತವಾಗಿ ಮುಖ್ಯಸಂಗತಿಗಳನ್ನು ಅಭ್ಯಾಸಿಸುವದರಿಂದ, ಸಾಂಪತ್ತಿಕ ಕೊರತೆಯು ಉಂಟಾದರೆ ಜನರಲ್ಲಿ ಸಾಹಸಗುಣವು ಉಂಟಾಗುವದು. ಜನಸಂಖ್ಯೆಯು ಹೆಚ್ಚಾದ ಪ್ರದೇಶದಿಂದ ಜನರು ಬೇರೆ ಖಂಡಗಳಿಗೆ ಹೋಗಿ ನೆಲೆಗೊಳ್ಳುವರು. ಮುಖ್ಯವಾಗಿ ಬಂಗಾರ-ಬೆಳ್ಳಿ, ಕಲ್ಲಿದ್ದಲಿ, ಕಬ್ಬಿಣ ಅವಕ್ಕೂ ಹೆಚ್ಚು ಚಿಮಣಿಯಣ್ಣೆ (ಪೆಟ್ರೋಲ) ಇವು ದೊರೆಯು ವಲ್ಲಿ ಜನರು ಮುಗಿಬೀಳುವರು ಎಂಬದು ಬಾಲಕರಿಗೆ ಗೊತ್ತಾಗುವದು ಹಿಂದುಸ್ತಾನದ ಜನರಿಗಿಂತ ಯುರೋಪ ಅಮೇರಿಕಾ ಖಂಡಗಳ ಜನರಲ್ಲಿ ಹೆಚ್ಚು ಚೈತನ್ಯವೂ ದೀರ್ಘಾಯುಷ್ಯವೂ ಉಂಟಾಗಲಿಕ್ಕೆ ಅವರಲ್ಲಿದ್ದ ಸಾಹಸಗುಣವೂ ದೇಶಕಾಲಮಾನಕ್ಕನುಸಾರವಾಗಿ ಅನುಕೂಲತೆಗಳನ್ನು ಮಾಡಿಕೊಳ್ಳುವ ಜಾಣತನವೂ ಕಾರಣವಾಗಿವೆ

(೩) **ವ್ಯಾಪಾರದ ಹಾಗೂ ಗಮನದ ಸಾಧನಗಳು** ಯಾವ ಯಾವ ಕ್ರಮದಿಂದ ಪ್ರಗತಿಯನ್ನು ಹೊಂದಿದವೆಂದನ್ನು ತಿಳಿಯುವದು ಸಹ ಅವಶ್ಯವದೆ.

೧ ಮೊದಲು ಎತ್ತು, ಕುದುರೆ, ಒಂಟೆ ಹೇಸರಗತ್ತೆಗಳ ಮೇಲೆ ಸಾಮಾನುಗಳನ್ನು ಒಯ್ಯುವದು ರೂಢಿಯಲ್ಲಿತ್ತು. ಈಗ್ಯೂ ಅಫಗಾಣಿಸ್ಥಾನ ಮಧ್ಯ ಏಸಿಯಗಳಿಂದ ಬರತಕ್ಕ ಸರಕುಗಳು ಇದೇ ಕ್ರಮದಿಂದಲೇ ಹಿಂದುಸ್ಥಾನಕ್ಕೆ ಬರುವವು. ಉಸುಬಿನ ಬೈಲುಗಳಲ್ಲಿಯೂ ಪರ್ವತಾವಳಿಗಳಿದ್ದಲ್ಲಿಯೂ ರೇಲ್ವೆಗಳನ್ನು ಮಾಡುವದು ಅತಿ ಶ್ರಮದ ಹಾಗೂ ವೆಚ್ಚದ ಕೆಲಸವು. ಆದದರಿಂದ ದಮುಸ್ಕಸದಿಂದ ಬಗದಾದದ ವರೆಗೂ ಪೇಶಾವರದಿಂದ ಬುಖಾರದ ವರೆಗೂ ಭಾರವಾಹಕ ಪ್ರಾಣಿಗಳಿಂದಲೇ ವ್ಯಾಪಾರವು ನಡೆಯುವದು.

೨. ಬೈಲು ಪ್ರದೇಶವು ವಿಸ್ತೀರ್ಣವಾಗಿದ್ದರೆ ಎತ್ತಿನ ಇಲ್ಲವೆ ಕುದುರೆಯ ಬಂಡಿಗಳಿಂದ ಸರಕುಗಳನ್ನು ಒಯ್ಯುವರು. ರಸಿಯ ಆಫ್ರಿಕಾಗಳ ಬೈಲುಪ್ರದೇಶದಲ್ಲಿ ೧೦–೨೦ ದನಗಳನ್ನು ಹೂಡಿ ದೊಡ್ಡ ದೊಡ್ಡ ಬಂಡಿಗಳಲ್ಲಿ ವ್ಯಾಪಾರದ ಸರಕುಗಳನ್ನು ಹಾಕಿ ಒಯ್ಯುವರು. ನಮ್ಮಲ್ಲಿಯೂ ವೆಂಗುರ್ಲೆಯಿಂದ ಬೆಳಗಾಂವಿಗೆ, ಅಂಕೋಲೆಯಿಂದ ಹುಬ್ಬಳ್ಳಿಗೆ ಚಕ್ಕಡಿಗಳ ಮೇಲೆಯೇ ವ್ಯಾಪಾರವು ನಡೆಯುವದು.

೩. ಅಡವಿಗಳಿದ್ದಲ್ಲಿ ಅಥವಾ ಪರ್ವತ ಶಿಖರಗಳ ಮೇಲೆ ತಲೆ ವಜ್ಜೆಯಿಂದ ಸಾಮಾನುಗಳು ಹೋಗುವವು. ಕಾರವಾರ ಜಿಲ್ಹೆಯಲ್ಲಿ, ಆಫ್ರಿಕಾದ ಕಾಂಗೊ ಎಂಬ ಪ್ರದೇಶದಲ್ಲಿ ಹಿಮಾಲಯ ಪರ್ವತದ ಮೇಲೆ, ಕೂಲಿಯವರು ಸಾಮಾನುಗಳನ್ನು ಹೊತ್ತುಕೊಂಡು ಹೋಗುವರು.

೪. ನದಿಗಳಲ್ಲಿ, ಸರೋವರಗಳಲ್ಲಿ ಇಲ್ಲವೆ ಕಾಲುವೆಗಳೊಳಗೆ ಡೋಣಿ ಅಥವಾ ಸ್ಟೀಮರುಗಳಲ್ಲಿ ಸರಕುಗಳನ್ನು ಹಾಕಿ ಕಳಿಸುವರು. ಉದಾ— ಬಂಗಾಲದ ಇಲ್ಲವೆ

ಕಾರವಾರ ಜಿಲ್ಹೆಯ ನದಿಗಳಲ್ಲಿ, ಗಂಗಾ ಮಿಸಿಸಿಪಿನದಿಗಳಲ್ಲಿ, ಕ್ವಿಬೆಕದಿಂದ ಚಿಕಾಗೋ ಪಟ್ಟಣಕ್ಕೆ ಸರೋವರದಲ್ಲಿ ಡೋಣಿಗಳು ನಡೆಯುವವು.

೫. ಸಮುದ್ರಯಾನ– ಜಗತ್ತಿನ ಮುಖ್ಯ ಮುಖ್ಯ ಪ್ರದೇಶಗಳ ಕೂಡ ವ್ಯಾಪಾರವು ಇದೇ ಮಾರ್ಗದಿಂದ ನಡೆಯುವದು. ಉದಾ– ಹಿಂದುಸ್ಥಾನದಿಂದ ಇಂಗ್ಲಂಡಕ್ಕೆ ಅಥವಾ ಜಪಾನಕ್ಕೆ

೬. ರೇಲಮಾರ್ಗದಿಂದ– ಬರ್ಲಿನದಿಂದ ಹೊರಟ ಲೋಹ ಮಾರ್ಗವು ೫೦೦೦ ಮೈಲುಗಳ ಆಚೆಗಿದ್ದ ಸೈಬೀರಿಯದ ಆಗ್ನೆಯಕ್ಕಿದ್ದ ವ್ಹಾಡಿವೊಸ್ಟಾಕ ಬಂದರಕ್ಕೆ ಹೋಗಿರುವದು. ಅದರಂತೆ ಉತ್ತರ ಅಮೇರಿಕಾದ ಪೂರ್ವದಂಡೆಯಿಂದ ಪಶ್ಚಿಮ ದಂಡೆಗೆ ಹಾಯ್ದು ಹೋದ ಕಾನೇಡಿಯನ್ ಪ್ಯಾಸಿಪಿಕ ರೇಲ್ವೆಯು ೩೦೦೦ ಮೈಲು ಹೋಗಿರುವದು.

೭. ವಾಯುಮಾರ್ಗ–(ವಿಮಾನಗಳಿಂದ ಪ್ರವಾಸಿಕರನ್ನೂ, ಟಪಾಲನ್ನೂ, ಸರಕುಗಳನ್ನೂ ಒಯ್ಯುವ ವ್ಯವಸ್ಥೆ.) ವಿಮಾನಗಳ ವೇಗವು ತಾಸಿಗೆ ಒಂದುನೂರು ಮೈಲುಗಳ ವರೆಗೆ ಇರುವದರಿಂದಲೂ ಅವು ಪಕ್ಷಿಗಳಂತೆ ನೆಟ್ಟಗೆ ಹೋಗುವದರಿಂದಲೂ ಕಾಲವು ಸ್ವಲ್ಪ ಹತ್ತುವದು. ಲಂಡನದಿಂದ ಮುಂಬೈಗೆ ಜಲಮಾರ್ಗದಿಂದ ಬರಲಿಕ್ಕೆ ೧೫ ದಿವಸಗಳು ಹತ್ತುವವು; ವಿಮಾನದಿಂದ ೫–೬ ದಿವಸಗಳು ಸಾಕು.

ಮೇಲೆ ಹೇಳಿದ ಗಮನ ಸಾಧನಗಳ ವಿಷಯಕ್ಕೆ ಅನೇಕ ಪಾಠಗಳನ್ನು ಮನೋರಂಜಕವಾಗುವಂತೆ ಗ್ಲೋಬು ನಕಾಶಗಳ ಸಹಾಯದಿಂದ ಕಲಿಸಬಹುದು. ಚಿತ್ರಗಳು ಸಿಕ್ಕರೆ ಅವುಗಳ ಉಪಯೋಗವನ್ನು ಅವಶ್ಯವಾಗಿ ಮಾಡಬೇಕು. ಅಂದರೆ ಜಗತ್ತಿನೊಳಗಿನ ಜನರು ಅನ್ಯೋನ್ಯವಾಗಿ ಸಾಂಪತ್ತಿಕ ದೃಷ್ಟಿಯಿಂದ ಹೇಗೆ ಸಂಬಂಧವುಳ್ಳವರಿರುವರೆಂಬದು ಗೊತ್ತಾಗುವದು. ಪದಾರ್ಥಗಳ ಬೆಲೆಯು ಈಗಿನ ಕಾಲಕ್ಕೆ ಸಮೀಪದ ಪ್ರದೇಶದ ಬೇಡಿಕೆಯಿಂದಲೇ ನಿಶ್ಚಿತವಾಗದೆ ಜಗತ್ತಿನ ಬೇಡಿಕೆಯ ಮೇಲಿಂದ ನಿರ್ಣಯವಾಗುವದೆಂಬದನ್ನು ಉದಾಹರಣೆಗಳಿಂದ ತಿಳಿಸಬೇಕು. ಉದಾ– ೧೮೬೪ರಲ್ಲಿ ಸಂಯುಕ್ತಸಂಸ್ಥಾನದಲ್ಲಿ ಗುಲಾಮರ ಸ್ವಾತಂತ್ರ್ಯದ ಬಗ್ಗೆ ಯುದ್ಧವು ನಡೆದಾಗ ಹತ್ತಿಯು ಮಿತಿಮೀರಿ ಬೆಲೆಗಂಡಿತು. ಅದರಂತೆ ಮೊನ್ನಿನ ಯುದ್ಧದಲ್ಲಿ ಸಹ ಅರಳೆಯ ಬೆಲೆಯು ಪರಮಾವಧಿಯಾಯಿತು. ಈಗ ಇಂಗ್ಲಂಡದಲ್ಲಿ ತಯಾರಾದ ನೂಲಿನ ಅರಿವೆಗಳ ಸಂಗ್ರಹವು ಹೆಚ್ಚಾಗಿ ಬಿದ್ದದರಿಂದ ಅರಳೆಯ ವ್ಯಾಪಾರವು ಕಡಿಮೆಯಾಗಿ ಬೆಲೆಯು ಇಳಿದದೆ. ಜಪಾನದ ಬೇಡಿಕೆಯು ಇಲ್ಲದಿದ್ದರೆ ಹತ್ತಿಯನ್ನು ಹೆಚ್ಚಾಗಿ ಬೆಳೆಯುವ ರೈತರಿಗೆ ಪಶ್ಚಾತ್ತಾಪವಾಗಬಹುದಾಗಿತ್ತು. ಬಂಗಾರದ ಬೆಲೆಯು ಇದೇ ಕಾರಣದಿಂದಲೇ ಯುದ್ಧದ ಕಾಲಕ್ಕೆ ಮಿತಿಮೀರಿ ಬೆಳೆದು ಈಗ ಪೂರ್ಣ ಇಳಿದದೆ. ಆದದರಿಂದ ವ್ಯಾಪಾರದ ಕ್ಷೇತ್ರವು ದೇಶ, ಖಂಡಗಳಿಂದ ಮರ್ಯಾದಿತವಾಗದೆ ಇಡೀ ಜಗತ್ತೇ ಆಗಿದೆಯೆಂಬದು ಬಾಲಕರಿಗೆ ಗೊತ್ತಾಗುವದು.

೯. **ಹೆಚ್ಚಿನ ಅಭ್ಯಾಸ**—ಮೇಲಿನ ಇಯತ್ತೆಗಳಿಗೆ ಕಲಿಸುವಾಗ ಮೂರು ವಿಧವಾಗಿ ಭೂಗೋಲದ ಅಭ್ಯಾಸವನ್ನು ಮಾಡಬಹುದು. (೧) ಈಗಿನ್ನ ಖಂಡಗಳಂತೆ ವಿಭಾಗಮಾಡಿ ಅಭ್ಯಾಸಿಸುವದು. (೨) ಪ್ರಾಕೃತಿಕ ಸ್ವರೂಪದ ಮೇಲಿಂದ ತಿಳಿಯಬಹುದಾದದ್ದು. (೩) ಬೇರೆ ಬೇರೆ ಜನಾಂಗಗಳ ಸಮಾಜರಚನೆ, ನಾಗರಿಕತೆ ಮುಂತಾದ ಸಂತಿಗಳನ್ನು ಐತಿಹಾಸಿಕ ದೃಷ್ಟಿಯಿಂದ ವಿಚಾರ ಮಾಡುವದು.

**(೧) ಖಂಡಗಳ ಅಭ್ಯಾಸ :** - ಶಾಲೆಗಳಲ್ಲಿ ನಡೆಯುವ ಸಾಮಾನ್ಯವಾದ ಪದ್ಧತಿಯು ಇದೇ. ಈ ಪದ್ಧತಿಯಲ್ಲಿ ಕೆಲವು ಗುಣದೋಷಗಳು ಇರುವವು. ಭೂಗೋಲ ವಿದ್ಯೆಯಲ್ಲಿ ಬೇಕಾದ ಸಾಮಾನ್ಯ ಸಂಗತಿಗಳೆಲ್ಲ ಗೊತ್ತಾಗುವವೆಂಬದು ಈ ಪದ್ಧತಿಯ ಗುಣವು. ಮನುಷ್ಯನ ಪ್ರಗತಿಯೂ ಸುಧಾರಣೆಯೂ ಹೇಗೆ ಆದವೆಂಬದೂ ಬೇರೆ ಬೇರೆ ಧರ್ಮ ಜಾತಿಗಳ ನಡುವೆ ಅನೇಕ ಕಾರಣಗಳಿಂದ ಮನಸ್ತಾಪವೂ ದ್ವೇಷವೂ ಹೇಗೆ ಉಂಟಾಗುವವೆಂಬದೂ ಈ ಪದ್ಧತಿಯಿಂದ ಗೊತ್ತಾಗುವದಿಲ್ಲ. ಇದೇ ಇದರ ದೋಷವು.

**(೨) ಜಗತಿನಲ್ಲಿ ಪ್ರಾಕೃತಿಕ ಸ್ವರೂಪದಂತೆ ವಿಭಾಗಮಾಡಿ ಅಭ್ಯಾಸಿಸುವದು:** —ಈ ಪದ್ಧತಿಯಿಂದ ಅಭ್ಯಾಸಿಸುವಾಗ ಕೊರತೆಗಳು ಕಡಿಮೆ ಇದ್ದು ಹೆಚ್ಚಿನಅಪೇಕ್ಷೆ ಇಲ್ಲದ ಸ್ವಸಂತುಷ್ಟ ಜನರ ಹಾಗು ದೇಶದ ಬಗ್ಗೆ ಮೊದಲು ವಿಚಾರ ಮಾಡಬೇಕು. ಅದರ ಕ್ರಮವು ಕೆಳಗೆ ಬರೆದಂತೆ ಇರುವದು.

(೧) ಆರ್ಕಟಿಕದ ಪ್ರದೇಶವು ಮತ್ತು ಉಷ್ಣಭೂಖಂಡದ ಬೈಲುಗಳು.

(೨) ಉಷ ಕಟಿಬಂಧದೊಳಗಿನ ಹಳವುಗಳು ಮತ್ತು ಮಳೆಯಾಗುವ ಪ್ರದೇಶಗಳು.

(೩) ಸಾಧಾರಣ ಉಷ್ಣ ಮತ್ತು ಶೀತಕಟಿಬಂಧದ ಪ್ರದೇಶಗಳು.

ಜಗತ್ತಿನ ದೇಶಗಳಲ್ಲಿ ಆರ್ಥಿಕ ಹಾಗೂ ರಾಜಕೀಯ ಸ್ಥಿತಿಯು ಹೇಗಿರುವದೆಂಬದನ್ನು ಸಕಾರಣವಾಗಿ ವಿವೇಚನ ಮಾಡಬೇಕು. ಇದರಂತೆ ಎಲ್ಲೆಲ್ಲಿ ಔದ್ಯೋಗಿಕ ಪ್ರಗತಿಯಾಗಿದೆಯೆಂಬದನ್ನೂ .ಅದಕ್ಕೆ ಅಲ್ಲಿರುವ ಅನುಕೂಲತೆಗಳು ಯಾವವೆಂಬದನ್ನೂ ತಿಳಿದುಕೊಳ್ಳುವದು ಸಹ ಅವಶ್ಯವದೆ.

೩. **ಐತಿಹಾಸಿಕ ದೃಷ್ಟಿಯಿಂದ ವಿಚಾರಮಾಡುವದು :**—ಜಗತ್ತಿನಲ್ಲಿ ನಾಗರಿಕತೆಯು ಎಲ್ಲಿ ಹೇಗೆ ಉಂಟಾಯಿತು, ಅದು ಹೇಗೆ ಹಬ್ಬುತ್ತ ಹೋಯಿತು, ಅದರಿಂದ ಸಮಾಜದ ರಚನೆಯಲ್ಲಿ ಹೇಗೆ ಸುಧಾರಣೆಯಾಗುತ್ತ ಹೋಯಿತೆಂಬದನ್ನು ತಿಳಿಯುವದೇ ಈ ಪದ್ಧತಿಯ ಉದ್ದೇಶವು. ಮನುಷ್ಯನು ಕಾಡುಸ್ಥಿತಿಯೊಳಗಿಂದ ಯಾವ ಯಾವ ಮೆಟ್ಟುಗಳಿಂದ ಸುಧಾರಣೆಯನ್ನು ಹೊಂದಿ ಈಗಿನ ಪರಿಣತ ಸ್ಥಿತಿಗೆ ಬಂದನೆಂಬದನ್ನು ಬೇರೆ ಬೇರೆ ಭಾಗಗಳ ಅಭ್ಯಾಸ ಮಾಡಿ ಅವುಗಳನ್ನು ಹೋಲಿಸಿ

ನೋಡುವದರಿಂದ ತಿಳಿಯುವದು. ವ್ಯಾಪಾರ, ಉದ್ಯೋಗಗಳ ನಿಮಿತ್ತವಾಗಿ ಸುಧಾರಿಸಿದ ಜನರು ಬೇರೆ ಬೇರೆ ಭಾಗಗಳಿಗೆ ಹೋಗಿ ಅಲ್ಲಿ ವಾಸಮಾಡಿ ಅವುಗಳನ್ನು ಗೆದ್ದುಕೊಂಡು ತಮ್ಮ ನಾಗರಿಕತೆಯ ವರ್ಚಸ್ವವನ್ನು ಹೇಗೆ ಸ್ಥಾಪಿಸಿದರೆಂಬದು ಮನೋರಂಜಕ ವಿಷಯವಾಗಿರುವದು. ಇದೇ ಕಾರಣದಿಂದ ಅಡವಿಗಳನ್ನು ಕಡಿದು, ಜವಳು ಪ್ರದೇಶಗಳಲ್ಲಿ, ನೀರು ಹರಿದು ಹೋಗುವಂತೆ ಮಾಡಿ ಆರೋಗ್ಯಕರವಾದ ಮನೆಗಳನ್ನು ಕಟ್ಟಿ, ಉಸುಬಿನ ಬೈಲಿನಲ್ಲಿ ನದಿಗಳಿಂದ ಕಾಲುವೆ ತಂದು, ಒಕ್ಕಲತನದಲ್ಲಿ ಸುಧಾರಿಸಿದ ಆಯುಧಗಳನ್ನೂ ಯಂತ್ರಗಳನ್ನೂ ಉಪಯೋಗಿಸಿ, ಹೊಸ ಪ್ರದೇಶಗಳಿಗೆ ಪ್ರಾಣಿಗಳನ್ನೂ ವನಸ್ಪತಿಗಳನ್ನೂ ತಂದು ಸುಧಾರಿಸಿದ ಜನರು ಹೇಗೆ ನಾಗರಿಕತೆಯನ್ನು ಎಲ್ಲ ಕಡೆಗೂ ಹಬ್ಬಿಸಿದರೆಂಬದು ಅಭ್ಯಾಸಕ್ಕೆ ತಕ್ಕ ವಿಷಯವು.

ಭೂಗೋಲದ ಈ ಭಾಗಕ್ಕೂ ಇತಿಹಾಸಕ್ಕೂ ನಿಕಟ ಸಂಬಧವಿರುವದರಿಂದ ಇನ್ನೆರಡೂ ವಿಷಯಗಳನ್ನು ಕೂಡಿ ಸಾಗಿಸುವದೇ ಯುಕ್ತವು. ಪ್ರಾಕೃತಿಕ ಸ್ವರೂಪ ಮಳೆ, ಬೆಳೆ, ಆರ್ಥಿಕ ಸುಧಾರಣೆ ಇವುಗಳ ವಿಷಯಕವಾದ ವಿವರಣೆಯು ಭೂಗೋಲದಲ್ಲಿರುವದು. ಮಾನವ ಸಂಸ್ಥೆ, ರಾಜಕೀಯ ಪ್ರಗತಿ ಇವುಗಳಿಗೆ ಸಂಬಂಧಿಸಿದ ವಿಷಯವು ಇತಿಹಾಸದಲ್ಲಿ ಬರುವದು.

---

## ೧೬. ಇತಿಹಾಸ.

**೧. ಮಹತ್ವ ಮತ್ತು ಉದ್ದೇಶ :**—ಪ್ರಾಥಮಿಕ ಶಾಲೆಗಳಲ್ಲಿ ನಾಲ್ಕನೇ ಇಯತ್ತೆಗೆ ಇತಿಹಾಸವನ್ನು ಪ್ರಾರಂಭಿಸುವರು. ಬಾಲಕರಿಗೆ ಇದಕ್ಕೂ ಮೊದಲು ರಾಮಾಯಣ, ಮಹಾಭಾರತ ಮತ್ತು ಪುರಾಣಗಳೊಳಗಿನ ಮನೋಹರವಾದ ಕಥೆಗಳನ್ನು ಹೇಳಿದರೆ ಅವರಲ್ಲಿ ಉದಾತ್ತವಾದ ಕಲ್ಪನೆಗಳೂ ಪ್ರಬಲವಾದ ಸದಿಚ್ಛೆಗಳೂ ಅಂಕುರಿಸಹತ್ತುವವು. ಆದರೆ ಆರಂಭದ ಇಯತ್ತೆಗಳಲ್ಲಿ ನಿಯಮಿತವಾಗಿ ಅಂಥ ಕಥೆಗಳನ್ನು ಹೇಳದೆ ಇರುವದರಿಂದ ಬಾಲಕರ ಮನಸ್ಸಿಗೆ ಯಾವ ಪ್ರಕಾರದ ಸಂಸ್ಕಾರವೂ ಉಂಟಾಗಿರುವದಿಲ್ಲ ಉತ್ತಮ ತರದ ಕಥಾ ನಿರೂಪಣವು ಇತಿಹಾಸ ಶಿಕ್ಷಣದ ಆರಂಭದ ಮೆಟ್ಟು ಎಂದು ಹೇಳಬಹುದು. ಐತಿಹಾಸಿಕ ಕಾಲಕ್ಕಿಂತ ಪೂರ್ವದಲ್ಲಿದ್ದ ಮಹಾಜನರ ಆಯುಷ್ಯವನ್ನೂ ಮಹತ್ಕೃತ್ಯಗಳನ್ನೂ ತಿಳಿದುಕೊಳ್ಳುವದರಿಂದ ಒಂದು ಪ್ರಕಾರದ ಸ್ಫೂರ್ತಿಯುಂಟಾಗುವದು.

### ಇತಿಹಾಸ ಶಿಕ್ಷಣದ ಮುಖ್ಯ ಉದ್ದೇಶಗಳು.

೧. ಜನಾಂಗದ ಸ್ಥಿತಿಯು ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಹೇಗೆ ಹೇಗೆ ಇತ್ತು, ಜನರಲ್ಲಿದ್ದ ಸದ್ಗುಣಗಳು ಯಾವವು, ಅವರಲ್ಲಿದ್ದ ಕುಂದುಕೊರತೆಗಳು ಯಾ

ವವು, ಅವರಲ್ಲಿ ನೆಲೆಗೊಂಡ ಅನೇಕ ಪದ್ಧತಿಗಳು ಯಾವವು, ಅವರ ಸುಧಾರಣೆ, ನಡೆ ನುಡಿ, ಶಿಕ್ಷಣ, ಕಲೆ, ಉದ್ಯೋಗ, ಇವು ಹೇಗಿದ್ದವು, ಹೇಗೆ ಹೇಗೆ ಪ್ರಗತಿಯನ್ನು ಹೊಂದುತ್ತ ನಡೆದವು ಎಂಬದನ್ನು ಅರಿಯುವದು ಇತಿಹಾಸದ ಪ್ರಾಥಮಿಕ ಉದ್ದೇಶವು.

೨. ಐತಿಹಾಸಿಕ ಪುರುಷರ ಚರಿತ್ರಗಳನ್ನೂ ಅವರ ಮಹತ್ಕೃತ್ಯಗಳನ್ನೂ ಮನನ ಮಾಡುವದರಿಂದ ಅವರಂತೆ ತಾವಾದರೂ ಉತ್ತಮ ತರದ ಆಚರಣೆಯನ್ನಿಟ್ಟು ಕೊಂಡು ಜೀವಿತವು ಉದಾತ್ತವಾಗುವಂತೆ ಪ್ರಯತ್ನ ಮಾಡಬೇಕೆಂಬ ಹವಣಿಕೆಯು ಬಾಲಕರಲ್ಲಿ ಹುಟ್ಟುವದು. ಉಪದೇಶದಿಂದ ಆಗದಂಥ ಸುಧಾರಣೆಯು ಇಂಥ ಉದಾಹರಣೆಗಳಿಂದ ಆಗುವದು.

೩. ಪ್ರತಿ ಒಬ್ಬ ನಾಗರಿಕನಿಗೆ ಅವಶ್ಯಕವಾದ ದೇಶಾಭಿಮಾನವೆಂಬ ಗುಣವನ್ನು ಹುಟ್ಟಿಸುವದು. ಅಂದರೆ ತಮ್ಮ ದೇಶದ ದೆಶೆಯಿಂದ ಅಭಿಮಾನವನ್ನು ತಾಳುವಂತೆ ಮಾಡುವದು, ( ಪ್ರತಿಯೊಬ್ಬ ನಾಗರಿಕನಿಗೆ ) ಅವಶ್ಯವಾದದ್ದು. ಹಿಂದೆ ಆಗಿ ಹೋದ ಜನರು ತಮ್ಮ ದೇಶವನ್ನು ರಕ್ಷಿಸಲಿಕ್ಕೆ ಹೇಗೆ ಹೆಣಗಿದರೆಂಬದನ್ನೂ ಅನೇಕ ಹಕ್ಕುಗಳನ್ನು ಸಂಪಾದಿಸಲಿಕ್ಕೆ ಹೇಗೆ ಮುತ್ಸದ್ದಿತನವನ್ನು ಉಪಯೋಗಿಸಿದರೆಂಬದನ್ನೂ ಓದುವದರಿಂದ ಬಾಲಕರಲ್ಲಿ ಉತ್ಸಾಹವುಂಟಾಗಿ ದೇಶಾಭಿಮಾನದ ಭಾವನೆಯು ಅಂಕುರಿಸ ಹತ್ತುವದು.

೪. ಇತಿಹಾಸವನ್ನು ಓದುವಾಗ ಅನೇಕ ಸಂಗತಿಗಳ ಕಾರ್ಯ-ಕಾರಣ-ಭಾವವನ್ನು ಅರಿತುಕೊಳ್ಳುವದು ಅವಶ್ಯವಾದದರಿಂದ ಬಾಲಕರ ನಿರ್ಣಯ ಶಕ್ತಿಯು ಬಲಪಡುವದು.

೫. ತುಲನಾತ್ಮಕ ದೃಷ್ಟಿಯಿಂದ ಬೇರೆ ಬೇರೆ ರಾಷ್ಟ್ರಗಳ ಸುಧಾರಣೆಯು ಉಂಟಾಗಲಿಕ್ಕೆ ಯಾವ ಯಾವ ಸಂಗತಿಗಳು ಸಂಬಂಧಿಸಿದವೆಂಬದನ್ನು ಅರಿತುಕೊಳ್ಳುವದರಿಂದ ಮುಂದೆ ಮಾಡತಕ್ಕ ಸುಧಾರಣೆಗಳನ್ನು ಹೇಗೆ ಸಾಧಿಸಬೇಕೆಂಬದನ್ನು ತಿಳಿದುಕೊಳ್ಳಬಹುದು.

೬. ಮಹತ್ವದ ಸಂಗತಿಗಳನ್ನೂ ತಾರೀಖುಗಳನ್ನೂ ನೆನಪಿಡುವದರಿಂದ ಸ್ಮರಣಶಕ್ತಿಯು ಬೆಳೆಯುವದು.

೨. **ಕಲಿಸುವ ಪದ್ಧತಿ:**—ಇತಿಹಾಸ ವಿಷಯವನ್ನು ಕಲಿಸುವಾಗ ನೆನಪಿಡತಕ್ಕ ಸೂಚನೆಗಳನ್ನು ಕೆಳಗೆ ಕೊಟ್ಟಿದ್ದೇವೆ.

೧. ಆರಂಭದಲ್ಲಿ ಐತಿಹಾಸಿಕ ಪಾಠಗಳನ್ನು ಕಥೆಗಳನ್ನು ಹೇಳಿದಂತೆ ಸಾಗಿಸಬೇಕು. ಶಿಕ್ಷಕನು ಬಹು ಶ್ರುತನಾಗಿದ್ದು ಅವನಲ್ಲಿ ವರ್ಣನಾ ಶಕ್ತಿಯೂ ಬೇಸರ ಬರದಂತೆ ಕಥೆ ಹೇಳುವ ಚಾತುರ್ಯವೂ ಇದ್ದರೆ ಅವನು ಇತಿಹಾಸದ ಪಾಠವನ್ನು ಚೆನ್ನಾಗಿ ಸಾಗಿಸಬಲ್ಲನು. ಸ್ವದೇಶದ ಇತಿಹಾಸವನ್ನು ಅಭ್ಯಾಸಿಸುವಾಗ ಅದಕ್ಕೆ ಸಂಬಂಧಿಸಿದ ಬೇರೆ ದೇಶಗಳ ಇತಿಹಾಸವನ್ನು ಅರಿತುಕೊಳ್ಳುವದು ಅವಶ್ಯವದೆ. ಮೇಲಿನ ವರ್ಗಗಳಲ್ಲಿ ಬರೇ ಯುದ್ಧ, ಕೊಲೆ, ಸುಲಿಗೆಗಳ ವೃತ್ತಾಂತವನ್ನು ಕಲಿಯುವದರಿಂದ ಇತಿಹಾಸ ಶಿಕ್ಷಣದಿಂದ ಆಗತಕ್ಕ ಲಾಭವು ಆದಂತಾಗುವದಿಲ್ಲ ಅವರೊಂದಿಗೆ ಜನಾಂಗದ ಪ್ರಗತಿಯು ಅಥವಾ ಅವನತಿಯು ಹೇಗೆ ಆಯಿತೆಂಬವನ್ನೂ, ಸಮಾಜ ವ್ಯವಸ್ಥೆ, ಧಾರ್ಮಿಕ ಆಚರಣೆ ಇವು ಹೇಗಿದ್ದವೆಂಬವನ್ನೂ ತಿಳಿದುಕೊಳ್ಳುವದು ಇತಿಹಾಸದ ಮುಖ್ಯ ಅಂಗವು. ಮುಂದೆ ವಿದ್ಯಾರ್ಥಿಗಳು ತುಲನಾತ್ಮಕದೃಷ್ಟಿಯಿಂದ ಬೇರೆಬೇರೆ ಜನಾಂಗಗಳಲ್ಲಿದ್ದ ಸಂಸ್ಕೃತಿಯು ಯಾವ ಪ್ರಕಾರದ್ದು ಎಂಬದನ್ನು ಗೊತ್ತುಮಾಡಿಕೊಳ್ಳತಕ್ಕದ್ದು. ಈ ದೃಷ್ಟಿಯಿಂದ ವಿಚಾರಮಾಡಿದರೆ ಆರ್ಯ ಸಂಸ್ಕೃತಿಗಿಂತ ಪೂರ್ವದಲ್ಲಿ ದ್ರಾವಿಡ ಸಂಸ್ಕೃತಿಯೂ ಅದಕ್ಕೂ ಮೊದಲು ನಾಮನಿರ್ದೇಶವಿಲ್ಲದ ಇನ್ನೊಂದು (ಅನಾಮಧೇಯವಾದ) ಸಂಸ್ಕೃತಿಯೂ ಇದ್ದವೆಂಬದು ಪ್ರಾಕ್ತನ ವಿಮರ್ಶಕಾರರ ಅಭಿಪ್ರಾಯವಾಗಿದೆ. ಆರಂಭದ ಅವಧಿಯಲ್ಲಿ ಬಾಲಕರಿಗೆ ಚನ್ನಾಗಿ ಕಲ್ಪನೆ ಮಾಡಲಿಕ್ಕೆ ಬರುವಂಥ ಪ್ರಸಿದ್ಧಪುರುಷರ ಚರಿತ್ರಗಳನ್ನೂ ಯುದ್ಧಗಳ ವರ್ಣನೆಯನ್ನೂ ಮನೋರಂಜನವಾಗುವಂತೆ ಹೇಳಬೇಕು. " ಗೊತ್ತಿದ್ದ ಸಂಗತಿಯಿಂದ ಗೊತ್ತಿಲ್ಲದ ಸಂಗತಿಗೆ ಸಾಗು " ಎಂಬ ತತ್ವವು ಈ ವಿಷಯದಲ್ಲಿ ಚನ್ನಾಗಿ ಉಪಯೋಗಕ್ಕೆ ಬರುವದು. ಉದಾ :— ಕರ್ನಾಟಕದ ಪ್ರಾಚೀನ ಕಾಲದ ಇತಿಹಾಸವನ್ನು ಆರಂಭಮಾಡುವದಕ್ಕಿಂತ ಈಗಿನ ಕಾಲದ ಸಂಗತಿಗಳನ್ನು ವರ್ಣಿಸಿ, ಇಂಗ್ಲಿಷರ ಆಳಿಕೆ, ಮಹಾರಾಷ್ಟ್ರರ ಆಳಿಕೆ, ಮುಸಲ್ಮಾನರ ( ವಿಜಾಪೂರದವರ ) ಆಳಿಕೆ, ವಿಜಯನಗರದ ಸಾಮ್ರಾಜ್ಯ, ಕದಂಬ, ರಾಷ್ಟ್ರಕೂಟ, ಚೋಳ, ಚೇರ, ಪಾಂಡ್ಯ, ಮೊದಲಾದ ವಂಶಗಳನ್ನು ಕ್ರಮದಿಂದ ಕಲಿಸಿದರೆ ಸಂಗತಿಗಳನ್ನು ನೆನಪಿಡಲಿಕ್ಕೂ ಅವುಗಳನ್ನು ಒಂದಕ್ಕೊಂದು ತುಲನೆ ಮಾಡಲಿಕ್ಕೂ ಅನುಕೂಲವಾಗುವದು. ಒಮ್ಮೆಲೆ ಕದಂಬ, ರಾಷ್ಟ್ರಕೂಟ ವಂಶಗಳ ವರ್ಣನೆಯನ್ನು ಹೇಳುವದರಿಂದ ಬಾಲಕರು ದಿಗಿಲುಗೊಳ್ಳುವರು. ಅನುಕೂಲವಿದ್ದಲ್ಲಿ ಕಾರ್ಯಕಾರಣ ಭಾವವನ್ನು ತೋರಿಸುವ ಸಂಗತಿಗಳ ಸ್ಪಷ್ಟೀಕರಣವನ್ನು ಮಾಡುವದರಿಂದ ಸುಸಂಗತವಾದ ಮತ್ತು ಸುಸ್ಪಷ್ಟವಾದ (ಬೋಧವಾದ) ಇತಿಹಾಸಜ್ಞಾನವು ಉಂಟಾಗುವದು. ಭೂಗೋಲಕ್ಕೂ ಇತಿಹಾಸಕ್ಕೂ ಇರುವ ಸಂಬಂಧವನ್ನು ಲಕ್ಷ್ಯದಲ್ಲಿಡಬೇಕು. ಮೇಲಿನ ವರ್ಗಗಳಲ್ಲಿ ದೇಶದ ಇತಿಹಾಸದಿಂದ ಅಲ್ಲಿಯ ಭಾಷೆ ವಾಙ್ಮಯ ಇವುಗಳ ಮೇಲೆ ಯಾವ ಪರಿಣಾಮಗಳಾದವೆಂಬದನ್ನು ತಿಳಿದುಕೊಳ್ಳುವದು ಅವಶ್ಯವದೆ. ಭೂಗೋಲದ ಎಷ್ಟೋ ಸಂಗತಿಗಳು ಇತಿಹಾಸದಿಂದ ಗೊತ್ತಾಗುವವು. ಉದಾ— ೨೦೦೦ ವರ್ಷಗಳ ಹಿಂದೆ ಬಹು ಜನ ಸಂಖ್ಯೆಯುಳ್ಳ ಸಿಂಧ

ಪ್ರಾಂತದಲ್ಲಿ ಈಗ ಜನಸಂಖ್ಯೆಯು ಕಡಿಮೆಯಾಗಲಿಕ್ಕೆ ಭೂಕಂಪವೂ ನದಿಯ ಪ್ರವಾಹಗಳಲ್ಲಿಯೂ, ಭೂಮಿಯು ಪಾತಳಿಯಲ್ಲಿಯೂ, ಹವಾಮಾನದಲ್ಲಿಯೂ ಆದ ಹೆಚ್ಚು ಕಡಿಮೆಗಳೂ ಭೂಮಿಯ ಸವಕಳಿಯೂ ಕಾರಣವಾಗಿರುವದಲ್ಲದೆ ಆ ಪ್ರಾಂತಕ್ಕೆ ಸಫಲತೆಯನ್ನುಂಟು ಮಾಡುತ್ತಿದ್ದ (ಹಕ್ರಾ ಅಥವಾ ವಾಹಿಂದಾ ಎಂಬ ನದಿಯು ಅದೃಶ್ಯವಾದದ್ದೂ ಕಾರಣಗಳಾಗಿವೆಂಬವು ಇತಿಹಾಸದಿಂದ ಗೊತ್ತಾಗುತ್ತದೆ.

೨. **ಸಾಧನಗಳು:-(ಅ) ನಕಾಶ:**-ಇತಿಹಾಸಪಾಠವನ್ನು ನಕಾಶಗಳಿಲ್ಲದೆ ಕಲಿಸುವದು ಅಪದ್ಧವಾದದ್ದು. ದೇಶದ ಪ್ರಾಕೃತಿಕ ಸ್ವರೂಪಕ್ಕೂ ಇತಿಹಾಸಕ್ಕೂ ನಿಕಟಸಂಬಂಧವಿರುವದರಿಂದ ನಕಾಶ ಭೂಗೋಲಗಳ ಉಪಯೋಗವನ್ನು ಮೇಲಿಂದಮೇಲೆ ಮಾಡಬೇಕಾಗುವದು. ಹಿಂದುಸ್ತಾನದ ಇತಿಹಾಸದಲ್ಲಿ ವಾಯುವ್ಯ ಮೂಲೆಯಿಂದಲೇ ಪರಚಕ್ರಗಳು ಬರಲಿಕ್ಕೆ ಕಾರಣವೇನೆಂಬದನ್ನೂ ನಕಾಶ ಭೂಗೋಲಗಳ ಸಹಾಯವಿಲ್ಲದೆ ಕಲಿಸುವ ಬಗೆ ಹೇಗೆ? ಈ ಮೂಲೆಯೊಂದನ್ನು ಬಿಟ್ಟು ಉಳಿದ ಎಲ್ಲ ದಿಕ್ಕುಗಳಲ್ಲಿ ಸ್ವಾಭಾವಿಕವಾದ ಮೇರೆಗಳಿದ್ದದರಿಂದ ಪರಚಕ್ರಗಳಿಗೆ ಉಳಿದ ದಿಕ್ಕುಗಳಿಂದ ಬರುವದು ಆ ಕಾಲದಲ್ಲಿ ಅಸಾಧ್ಯವಾಗಿತ್ತು. ಆದರೆ ನೌಕಾಯಾನದಲ್ಲಿ ಪ್ರಾವೀಣ್ಯವನ್ನು ಪಡೆದ ಪಾಶ್ಚಾತ್ಯ ರಾಷ್ಟ್ರಗಳು ಮಾತ್ರ ಪಶ್ಚಿಮ ದಂಡೆಗೆ ತಮ್ಮ ಹಡಗುಗಳನ್ನು ತಂದು ಗೋವೆ, ಸುರತಗಳಲ್ಲಿ ಅಂಗಡಿಗಳನ್ನು ಸ್ಥಾಪಿಸಿದವು. ಇತಿಹಾಸ ಪಾಠದಲ್ಲಿ ಉಲ್ಲೇಖಿಸಲ್ಪಟ್ಟ ಎಲ್ಲ ಸ್ಥಳಗಳನ್ನೂ ಪ್ರಾಂತಗಳನ್ನೂ ನಕಾಶದಲ್ಲಿ ತೋರಿಸಿ ವರ್ಣನೆ ಮಾಡುವದರಿಂದ ಆಯಾ ಸಂಗತಿಗಳು ನಿಶ್ಚಿತವಾಗಿ ಸ್ಮರಣೆಯಲ್ಲಿ ಉಳಿಯುವವು. ಇಂಗ್ಲಿಷ ಜನರ ಸಾಹಸವೂ ಇಂಗ್ಲಂಡ ದೇಶದ ಸುರಕ್ಷಿತತೆಯೂ ಇಂಗ್ಲಂಡವು ನಡುಗಡ್ಡೆಯಿರುವದರಿಂದ ಉಂಟಾಗಿದೆಂಬದು ಭೂಗೋಲದ ಸಹಾಯವಿಲ್ಲದೆ ಹೇಗೆ ಗೊತ್ತಾಗುವದು? ಶಿವಾಜಿಯು ಸೈನಿಕರಾದ ಮಾವಳೆ ಜನರಲ್ಲಿ ಕಷ್ಟ ಸಹಿಷ್ಣುತೆಯೂ ಧೈರ್ಯವೂ ಉದ್ಯೋಗ ಪ್ರಿಯತೆಯೂ ಉಂಟಾಗಲಿಕ್ಕೆ ಅವರಿದ್ದ ಪ್ರದೇಶದ ಪ್ರಾಕೃತಿ ಸ್ವರೂಪವು ಕಾರಣವಲ್ಲವೋ?

**(ಆ) ಸಾರಾಂಶ:**—ಪಾಠದಲ್ಲಿ ವಿವೇಚಿಸತಕ್ಕ ಭಾಗದಲ್ಲಿದ್ದ ಮಹತ್ವದ ಸಂಗತಿಗಳ ಸಾರಾಂಶವನ್ನು ಕರಿ ಹಲಿಗೆಯ ಮೇಲೆ ಬರೆದು ಪಾಠವನ್ನು ಸಾಗಿಸುವದರಿಂದ ಬಾಲಕರಿಗೆ ಕಲಿಯತಕ್ಕ ಭಾಗದ ವಿಷಯಕ್ಕೆ ಕುತೂಹಲವುಂಟಾಗಿ ಅವರು ಪಾಠವನ್ನು ಲಕ್ಷ್ಯಪೂರ್ವಕವಾಗಿ ಕೇಳುವರು. ಇಲ್ಲದಿದ್ದರೆ ಶಿಕ್ಷಕನು ಕೊಟ್ಟ ಪಾಠವು ವ್ಯಾಖ್ಯಾನದಂತಾಗಿ ಬಾಲಕರಿಗೆ ಸ್ಮರಣದಲ್ಲಿ ಇಟ್ಟುಕೊಳ್ಳಲಿಕ್ಕೆ ತೊಂದರೆಯಾಗುವದು. ಪಾಠವು ಮುಗಿದನಂತರ ಕಲಿತ ಭಾಗವನ್ನು ಸಾರಾಂಶರೂಪದಿಂದ ನೆನಪಿಡಲಿಕ್ಕೂ ಬಳಿಕ ಪುನರಾವರ್ತನ ಮಾಡಲಿಕ್ಕೂ ಅನುಕೂಲವಾಗುವದು.

**(ಇ) ಚಿತ್ರ:**—ಪ್ರಸಿದ್ಧ ಜನರ ಚಿತ್ರಗಳನ್ನೂ ಯುದ್ಧ, ಸಭಾಗೃಹ, ಅರಮನೆ, ಕೋಟೆ ಇವುಗಳ ಚಿತ್ರಗಳನ್ನೂ ಶಾಲೆಯಲ್ಲಿ ಸಂಗ್ರಹ ಮಾಡಿ ಪಾಠಕ್ಕೆ ಅವಶ್ಯ

ವಾದ ಚಿತ್ರಗಳನ್ನು ತೋರಿಸಿ ವರ್ಣನೆ ಮಾಡುವದರಿಂದ ಕಲ್ಪನೆಗಳು ನಿಶ್ಚಿತವಾಗು ವವು. ಈ ವಿಷಯದಲ್ಲಿ ಮ್ಯಾಜಿಕ್ ಲ್ಯಾಂಟರ್ನದ ಉಪಯೋಗವು ಚನ್ನಾಗಿ ಆಗು ವಂತಿದೆ. ಯುದ್ಧಗಳಲ್ಲಿ ಬೇರೆ, ಬೇರೆ ಪಕ್ಷದವರ ಸೈನ್ಯವ್ಯೂಹವನ್ನು ತೋರಿಸುವ ಮಾಡೆಲ್ಲುಗಳನ್ನು ಮಣ್ಣಿನಿಂದ ಮಾಡಬಹುದು. ಇದರಂತೆಯೇ ಹಳೇ ಆಯುಧ, ನಾಣ್ಯ ಚಿಲಕತ್ತು ಮುಂತಾದವುಗಳ ಸಂಗ್ರಹವಿದ್ದರೆ ಹಿಂದಿನ ಕಾಲದ ಇತಿಹಾಸವು ಮನೋವೇಧಕವಾಗುವದು (ನೆನಪಿನಲ್ಲಿ ಉಳಿಯುವದು.)

## (ಈ) ಐತಿಹಾಸಿಕ ಪುಸ್ತಕಗಳೂ, ಲಾವಣಿಗಳೂ,

**ಪುಸ್ತಕಗಳು:**——ಕನ್ನಡ ಭಾಷೆಯಲ್ಲಿ ಐತಿಹಾಸಿಕ ಪುಸ್ತಕಗಳು ತೀರ ಕಡಿಮೆ ಇತ್ತಿತ್ತಲಾಗಿ ಕೆಲವು ಚರಿತ್ರ ಪುಸ್ತಕಗಳು ಪ್ರಸಿದ್ಧವಾಗಹತ್ತಿವೆ. ಐತಿಹಾಸಿಕ ಪುಸ್ತಕ ಗಳು ಕಥೆಗಳಂತೆ ಮನೋಹರವಾಗಿದ್ದರೆ ಬಾಲಕರು ಅವುಗಳನ್ನು ಓದುವರು- ಅವುಗ ಳಲ್ಲಿ ಅಲ್ಲಲ್ಲಿ ಚಿತ್ರಗಳಿದ್ದರೆ ಆಯಾ ಚರಿತ್ರನಾಯಕರ ವಿಷಯಕ್ಕೆ ಕೆಲವು ನಿಶ್ಚಿತ ವಾದ ಕಲ್ಪನೆಗಳನ್ನು ಮಾಡಲಿಕ್ಕೆ ಅನುಕೂಲವಾಗುವದು. ಈಗಿದ್ದ ಹಿಂದುಸ್ಥಾನದ ಇತಿಹಾಸ ಪುಸ್ತಕಗಳು ಒಂದು ವಿವಕ್ಷಿತ ದೃಷ್ಟಿಯಿಂದ ಬರೆಯಲ್ಪಟ್ಟದ್ದರಿಂದ ಬಾಲ ಕರಲ್ಲಿ ತಮ್ಮ ಪೂರ್ವಜರ ಅಥವಾ ತಮ್ಮ ದೇಶದ ಬಗ್ಗೆ ತಪ್ಪು ಕಲ್ಪನೆಗಳು ಹುಟ್ಟುವ ಸಂಭವವು ಹೆಚ್ಚಿರುವದು. ಆದದರಿಂದ ಇಂಥ ಪುಸ್ತಕಗಳನ್ನು ಬಾಲಕರ ಕೈಯಲ್ಲಿ ಕೊಡುವದು ಇಷ್ಟವಾಗಲಾರದು. ಯಾಕೆಂದರೆ ಅವುಗಳಲ್ಲಿ ಅನೇಕ ಅತಿಶ ಯೋಕ್ತಿಗಳೂ ಅನವಶ್ಯಕವಾದ ವಿಚಾರಗಳೂ ತುಂಬಿರುವವು. ಆದರೆ ಅನಿರ್ವಾಹ ಪಕ್ಷಕ್ಕೆ ಈ ಪುಸ್ತಗಳನ್ನು ಉಪಯೋಗಿಸುವಾಗ ಮೇಲಿಂದ ಮೇಲೆ ಬಾಲಕರನ್ನು ಎಚ್ಚರಿಸುವದು ಅವಶ್ಯವದೆ. ಉದಾ:—ಮುಹಮ್ಮದ ತಗಲಕನು ಚೀನದ ಮೇಲೆ ದೌಡುಮಾಡಲಿಕ್ಕೆ ದಂಡು ಕಳಿಸಿದ್ದರಿಂದಲೂ ಬೆಳ್ಳಿ ಬಂಗಾರದ ನಾಣ್ಯಗಳ ಬದಲು ತೊಗಲಿನ ನಾಣ್ಯಗಳನ್ನು ಮಾಡಿದ್ದರಿಂದಲೂ ಅವನಿಗೆ ಹುಚ್ಚು ಮಹಮ್ಮದನೆಂಬ ಅಭಿಧಾನವನ್ನು ಈ ಇತಿಹಾಸ ಕರ್ತರು ಕೊಟ್ಟಿದ್ದಾರೆ. ಆದರೆ ಮೊನ್ನಿನ ಮಹಾ ಯುದ್ಧದಲ್ಲಿ ಗ್ಯಾಲಿಪೋಲಿ ಎಂಬ ಭಾಗದಲ್ಲಿ ಅಸಂಖ್ಯ ಸೈನ್ಯದ ಆಹುತಿಯನ್ನು ಕೊಡುವ ಪ್ರಸಂಗವು ಒದಗಿತಷ್ಟೇ ? ಈಗ ನಾವು ಉಪಯೋಗಿಸುವ ನೋಟು ಗಳು ಕಾಗದಗವಲ್ಲವೋ ? ಶಿವಾಜಿಗೆ ದರೋಡೆಖೋರನೆಂಬ ಅಪವಾದವು ಮೊನ್ನೆ ನವರೆಗೆ ಕೊಡಲ್ಪಟ್ಟಿತ್ತು. ಆದರೆ ಮಹಾರಾಷ್ಟ್ರ ಇತಿಹಾಸದ ಬಗ್ಗೆ ಅನೇಕ ಆಧಾ ರಯುಕ್ತವಾದ ಗ್ರಂಥಗಳನ್ನು ನ್ಯಾ. ರಾನಡೆ ಮೊದಲಾದ ವಿದ್ವಾಂಸರು ಬರೆದದ ರಿಂದ ಈಗ ಅವನು ರಾಷ್ಟ್ರವೀರನೆಂದು ಬೋಧಿಸಲ್ಪಡಹತ್ತಿದ್ದಾನೆ 'ಬ್ಲಾಕ ಹೋಲ' ಎಂಬ ಸಂಗತಿಯು ಅಭುಕ್ತ ಸುಳ್ಳೆಂದು ಕೆಲವು ಪ್ರಸಿದ್ಧ ಇತಿಹಾಸ ಜ್ಞರ ಮತವು. ಸರಿಯಾದ ದೃಷ್ಟಿಯಿಂದ ಬರೆದ ಹಿಂದುಸ್ಥಾನದ ಇತಿಹಾಸವು ಪ್ರಸಿದ್ಧವಾಗುವವರೆಗೆ ಇದ್ದ ಗ್ರಂಥಗಳನ್ನು ಬಹು ಎಚ್ಚರದಿಂದ ಉಪಯೋಗಿಸಬೇಕು

ಅವುಗಳಲ್ಲಿ ಬರೆದ ಎಲ್ಲ ಸಂಗತಿಗಳೂ, ಊಹೆಗಳೂ ನಿಜವೆಂದು ತಿಳಿಯಲಾಗದು.

**ಲಾವಣಿಗಳು:** -ಕರ್ನಾಟಕ ಇತಿಹಾಸವು ಹೆಚ್ಚು ಪ್ರಾಚೀನಕಾಲದ ಇತಿಹಾಸವು. ಅದರ ವಿಷಯಕ್ಕೆ ಗ್ರಂಥಗಳು ೧-೨ ಮಾತ್ರ ಇರುವವು. ಆದದರಿಂದ ಕರ್ನಾಟಕದಲ್ಲಿ ಆಗಿ ಹೋದ ಪ್ರಸಿದ್ಧ ಜನರ ಲಾವಣಿಗಳನ್ನು ಪುಸ್ತಕ ರೂಪದಿಂದ ಪ್ರಸಿದ್ಧ ಪಡಿಸುವದು ಅವಶ್ಯವದೆ- ಸಂಗೊಳ್ಳಿ ರಾಯಣ್ಣ, ಕಿತ್ತೂರ ಚನ್ನವ್ವ, ನರಗುಂದ ಬಾಬಾಸಾಹೇಬ ಇವರ ಲಾವಣಿಗಳು*ಜನರಿಗೆ ಗೊತ್ತಿರಬಹುದು. ಅವುಗಳನ್ನು ಶಿಕ್ಷಕರು ಬರೆದುಕೊಂಡು ಉಪಯೋಗಿಸುತ್ತಿರಬೇಕು. ಅದರಂತೆ ಸಮೀಪದಲ್ಲಿದ್ದ ಶಿಲಾಶಾಸನಗಳನ್ನೂ ತಾಮ್ರ ಪಟಗಳನ್ನೂ ತೋರಿಸಿ ಇತಿಹಾಸ ಪಾಠವನ್ನು ಸಾಗಿಸಿದರೆ ಪಾಠಗಳು ಮನೋರಂಜಕವಾಗುವವು.

**(೨) ತಾರೀಖು-ಇಸವಿಗಳು :**—ಬಾಲಕರ ಸ್ಮರಣ ಶಕ್ತಿಯು ಚುರುಕಾಗಿರುವದರಿಂದ ಅವರು ಮಹತ್ವದ ಸಂಗತಿಗಳ ತಾರೀಖು-ಇಸವಿಗಳನ್ನು ನೆನಪಿನಲ್ಲಿಡುವರು. ಆದರೆ ತಾರೀಖು-ಇಸವಿಗಳು ಇತಿಹಾಸದ ಅಭ್ಯಾಸದಲ್ಲಿ ಅಷ್ಟು ಮಹತ್ವದ ಭಾಗವಲ್ಲವೆಂಬದನ್ನು ಶಿಕ್ಷಕರು ನೆನಪಿನಲ್ಲಿಟ್ಟುಕೊಳ್ಳತಕ್ಕದ್ದು. ಮತ್ತು ಆಯಾ ಸಂಗತಿಗಳ ವಿಷಯಕ್ಕೆ ಪೂರ್ಣ ವಿವೇಚನವಾದ ಬಳಿಕ ಅವುಗಳ ತಾರೀಖುಗಳನ್ನು ನೆನಪಿನಲ್ಲಿಡಬೇಕೇ ಹೊರತು ಮೊದಲೇ ಆ ಇಸವಿಗಳನ್ನು ಪಾಠಮಾಡಿಸಬಾರದು. ಕೆಳಗಿನ ಇಯತ್ತೆಯಲ್ಲಿ ೮-೧೦ ಮಹತ್ವದ ಇಸವಿಗಳನ್ನು ನೆನಪಿಟ್ಟರೆ ಸಾಕು. ಮುಂದೆ ದೇಶದ ಇತಿಹಾಸವನ್ನು ಸೂಕ್ಷ್ಮವಾಗಿ ಕಲಿತಂತೆ ಹೆಚ್ಚೆಚ್ಚು ಇಸವಿಗಳನ್ನು ಗೊತ್ತುಮಾಡಿಕೊಳ್ಳಬಹುದು. ಆದರೆ ಒಂದು ಪಾಠದಲ್ಲಿ ಒಂದೆರಡು ಇಸವಿಗಳನ್ನು ಹೇಳಿದರೆ ಸಾಕು. ಇನ್ನು ಸಂಗತಿಗಳನ್ನು ಕ್ರಮಪಡಿಸಿ ಅವುಗಳ ಇಸವಿಗಳನ್ನು ಗೊತ್ತುಮಾಡಿಕೊಳ್ಳಬಹುದು. ಉದಾ :—

ಪಾನಿಪತದ ೧ನೇ ಯುದ್ಧ
,, ೨ನೇ ಯುದ್ಧ
,, ೩ನೇ ಯುದ್ಧ

ಒಂದೊಂದು ವಂಶದ ಅರಸರ ಅಥವಾ ಬಾದಶಹರ ಪಟ್ಟಾಭಿಷೇಕ ಅಥವಾ ಮರಣದ ಇಸವಿಗಳನ್ನು ನೆನಪಿಡಬಹುದು.

ಹೇಗಂದರೆ-ಬಾಬರ, ಹುಮಾಯೂನ, ಅಕಬರ, ಜಹಾಂಗೀರ, ಶಹಾಜಹಾನ, ಅವರಂಗಜೇಬ ಈ ಬಾದಶಹರ ಆಳಿಕೆಯ ಪ್ರಾರಂಭ, ಸಮಾಪ್ತಿ, ಅವರ ಆಳಿಕೆಯಲ್ಲಿ ಆಗಿ ಹೋದ ಯುದ್ಧ, ಸುಧಾರಣೆ, ಅವರು ಕಟ್ಟಿಸಿದ ಸ್ಮಾರಕ, ಕಟ್ಟಡ, (ಮಂದಿರ) ಇವುಗಳ ಇಸವಿಗಳನ್ನು ಗೊತ್ತುಮಾಡಿಕೊಳ್ಳಬಹುದು.

---

* ಇಂಥ ಲಾವಣಿಗಳನ್ನು ನಮ್ಮ ಕಡೆಗೆ ಬರೆದು ಕಳಿಸಿದರೆ ಪ್ರಸಿದ್ಧಿಸುವೆವು.

೩. **ಐತಿಹಾಸಿಕದೃಷ್ಟಿ**—ಗೇಟೆ ( Goethe ) ಎಂಬ ಜರ್ಮನ್ ತತ್ವಜ್ಞನು ಇತಿಹಾಸದ ಕಾರ್ಯವು ಯಾವದೆಂಬದನ್ನು ಸರಸಾಗಿ ವರ್ಣಿಸಿದ್ದಾನೆ. ಅದು ಹೇಗಂದರೆ—

"ಇತಿಹಾಸಜ್ಞನು ಅಸತ್ಯವನ್ನೂ, ಸತ್ಯವನ್ನೂ, ನಿಶ್ಚಿತವಾದದ್ದನ್ನೂ, ಅನಿಶ್ಚಿತವಾದದ್ದನ್ನೂ, ಸ್ವೀಕರಿಸಲಿಕ್ಕೆ ಬರುವಂಥ ಮತ್ತು ಬರದಂಥ ಸಂಗತಿಗಳನ್ನೂ ವಿಂಗಡಿಸತಕ್ಕದ್ದು. ಪ್ರತಿಯೊಬ್ಬ ಇತಿಹಾಸ ಶೋಧಕನು ತಾನು ಜೂರರನೆಂದು ತಿಳಿಯತಕ್ಕದ್ದು. ತಾನು ಹೇಳುವ ಪ್ರತಿಯೊಂದು ಸಂಗತಿಯು ಉಲ್ಲೇಖವು ಎಷ್ಟರಮಟ್ಟಿಗೆ ಸಂಪೂರ್ಣವಾಗಿದೆಂಬದನ್ನೂ ಆ ಉಲ್ಲೇಖಕ್ಕೆ ಆಧಾರಗಳು ಯಾವವೆಂಬದನ್ನೂ ವಿಚಾರಮಾಡುವದು ಅವಶ್ಯವಾದದ್ದು. ಆ ನಂತರ ತನ್ನ ನಿರ್ಣಯವನ್ನು ಗೊತ್ತುಮಾಡಿ ಅದು ಉಳಿದ ಜೂರರ ಅಥವಾ ಫೋರಮನ್ನರ ಅಭಿಪ್ರಾಯದಿಂದ ಭಿನ್ನವಾಗಿದ್ದರೂ ಕೂಡ ಅದನ್ನೇ ಹೇಳುವದು ಅವಶ್ಯವು." ಹೀಗೆ ಸಮದೃಷ್ಟಿಯುಳ್ಳ ಶೋಧಕರು ಬರೆದ ಇತಿಹಾಸಗಳನ್ನು ಮಾತ್ರ ವಿದ್ಯಾರ್ಥಿಗಳು ಓದುವದರಿಂದ ಅವರಲ್ಲಿ ನಿಜವಾದ ಐತಿಹಾಸಿಕ ದೃಷ್ಟಿಯು ಉಂಟಾಗುವದು.

ಇನ್ನು ಹಿಂದುಸ್ತಾನದ ಇತಿಹಾಸವನ್ನು ಈ ದೃಷ್ಟಿಯಿಂದ ಅವಲೋಕನಮಾಡಿದರೆ ಈಗಿನ ಕೆಲವು ಶಾಲೋಪಯೋಗಿ ಇತಿಹಾಸ ಪುಸ್ತಕಗಳನ್ನು ಬರೆದ ಕೆಲವು ಮಹನೀಯರು ಹಿಂದುಸ್ತಾನದಲ್ಲಿ ಯಾವಾಗಲೂ ಕೊಲೆಸುಲಿಗೆಗಳು ನಡೆದಿದ್ದವೆಂದೂ ಶಾಂತತೆಯು ಎಂದೂ ಇದ್ದಿಲ್ಲವೆಂದೂ ಅಭಿಪ್ರಾಯಪಟ್ಟಿರುವದು ಸರಿಯಲ್ಲವೆಂಬದು ಫಾಹಿಯಾನ, ಹುವೆನ್‌ತ್ಸಾಂಗ, ಅಲ್ಬೆರೂನಿ ಮೊದಲಾದ ಪ್ರಾಚೀನ ಪ್ರವಾಸಿಕರ ವೃತ್ತಾಂತಗಳಿಂದ ಗೊತ್ತಾಗುವದು. ಹಿಂದುಸ್ತಾನ ದೇಶದಲ್ಲಿ ಶಾಂತತೆ ಇದ್ದದರಿಂದಲೇ ಹೊಸ ಧರ್ಮಗಳ ಉತ್ಪತ್ತಿಯೂ ಹೊಸ ವಿಚಾರಗಳ ಪ್ರಾದುರ್ಭಾವವೂ ಆದವೆಂಬವು ತಿಳಿಯುವದು. ಕಾವ್ಯಗಳ ಅಭಿವೃದ್ಧಿಯನ್ನು ಸ್ಪಷ್ಟಪಡಿಸುವ ಕಾಲಿದಾಸ, ಭವಭೂತಿ, ಭರ್ತೃಹರಿ ಮೊದಲಾದ ಸಂಸ್ಕೃತ ಕವಿರಾಜರಿಂದಲೂ, ಕಲೆಗಳ ಅಭಿವೃದ್ಧಿಯನ್ನು ಗೊತ್ತುಮಾಡಿಕೊಡುವ ಅಜಂತಾ, ಕಾರ್ಲೆ, ಬಾದಾಮಿಗಳಲ್ಲಿ ಗುಡ್ಡದೊಳಗೆ ಕೊರೆದ ಬಸ್ತಿಗಳಲ್ಲಿದ್ದ ಅತಿ ಸುಂದರವಾದ ಮೂರ್ತಿ, ಚಿತ್ರ, ಸುಳುವುಗಳಿಂದಲೂ ಅದೇ ಮಾತು ಸಿದ್ಧವಾಗುವದು. ಹಿಂದುಸ್ತಾನದಲ್ಲಿ ಪ್ರಾಚೀನಕಾಲದಿಂದ ಅರಸರಲ್ಲಿ ಯಾವಾಗಲೂ ವೈರವೂ, ವೈಮನಸ್ಯವೂ ಇದ್ದವೆಂದು ಈ ಗ್ರಂಥಕಾರರು ಸಾರುತ್ತಾರೆ. ಆದರೆ ಸುಧಾರಣೆಯ ಯುಗವೆಂದು ಜಂಬಬಡಿಯುವ ಈ ಕಾಲದಲ್ಲಿ ಸಹ ಅದೇ ಹಾಡು ಕಂಡು ಬರುವದಿಲ್ಲವೋ ಎಂಬದನ್ನು ಇವರು ಮರೆತುಬಿಟ್ಟಂತೆ ತೋರುತ್ತದೆ. ಹಿಂದುಸ್ತಾನದಲ್ಲಿ ಅತಿ ಪ್ರಾಚೀನ ಕಾಲದಿಂದ ಅಶೋಕ, ಸಮುದ್ರಗುಪ್ತ, ಅಕಬರ, ಔರಂಗಜೇಬ, ೧ನೇ ಬಾಜೀರಾವ ಇವರು ಸಾರ್ವಭೌಮ ಅರಸರಾಗಿ ಆಳಿದ್ದು ಇತಿಹಾಸದಿಂದ ತಿಳಿಯುವದು. ಇನ್ನು ಐತಿಹಾಸಿಕ ದೃಷ್ಟಿಯಿಂದ ಹಿಂದುಸ್ತಾನವು ಮೊದಲಿನಿಂದ

ಒಂದೇ ಒಂದು ರಾಷ್ಟ್ರವೆಂಬದನ್ನು ಪಾಶ್ಚಾತ್ಯ ಇತಿಹಾಸ ಸಂಶೋಧಕರಾದ ವಿನಸೆಂಟ ಸ್ಮಿಥರು ತಮ್ಮ ಹಿಂದುಸ್ಥಾನದ ಪ್ರಾಚೀನ ಇತಿಹಾಸವೆಂಬ ಗ್ರಂಥದಲ್ಲಿ ಸಿದ್ಧಮಾಡಿ ತೋರಿಸಿದ್ದಾರೆ. ಅವರು ಅನ್ನುವದೇನಂದರೆ—"ಹಿಂದುಸ್ಥಾನವು ಒಂದೇ ರಾಷ್ಟ್ರವಿದ್ದು ಅದಕ್ಕೆ ಒಂದೇ ಹೆಸರಿದ್ದದ್ದು ಯಥಾ ಯೋಗ್ಯವು. ಹಿಂದುಸ್ಥಾನದ ಸಂಸ್ಕೃತಿಯು ಜಗತ್ತಿನ ಉಳಿದ ಭಾಗಗಳ ಸಂಸ್ಕೃತಿಗಿಂತ ಭಿನ್ನವಾಗಿದ್ದರೂ ದೇಶದ ಎಲ್ಲ ಭಾಗಗಳಿಗೂ ಸಾಮಾನ್ಯವಾಗಿದೆ. ಆದದರಿಂದ ಮಾನವ ಇತಿಹಾಸದಲ್ಲಿ ಬೌದ್ಧಿಕ, ಸಾಮಾಜಿಕ, ಧಾರ್ಮಿಕ ದೃಷ್ಟಿಯಿಂದ ಹಿಂದುಸ್ಥಾನವು ಏಕೀಭಾವವುಳ್ಳ ರಾಷ್ಟ್ರವೆಂದು ಹೇಳಬಹುದು. ಹಿಂದುಸ್ಥಾನದ ಸಾರ್ವಭೌಮತ್ವವನ್ನು ವಹಿಸಿದ ಅರಸರು ಆಗಿಹೋಗಿ ಬಹಳದಿವಸಗಳಾಗಿಲ್ಲ. ಒಂದೇ ಒಂದು ಶತಕವಾಯಿತು. ಈ ಸಾರ್ವಭೌಮತ್ವವನ್ನು ಪಡೆಯಬೇಕೆಂಬ ಮಹತ್ವಾಕಾಂಕ್ಷೆಯು ಪ್ರಾಚೀನಕಾಲದಿಂದ ಈ ದೇಶದ ಅರಸರಲ್ಲಿ ಕಂಡುಬರುತ್ತಿರುವದು. ಆದರೆ ಅವರಲ್ಲಿ ಯಾರೂ ಸಂಪೂರ್ಣವಾದ ಸಾರ್ವಭೌಮತ್ವವನ್ನು ಸಂಪಾದಿಸಿದ್ದಿಲ್ಲವೆಂಬದು ರಾಜಕೀಯ ಇತಿಹಾಸದಲ್ಲಿ ಇರಬೇಕಾದ ಏಕೀಭಾವಕ್ಕೆ ಕೆಲಮಟ್ಟಿಗೆ ಕುಂದುತರುತ್ತದೆ. ಆದರೂ ಕ್ರಿ. ಶ. ಪೂರ್ವಕ್ಕೆ ೩ನೇ ಶತಕದೊಳಗೆ ಅಶೋಕನೂ, ಕ್ರಿ. ಶ. ದ ೪ನೇ ಶತಕದಲ್ಲಿ ಸಮುದ್ರಗುಪ್ತನೂ ಮದ್ರಾಸದವರೆಗೆ ಎಲ್ಲ ಹಿಂದುಸ್ಥಾನದ ಸಾರ್ವಭೌಮರಾಗಿದ್ದರೆಂಬದು ನೆನಪಿಡತಕ್ಕ ಸಂಗತಿಯಾಗಿದೆ."

## ೪ ನಿಜವಾದ ಇತಿಹಾಸವು ಯಾವದು ?

ಹರ್ಬರ್ಟಸ್ಪೆನ್ಸರರ ಅಭಿಪ್ರಾಯವೇನೆಂದರೆ :—"ಇತಿಹಾಸ ಪುಸ್ತಕಗಳಲ್ಲಿ ನಿಜವಾದ ಇತಿಹಾಸವೇ ಇರುವದಿಲ್ಲ. ಬರೇ ಅರಸರ ವರ್ಣನೆಗಳು ಇರುವವು; ಜನರ ವಿಷಯಕ್ಕೆ ಏನೂ ಉಲ್ಲೇಖವಿರುವದಿಲ್ಲ. ಅರಸರ ಅಭಿವೃದ್ಧಿಯ ಬದಲಾಗಿ ರಾಷ್ಟ್ರದ ಬೆಳವಣಿಗೆಯೇ ಇತಿಹಾಸದಲ್ಲಿ ಮುಖ್ಯ ವಿಷಯವೆಂದು ತಿಳಿದು ಇತಿಹಾಸ ಲೇಖಕರು ಈಚೆಗೆ ಸಾಮಾಜಿಕ ಸುಧಾರಣೆ ಮೊದಲಾದ ವಿಷಯಗಳನ್ನು ಪ್ರತಿಪಾದಿಸಹತ್ತಿದ್ದಾರೆ. ಇತಿಹಾಸದಲ್ಲಿ ರಾಷ್ಟ್ರದ ಪ್ರಗತಿಯು ಹೇಗಾಯಿತೆಂಬದನ್ನು ತಿಳಿದುಕೊಳ್ಳಲಿಕ್ಕೆ ಅವಶ್ಯವಾದ ಸಂಗತಿಗಳನ್ನು ನಾವು ಗೊತ್ತುಮಾಡಿಕೊಳ್ಳಲಿಕ್ಕೇ ಬೇಕು."

ಹೀಗೆ ಬೇರೆ ಬೇರೆ ಕಾಲಗಳಲ್ಲಿ ನಾಗರಿಕನ ಕರ್ತವ್ಯಗಳನ್ನೂ ಜೀವಿತವನ್ನೂ ಗೊತ್ತುಮಾಡಿಕೊಡುವ ಪಾಠಗಳನ್ನು ವಿದ್ಯಾರ್ಥಿಗಳಿಗೆ ಕಲಿಸುವದರಿಂದ ಸದ್ಯಕ್ಕೆ ನಾವು ಉಪಭೋಗಿಸುತ್ತಿದ್ದ ಹಕ್ಕುಗಳೂ ಅನುಕೂಲತೆಗಳೂ ಯಾವ ಯಾವ ಮೆಟ್ಟುಗಳಿಂದ ಉಂಟಾದವೆಂಬದು ಗೊತ್ತಾಗುವದು. ಕೆಳಗೆ ಉಲ್ಲೇಖಿಸಿದ ವಿಷಯಗಳ ಬಗ್ಗೆ ಪಾಠಗಳನ್ನು ಸಂಗ್ರಹಿಸಿ ಪ್ರೌಢವಿದ್ಯಾರ್ಥಿಗಳಿಗೆ ಕಲಿಸಬೇಕು.

೧ ಜನರೂ ಅವರ ಕರ್ತವ್ಯಗಳೂ ಹಕ್ಕುಗಳೂ ಚುನಾವಣೆಗಳೂ.

೨ ಶಾಸನಪದ್ಧತಿ, ಬಾದಶಹ, ಪಾರ್ಲಿಮೆಂಟು, ಹಿಂದುಸ್ಥಾನದ ಸ್ಟೇಟ ಸೆಕ್ರೆಟರಿಯ ಅಧಿಕಾರಗಳು, ವ್ಹಾಯಿಸ್‌ರಾಯ ಮತ್ತು ಗವ್ಹರ್ನರರ ಅಧಿಕಾರಗಳು.

೩ ಕಾಯಿದೆಗಳ ರಚನೆ; ಅವುಗಳ ಅಮಲು. ಲೆಜಿಸ್ಲೆಟಿವ್ಹ ಅಸೆಂಬ್ಲಿ, ಕೌನ್ಸಿಲ ಆಫಸ್ಟೇಟ, ಲೆಜಿಸ್ಲೆಟಿವ್ಹ ( ಪ್ರಾಂತಿಕ ) ಕೌನ್ಸಿಲ.

೪ ತೆರಿಗೆ ಅಥವಾ ಕರಗಳು :—ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ.

೫ ಧಾರ್ಮಿಕ ಸಂಸ್ಥೆ :—ಮದ್ರಾಸ ಇಲಾಖೆಯಲ್ಲಿ ದೇವಸ್ಥಾನಗಳ ಆಸ್ತಿಯ ವ್ಯವಸ್ಥೆಯನ್ನು ಹೇಗೆ ಮಾಡಬೇಕೆಂಬದರ ಬಗ್ಗೆ ಕಾಯಿದೆ ( Charitable Endowments Act )

೬ ವರ್ತಮಾನ ಪತ್ರಗಳು, ಅವುಗಳಿಂದ ಜನರ ಮೇಲೆ ಆದ ಪರಿಣಾಮ.

೭ ದಂಡು, ಹಡಗುಪಡೆ, ವಾತನಾವೆಗಳು, ಯುದ್ಧದ ಕಾಲಕ್ಕೆ ಮಾಡುವ ವ್ಯವಸ್ಥೆ, ಶಾಂತತೆಯ ಕಾಲಕ್ಕೆ ಮಾಡುವ ವ್ಯವಸ್ಥೆ, ಒಪ್ಪಂದ ಮತ್ತು ತಹ ನಾಮೆಗಳು.

೮ ಉದ್ಯೋಗ ಕಲೆಗಳ ಅಭಿವೃದ್ಧಿ.

೯ ಶಿಕ್ಷಣ :—ಪ್ರಾಥಮಿಕ, ಮಾಧ್ಯಮಿಕ, ಉಚ್ಚ.

೧೦ ಟಪಾಲ ಮತ್ತು ತಾರಖಾತೆ.

೧೧ ಪರದೇಶಗಳಲ್ಲಿ ಸ್ವದೇಶದ ಜನರ ವಸತಿ :—ಆ ಸಂಬಂಧದ ಅನುಕೂಲತೆಗಳೂ ತೊಂದರೆಗಳೂ,

೧೨ ಮಿತವ್ಯಯ :— ಸಹಕಾರಿ ಸಂಘ , ಪೋಸ್ಟಿನ ಸೇವ್ಹಿಂಗ್ಸಬ್ಯಾಂಕು ಮು.

೫ **ಪದ್ಧತಿಗಳು** :—ಇತಿಹಾಸವನ್ನು ಕಲಿಸುವದರಲ್ಲಿ ಬೇರೆ ಬೇರೆ ಪದ್ಧತಿಗಳಿರುವವು. ಅವುಗಳ ವಿವೇಚನವನ್ನು ಕೆಳಗೆ ಮಾಡುವೆವು.

೧ **ಕಾಲಮಾನದ ಪದ್ಧತಿ** :— ( Chronological method ) ಈಗಿನ ಇತಿಹಾಸ ಪುಸ್ತಕಗಳಲ್ಲಿ ಇದೇ ಪದ್ಧತಿಯನ್ನು ಅನುಸರಿಸಿರುವರು. ಈ ಪದ್ಧತಿಯು ಸುಲಭವಾಗಿದ್ದು ಪ್ರೌಢರಿಗೆ ತಿಳಿಯುವಂತಿದೆ. ಆದರೆ ಸಣ್ಣ ಬಾಲಕರಿಗೆ ಈ ಪದ್ಧತಿಯಿಂದ ಅನೇಕ ತೊಂದರೆಗಳು ಉಂಟಾಗುವವು. ಕಾಲಮಾನಕ್ಕನುಸರಿಸಿ ನಾವು ಅತಿ ಪ್ರಾಚೀನ ಕಾಲದಿಂದ ಇತಿಹಾಸವನ್ನು ಆರಂಭಿಸುವದರಿಂದ ಸದ್ಯದ ಪರಿಸ್ಥಿತಿಗೂ ಪ್ರಾಚೀನ ಪರಿಸ್ಥಿತಿಗೂ ಬಹಳ ಅಭ್ಯಂತರವಿರುವದರಿಂದ ಅವರು ಆ ಕಾಲದ ಬಗ್ಗೆ ನಿಶ್ಚಿತವಾದ ಕಲ್ಪನೆಗಳನ್ನು ಮಾಡಲಾರರು. ಈ ಪದ್ಧತಿಯ ದೋಷಗಳನ್ನು ಹೋಗಲಾಡಿಸಬೇಕಾದರೆ ಪ್ರಾಚೀನ ಕಾಲದಿಂದ ಇಲ್ಲಿಯ ವರೆಗೆ ಆದ ಇತಿಹಾಸದಲ್ಲಿ ಭಾಗಗಳನ್ನು ಕಲ್ಪಿಸಿ ಆಯಾ ಭಾಗಗಳ ಸಂಗತಿಗಳನ್ನು ಸಂಕ್ಷಿಪ್ತವಾಗಿ ಸ್ಥೂಲಮಾನದಿಂದ ಪ್ರಾರಂಭಕ್ಕೇ ಹೇಳಬೇಕು. ಅಂದರೆ ಇತಿಹಾಸವು ನಮ್ಮ ಕಾಲದ ವರೆಗೆ ಇರುವದೆಂಬದರ ಅರಿವು ಬಾಲಕರಲ್ಲಿ ಹುಟ್ಟುವದು.

೨ **ಹಿಂದೆ ಹಿಂದಕ್ಕೆ ಹೋಗುವ ಪದ್ಧತಿ**:–(Regressive method) ಸದ್ಯದ ಕಾಲದ ಇತಿಹಾಸವನ್ನು ಮೊದಲು ವಿವೇಚನ ಮಾಡಿ ಅದಕ್ಕೂ ಹಿಂದಿನ

ಕಾಲದ ಅಭ್ಯಾಸವನ್ನು ಮಾಡುತ್ತ ಹೋಗುವದು. ಈ ಪದ್ಧತಿಯು ಇತಿಹಾಸವನ್ನು ಆರಂಭಮಾಡುವ ಇಯತ್ತೆಯಲ್ಲಿ ಸರಿಯಾಗುವದು. ಆದರೆ ಮೇಲಿನ ವರ್ಗಗಳಲ್ಲಿ ಈ ಪದ್ಧತಿಯಿಂದ ಅಭ್ಯಾಸ ಮಾಡುವದರಿಂದ ಹಿಂದಿನ ಕಾಲದ ಪ್ರಸಿದ್ಧ ಜನರ ಬಗ್ಗೆ ಉಂಟಾಗಬೇಕಾದ ಪೂಜ್ಯಭಾವವೂ ಮನೋರಂಜನವೂ ಉಂಟಾಗಲಾರವು.

೩ **ಪೋಷಕ ಪದ್ಧತಿ** :—(Concentric method) ಈ ಪದ್ಧತಿಯಲ್ಲಿ ಮೊದಲು ಮುಖ್ಯ ಮುಖ್ಯ ಸಂಗತಿಗಳನ್ನು ಸಂಕ್ಷಿಪ್ತವಾಗಿ ಹೇಳಿದರೆ ಸಾಕು. ಪ್ರಸಿದ್ಧ ಜನರ ಚರಿತ್ರಗಳನ್ನೂ ಮನೋರಂಜಕ ಕಥೆಗಳನ್ನೂ ಹೇಳಿದರೆ ಸಾಕು. ಆ ನಂತರ ಎರಡನೇ ವರ್ಷವಲ್ಲಿ ಹೆಚ್ಚು ಹೆಚ್ಚು ಸಂಗತಿಗಳನ್ನು ಸೇರಿಸಿ ಕಾರ್ಯಕಾರಣ ಭಾವದ ಕಡೆಗೆ ಲಕ್ಷವನ್ನಿಟ್ಟು ಅಭ್ಯಾಸವನ್ನು ಸಾಗಿಸಬೇಕು. ಕೊನೆಗೆ ಮೂರನೇ ವರ್ಷದಲ್ಲಿ ಜನಾಂಗದ ಸಾಮಾಜಿಕ, ಧಾರ್ಮಿಕ, ಔದ್ಯೋಗಿಕ, ರಾಜಕೀಯ, ವಾಙ್ಮಯಾತ್ಮಕ ಮುಂತಾದ ಪ್ರಗತಿಯ ವಿಷಯಕ್ಕೆ ವಿಚಾರಮಾಡುತ್ತ ಅಭ್ಯಾಸವನ್ನು ಮಾಡಬೇಕು. ಈ ಅಭ್ಯಾಸವು ಒಂದೇ ವರುಷದಲ್ಲಿ ಮುಗಿಯಲಾರದೆಂಬದನ್ನು ಮರೆಯಬಾರದು. ೨-೩ ವರ್ಷಗಳಲ್ಲಿ ಪೂರ್ಣಮಾಡಿದರೂ ಅಡ್ಡಿ ಇಲ್ಲ.

ಈ ಪೋಷಕ ಪದ್ಧತಿಯಲ್ಲಿಯ ೩ ಮೆಟ್ಟುಗಳಿಗೂ, ಒಂದು ವಸ್ತುವಿನ ಗುಣಧರ್ಮಗಳನ್ನು ಪರೀಕ್ಷಿಸುವಾಗ ಮೊದಲು ಬರಿಗಣ್ಣಿನಿಂದ, ಆ ನಂತರ ಲೆನ್ಸದ ಕನ್ನಡಕದಿಂದ, ಕಡೆಗೆ ಸೂಕ್ಷ್ಮದರ್ಶಕಯಂತ್ರದಿಂದ ಉಂಟಾಗುವ ನೋಟಗಳಿಗೂ ಹೋಲಿಸಬಹುದು.

೬ **ಇತಿಹಾಸದ ಕಾರ್ಯಗಳು** :—ಶಿಕ್ಷಣದಲ್ಲಿ ಇತಿಹಾಸದ ಕಾರ್ಯವೇನೆಂಬದನ್ನು ಒಬ್ಬ ಫ್ರೆಂಚ ಗ್ರಂಥಕಾರನು ಸರಸಾಗಿ ಹೇಳಿದ್ದಾನೆ. "ಜಗತ್ತಿನಲ್ಲಿದ್ದ ಭಿನ್ನ ಭಿನ್ನ ಸಂಸ್ಕೃತಿಗಳ ಸಂಪೂರ್ಣ ಕಲ್ಪನೆಯೂ ಸ್ವದೇಶದ ಸ್ಥಿತಿ ಉತ್ಕರ್ಷಗಳ ನಿಶ್ಚಿತವಾದ ಜ್ಞಾನವೂ ವಿದ್ಯಾರ್ಥಿಗಳಲ್ಲಿ ಉಂಟಾಗಬೇಕು. ಜಗತ್ತಿನ ವ್ಯಾಪಾರಗಳಿಂದ ನಮ್ಮ ದೇಶದ ಮೇಲೆ, ನಮ್ಮ ದೇಶದ ವ್ಯಾಪಾರದಿಂದ ಜಗತ್ತಿನ ಮೇಲೆ ಯಾವ ಪ್ರಕಾರದ ಪರಿಣಾಮುವಾಗುತ್ತದೆಂಬದು ಅವರಿಗೆ ಗೊತ್ತಾಗತಕ್ಕದ್ದು. ಎಲ್ಲ ಜನಾಂಗಗಳಿಗೂ ಅವರಿಗೆ ಸಲ್ಲತಕ್ಕ ಚಲೋ ಅಥವಾ ಕೆಟ್ಟ ಅಭಿಪ್ರಾಯುಗಳನ್ನು ನಿರ್ದಾಕ್ಷಿಣ್ಯದಿಂದ ಹೇಳುವದು. ಮನಸ್ಸಿನ ಕ್ಷೇತ್ರವು ವಿಸ್ತಾರವಾಗುವಂತೆ ಮಾಡುವದು, ಸ್ವದೇಶದ ಹಾಗು ಜಗತ್ತಿನ ಸದ್ಯದ ಪರಿಸ್ಥಿತಿಯ ತಿಳುವಳಿಕೆ, ಮತ್ತು ತನ್ನ ದೇಶದ ಬಗ್ಗೆ ಹಾಗು ಮಾನವಕುಟುಂಬದ ಬಗ್ಗೆ ತನ್ನ ಕರ್ತವ್ಯಗಳು ಯಾವವು ಎಂಬದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವದು. ಇವೆಲ್ಲ ಇತಿಹಾಸದ ಕಾರ್ಯಗಳು."

೭ **ಹಿಂದುಸ್ಥಾನದ ಇತಿಹಾಸದ ಭಾಗಗಳು**.—ಹಿಂದುಸ್ಥಾನದ ಇತಿಹಾಸದಲ್ಲಿ ಐತಿಹಾಸಿಕ ಕಾಲವೆಂದೂ ಅದಕ್ಕೂ ಪೂರ್ವದ ಕಾಲವೆಂದೂ ಎರಡು

ಭಾಗಗಳನ್ನು ಕಲ್ಪಿಸುವದು ಅವಶ್ಯವದೆ. ಇಲ್ಲಿ ವಾಡಿಕೆಯಾಗಿ ಹಿಂದುಸ್ತಾನದ ಇತಿಹಾಸ ಪುಸ್ತಕಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲಾಗದಂಥ ಕೆಲವು ಸಂಗತಿಗಳನ್ನು ಕೊಡುತ್ತೇವೆ.

**ಪ್ರಾಚೀನಕಾಲ**:—ಪ್ರಾಚೀನಕಾಲವೆಂದರೆ *ವೇದಗಳ ಕಾಲದಿಂದ (ಕ್ರಿ. ಶ. ಪೂ. ೪೦೦೦ ವರ್ಷ) ಬುದ್ಧನ ಕಾಲದವರೆಗೆ ಅಂದರೆ ಕ್ರಿ. ಶ. ಪೂ. ೫೫೬. ಈ ಕಾಲದಲ್ಲಿ ಆರ್ಯರು ಪಶ್ಚಿಮದಿಂದ ಬಂದು ನೆಲೆಗೊಂಡು ಇಲ್ಲಿದ್ದ ದ್ರಾವಿಡರನ್ನು ಕೆಲವು ಕಟ್ಟಿಗೆ ವಶಮಾಡಿಕೊಂಡು ಇಲ್ಲವೆ ಅವರೊಳಗೆ ಕೂಡಿಕೊಂಡು ಬಲವಾದ ರಾಜ್ಯಗಳನ್ನು ಸ್ಥಾಪಿಸಿದರು. ಆರ್ಯರ ಬುದ್ಧಿ ಚಾಪಲ್ಯವೂ ದ್ರಾವಿಡರ ಧೋರಣವೂ ಒಟ್ಟಾಗಿ ಹಿಂದೀಜನರಲ್ಲಿ ಕಂಡುಬರುವವು. ಮಹಾಭಾರತದ ಯುದ್ಧವು ಕ್ರಿ. ಶ. ಪೂ. ೧೫೦೦—೨೦೦ ವರ್ಷಗಳ ನಡುವೆ ಆಗಿರಬಹುದೆಂದು ಕೆಲವರ ಅಭಿಪ್ರಾಯ ವಿರುವದು. ಭಗವದ್ಗೀತೆಯು ಇದೇಕಾಲಕ್ಕೆ ರಚಿತವಾಯಿತು. ಮುಂದೆ ೨೦೦ ವರ್ಷಗಳಾದಮೇಲೆ ಬ್ರಾಹ್ಮಣಗಳೂ ಆರಣ್ಯಕಗಳೂ ಉಪನಿಷತ್ತುಗಳೂ ಉಂಟಾದವೆಂದೂ ಮತ್ತೆ ಇನ್ನೂರು ವರ್ಷಗಳಾದಮೇಲೆ ಸೂತ್ರಗಳು ರಚಿತವಾದವೆಂದೂ ಕೆಲವು ಇತಿಹಾಸಜ್ಞರ ಮತವು. ಪ್ರಾಚೀನಕಾಲದ ಪ್ರಸಿದ್ಧ ವಿದ್ಯಾಪೀಠಗಳಾದ ತಕ್ಷಶಿಲಾ (ರಾವಳಪಿಂಡಿಯ ನೆರೆಯಲ್ಲಿ) ನಲಂದ ( ಬಿಹಾರದಲ್ಲಿ ) ಉಜ್ಜಯಿನಿ, ಕಂಚಿ ಇವು ದ್ರಾವಿಡರಿಂದಲೇ ಸ್ಥಾಪಿಸಲ್ಪಟ್ಟವು. ದ್ರಾವಿಡರು ದಕ್ಷಿಣ ಹಿಂದುಸ್ತಾನದಲ್ಲೇ ಪ್ರಾಚೀನಕಾಲದಿಂದ ಇದ್ದರೆಂಬದು ತಪ್ಪುತಿಳುವಳಿಕೆಯೆಂಬದು ಸಿಂಧಪ್ರಾಂತದಲ್ಲಿ ಮಹೆಂಜೋದಾರೋ, ಪಂಜಾಬದಲ್ಲಿ ಹರಪ್ಪಾ ಎಂಬ ಗ್ರಾಮಗಳ ಹತ್ತರ ದೊರೆತ ಅವಶೇಷಗಳಿಂದ ಸಿದ್ಧವಾಗಿದೆ. ಆರ್ಯಸಂಸ್ಕೃತಿಯು ಹಿಂದುಸ್ತಾನದಲ್ಲಿ ನೆಲೆಗೊಳ್ಳುವ ಪೂರ್ವದಲ್ಲಿಯೇ **ದ್ರಾವಿಡ ಸಂಸ್ಕೃತಿಯು ನೆಲೆಗೊಂಡಿತ್ತೆಂಬದು ನಿರ್ವಿವಾದವಾದ ಸಂಗತಿಯಾಗಿದೆ.** ಇದಕ್ಕೂ ಪೂರ್ವದಲ್ಲಿ ಇನ್ನೊಂದು ಸಂಸ್ಕೃತಿಯು ಇತ್ತೆಂಬುದನ್ನು ಪ್ರಾಚೀನ ವಿಮರ್ಶಕಾರರು ತರ್ಕಿಸುತ್ತಾರೆ. ದ್ರಾವಿಡ ಮತ್ತು ಆರ್ಯಸಂಸ್ಕೃತಿಗಳು ಸಮ್ಮಿಶ್ರವಾಗಿ ಈಗಿನ ಹಿಂದೂ ಸಂಸ್ಕೃತಿಯು ಉಂಟಾಗಿದೆ. ಯಜ್ಞಯಾಗಾದಿ ಕರ್ಮಗಳ ಪ್ರಾಧಾನ್ಯದಿಂದ ಪಶುಗಳ ಹಿಂಸೆಯು ಈ ಕಾಲಕ್ಕೆ ಪ್ರಚಾರದಲ್ಲಿ ಬಂತು.

**ಅರ್ವಾಚೀನ ಕಾಲವು**:— ಬುದ್ಧನ ಜನ್ಮದಿಂದ ಇಲ್ಲಿಯವರೆಗೆ ಅಂದರೆ ೨೫೦೦ ವರ್ಷಗಳಲ್ಲಿ ಹಿಂದುಸ್ತಾನದ ಇತಿಹಾಸದಲ್ಲಿ ಅನೇಕ ಮಹತ್ವದ ಹೆಚ್ಚುಕಡಿಮೆಗಳೂ ಆಘಾತಗಳೂ ಆದವು, ಅವುಗಳಿಂದ ಇಲ್ಲಿಯ ಜನಾಂಗದಮೇಲೆ ಆದ ಪರಿಣಾಮವನ್ನು ವಿವೇಚಿಸಬೇಕು.

---

*ವೇದದ ಕಾಲದ ವಿಷಯಕ್ಕೆ ಪಂಡಿತರಲ್ಲಿ ಬಹಳ ಮತಭೇದವಿರುವದು. ಸಾಮಾನ್ಯವಾಗಿ ಕ್ರಿ. ಶ. ಪೂ. ೪ ಸಾವಿರ ವರ್ಷಗಳ ಹಿಂದೆ ಇರಬಹುದೆಂದು ನಂಬುತ್ತಾರೆ.

(೧) ಬೌದ್ಧ ಜೈನಮತಗಳ ಪ್ರಭಾವದಿಂದ ಜನರಲ್ಲಿ ಅಹಿಂಸಾತತ್ತ್ವದ ಅಂದರೆ ಸೌಮ್ಯಸ್ವಭಾವ ಪರೋಪಕಾರ ಮೊದಲಾದ ಉಚ್ಚ ಭಾವನೆಗಳ ಪೋಷಣವಾಯಿತು. ಮೌರ್ಯ ವಂಶದ ಚಂದ್ರಗುಪ್ತನು ಸಾರ್ವಭೌಮ ಅರಸನಾಗಿ ಮೆರೆದನು. ಇವನು ತಕ್ಷಶಿಲೆಯ ವಿದ್ಯಾಪೀಠದಲ್ಲಿ ಶಿಷ್ಯನಾಗಿದ್ದನು. ಇವನ ತರುವಾಯ ಬಿಂದುಸಾರನೂ ಅಶೋಕನ ಬೌದ್ಧ ತತ್ತ್ವಗಳನ್ನು ಪ್ರಸಾರಮಾಡಿದರು. ಬಿಂದುಸಾರನು ಮಗಧ ದೇಶದ ಸಾರ್ವಭೌಮತ್ವವನ್ನು ಮೈಸೂರವರೆಗೆ ಹಬ್ಬಿಸಿದನು. ಇವನ ಮಗನಾದ ಅಶೋಕನ ಸಾರ್ವಭೌಮತ್ವವನ್ನು ಕಲಿಂಗದ ಅರಸನ ಹೊರತಾಗಿ ಹಿಂದುಸ್ತಾನದೊಳಗಿನ ಅರಸರೆಲ್ಲರೂ ಒಪ್ಪಿಕೊಂಡಿದ್ದರು. ಚಂದ್ರಗುಪ್ತನ ಕಾಲದಲ್ಲಿ ಜೈನ ಸಾಧುಗಳು ದಕ್ಷಿಣಕ್ಕೆ ಬಂದರೆಂಬದು ಶ್ರವಣಬೆಳಗುಳದಲ್ಲಿದ್ದ ಆಖ್ಯಾಯಿಕೆಯಿಂದ ತಿಳಿದುಬರುವದು. ಚಂದ್ರಗುಪ್ತನು ತನ್ನ ರಾಷ್ಟ್ರದಲ್ಲಿ ೧೨ ವರ್ಷ ಬರಬೀಳಲು ರಾಜ್ಯವನ್ನು ಬಿಟ್ಟು ಶ್ರವಣಬೆಳಗುಳಕ್ಕೆ ಬಂದನೆಂದು ತಿಳಿಯುತ್ತದೆ. ಜೈಮಿನಿಋಷಿಯಿಂದ ಪ್ರಣೀತವಾದ ಪೂರ್ವಮೀಮಾಂಸದಲ್ಲಿಯೂ, ಶುಕ್ರಾಚಾರ್ಯರ ಅರ್ಥಶಾಸ್ತ್ರದಲ್ಲಿಯೂ ಕೌಟಿಲ್ಯ ( ಚಾಣಕ್ಯ ) ನ ಅರ್ಥಶಾಸ್ತ್ರದಲ್ಲಿಯೂ, ಅರಸರ ಕರ್ತವ್ಯಗಳು, ಪ್ರಜೆಗಳ ಹಕ್ಕುಗಳು ಮೊದಲಾದವುಗಳ ವಿಷಯಕ್ಕೆ ವ್ಯಾವಹಾರಿಕ ವಿವೇಚನವು ಕಂಡುಬರುವದು. ಇಟಲಿಯಲ್ಲಿ ಮ್ಯಾಕಿಯಾವ್ಹೆಲಿ ಎಂಬ ಚಾಣಕ್ಯನಂಥ ರಾಜನೀತಿಶಾಸ್ತ್ರಜ್ಞನು ಆಗಿಹೋದನು. ಅಶೋಕನು ಪೌರ್ವಾತ್ಯರಾಷ್ಟ್ರಗಳಿಗೆ ಧರ್ಮೋಪದೇಶಕರನ್ನು ಕಳಿಸಿದ್ದಲ್ಲದೆ ಸಿರಿಯಾ, ಇಜಿಪ್ತ ಮೊದಲಾದ ಪಾಶ್ಚಾತ್ಯರಾಷ್ಟ್ರಗಳಿಗೆ ಸಹ ಕಳಿಸಿದ್ದನೆಂದು ಗೊತ್ತಾಗುತ್ತದೆ. ಅಶೋಕನ ಕಾಲಕ್ಕೆ ಮದುರೆಯಲ್ಲಿ ಪಾಂಡ್ಯರು, ಕೇರಲದಲ್ಲಿ ಚೇರರು, ಪಾಂಡ್ಯರ ಉತ್ತರಕ್ಕೆ ಚೋಳರು ಆಳುತ್ತಿದ್ದರು. ಆರ್ಯ ದ್ರಾವಿಡ ಸಂಸ್ಕೃತಿಗಳು ಸಂಮಿಶ್ರವಾಗಿ ಒಂದೇ ಹಿಂದುಸಂಸ್ಕೃತಿಯಾದದ್ದು ಶರೀರ ಸಂಬಂಧದಿಂದಲೇ ಎಂದು ಹೇಳಬಹುದು.

(೨) ತಕ್ಷಶಿಲೆಯ ಮಹತ್ವವನ್ನು ಅಲೆಕ್ಸಂದರನು ತಿಳಿದು ಕೆಲವು ಕಾಲ ಅಲ್ಲಿ ನಿಂತುಕೊಂಡು ಹಿಂದುಸ್ತಾನದ ವಿಷಯಕ್ಕೆ ಅನೇಕ ಸಂಗತಿಗಳನ್ನು ಗೊತ್ತು ಮಾಡಿಕೊಂಡನು. ಹಿಂದುಸ್ತಾನದ ಎಲ್ಲ ಭಾಗಗಳಿಂದ ರಾಜಕುಮಾರರು ಅಭ್ಯಾಸಕ್ಕಾಗಿ ಅಲ್ಲಿಗೆ ಬರುತ್ತಿದ್ದರು. ತಕ್ಷಶಿಲೆಗೆ ಗ್ರೀಸದ ಯವನರೂ, ಇರಾಣದ ಪಾರ್ಶಿಗಳೂ (ಝೊರೋಸ್ತರನ ಶಿಷ್ಯರು) ಬರುತ್ತಿದ್ದರಂತೆ. ಕ್ರಿ. ಶ. ಪೂರ್ವದ ೧ನೇ ಶತಕದಲ್ಲಿ ಶಿಥಿಯನ್ನರು (ಶಕರು) ಸೆಸ್ತಾನ ಎಂಬ ಪಾರ್ಥಿಯದೇಶದೊಳಗಿನ ಪ್ರಾಂತದಿಂದ ಹಿಂದುಸ್ತಾನಕ್ಕೆ ಬಂದು ತಕ್ಷಶಿಲೆಯಲ್ಲಿ ಆಳಹತ್ತಿದರು. ಅವರೇ ಮುಂದೆ ದಕ್ಷಿಣಕ್ಕೆ ದಂಡೆತ್ತಿಬಂದು ಇಲ್ಲಿಯ ಅರಸರನ್ನು ಗೆದ್ದು ತಮ್ಮ " **ಶಕ** " ವನ್ನು ಸ್ಥಾಪಿಸಿದರು.

(೩) ಕನಿಷ್ಕನಕಾಲಕ್ಕೆ ಚರಕನು ರಾಜವೈದ್ಯನಾಗಿ ವೈದ್ಯಶಾಸ್ತ್ರವನ್ನು ಅಭಿವೃದ್ಧಿಗೊಳಿಸಿದನು. ಪಾಲಿಭಾಷೆಯು ಕ್ರಿ. ಶ. ೧ನೇ ಶತಕದಲ್ಲಿ ರೂಢಿಯಲ್ಲಿ ಬಂದಂತೆ ತಿಳಿಯುತ್ತದೆ.

(೪) ಮನುವಿನಿಂದ ಪ್ರಣೀತವಾದ ಮಾನವ ಧರ್ಮಶಾಸ್ತ್ರವು ಕ್ರಿ. ಶ. ೩ನೇ ಶತಕದಲ್ಲಿ ಪ್ರಸಿದ್ಧವಾಯಿತೆಂದು ಅನ್ನುತ್ತಾರೆ. ಬ್ರಾಹ್ಮಣಧರ್ಮದ ಮೇಲೆ ಬೌದ್ಧ ಜೈನ ಧರ್ಮಗಳ ಪರಿಣಾಮವು ಕೆಲಮಟ್ಟಿಗೆ ಆದಂತೆ ಇದರಲ್ಲಿ ಕಂಡುಬರುವದು. ಮನುಸ್ಮೃತಿಯಲ್ಲಿ ಸೋಮರಸದ ಉಲ್ಲೇಖವಿಲ್ಲ ; ಪ್ರಾಣಿಗಳಿಗೆ ದಯೆ ತೋರಿಸುವದು ಅವಶ್ಯವೆಂದು ಬರೆದದೆ. ಕಾಲಿದಾಸನು ಇದೇ ಕಾಲಕ್ಕೆ ರಘುವಂಶ ಶಾಕುಂತಲ ಮೊದಲಾದ ಗ್ರಂಥಗಳನ್ನು ಬರೆದನು.

(೫) ಉಜ್ಜಯಿನಿಯಲ್ಲಿ ಜ್ಯೋತಿಷ ಶಾಸ್ತ್ರದ ಅಭ್ಯಾಸವು ಭರದಿಂದ ನಡೆದದರಿಂದ ಉತ್ತರ ಹಿಂದುಸ್ತಾನದ ರಾಜಧಾನಿಗಳಲ್ಲಿದ್ದ ಜ್ಯೋತಿಷ ಶಾಸ್ತ್ರಜ್ಞರು ಜಗತ್ತಿನಲ್ಲಿ ಪ್ರಸಿದ್ಧರಾದರು. ಆರ್ಯಭಟ್ಟನು ಪಾಟಲಿ ಪುತ್ರದಲ್ಲಿಯೂ, ವರಾಹ ಮಿಹಿರನು (ಜನ್ಮ ೪೭೬) ಉಜ್ಜಯಿನಿಯಲ್ಲಿಯೂ ಪ್ರಸಿದ್ಧರಾದರು. ಬ್ರಹ್ಮಗುಪ್ತನು (೫೦೫–೫೮೭) ಗಣಿತ ಶಾಸ್ತ್ರವನ್ನು ಸೋಪಪತ್ತಿಕವಾಗಿ ಅಭ್ಯಾಸಿಸಿದನು. ಅರಬರು ಈ ದೇಶದಿಂದ ಸಂಖ್ಯಾಲೇಖನ, ದಶಾಂಶ ಅಪೂರ್ಣಾಂಕಗಳ ಪದ್ಧತಿಗಳನ್ನೂ ತ್ರಿಕೋಣ ಮಿತಿಯ, ತತ್ವಗಳನ್ನೂ ಕಲಿತು ತಮ್ಮ ದೇಶದಲ್ಲಿ ಪ್ರಚಾರವಮಾಡಿದರು. ಮುಂದೆ ಅರಬರು ಯುರೋಪದ ರಾಷ್ಟ್ರಗಳಲ್ಲಿ ಈ ಜ್ಞಾನವನ್ನು ಪ್ರಸಾರಮಾಡಿದರು. ಶಿಲ್ಪಶಾಸ್ತ್ರ, ಚಿತ್ರಕಲೆ ಮೊದಲಾದ ಕಲೆಗಳು ಸಹ ಊರ್ಜಿತಸ್ಥಿತಿಗೆ ಬಂದಿದ್ದವು. ಅಜಂಟಾದ ಗುಡಿಗಳಲ್ಲಿ ಕೊರೆದ ಚಿತ್ರಸಮೂಹಗಳೂ, ವೇರೂಳದಲ್ಲಿಯ ಅತಿ ವಿಶಾಲವಾದ ಸಭಾಮಂಟಪವೂ, ಎಲಿಫಂಟಾದೊಳಗಿನ ಭವ್ಯ ಮೂರ್ತಿಗಳೂ ಮೇಲಿನ ಮಾತಿಗೆ ಬಲವಾದ ಆಧಾರಗಳಾಗಿವೆ. ಕುತುಬುದ್ದೀನನ ಗೋರಿಯಹತ್ತರ ದಿಲ್ಲಿಯಲ್ಲಿ ನಿಲ್ಲಿಸಿದ ಲೋಹ ಸ್ತಂಭವು ಸಮುದ್ರಗುಪ್ತನ ಕಾಲಕ್ಕಿದ್ದ ಕಂಚುಗಾರರ ಕಲಾಕೌಶಲ್ಯದ ದ್ಯೋತಕವಾಗಿದೆ. ಗುಪ್ತ ಅರಸರ ಕಾಲಕ್ಕೆ ಸುಮಾತ್ರಾ, ಜಾವಾ, ಕಾಂಬೋಡಿಯಾಗಳಿಗೆ ಹಡಗಗಳು ಮೇಲಿಂದ ಮೇಲೆ ವ್ಯಾಪಾರದ ಸರಕುಗಳನ್ನು ತೆಗೆದುಕೊಂಡು ಹೋಗುತ್ತಿದ್ದವು ಸಿಯಾಮದ ಅರಸನು ಕ್ಷತ್ರಿಯನು.

(೬) ಈ ಕಾಲಕ್ಕೆ ಜನರಿಗೆ ಸಾರ್ವತ್ರಿಕ ಶಿಕ್ಷಣವು ಎಲ್ಲ ಜಾತಿಯವರಿಗೂ ಸರಿಯಾಗಿ ದೊರೆಯುತ್ತಿತ್ತೆಂದು ಹಾವೆಲ್ಲ ಎಂಬ ಇತಿಹಾಸಜ್ಞನ ಮತವು.* ನಲಂದದಲ್ಲಿ ಹುವೆನ್‌ತ್ಸಾಂಗನು ಯೋಗಶಾಸ್ತ್ರದ ಅಭ್ಯಾಸವನ್ನು ಮಾಡಿದನು. ಅಲ್ಲಿ ೧೦,೦೦೦ ಶಿಷ್ಯರೂ ಗುರುಗಳೂ ಇದ್ದರು. ವಿದ್ಯಾಪೀಠದ ವ್ಯವಸ್ಥೆಯು ಉತ್ತಮೋತ್ತಮತರದ್ದಾಗಿತ್ತು. ಈ ಎಲ್ಲ ಶಿಷ್ಯರಿಗೂ ಗುರುಗಳಿಗೂ ಧರ್ಮಾರ್ಥ ಭೋಜನವು ದೊರೆಯುತ್ತಿತ್ತು. ಅದಕ್ಕಾಗಿ ಶ್ರೀಮಂತರು ಭೂಮಿಗಳನ್ನು ಹಾಕಿಕೊಟ್ಟಿದ್ದರು.

(೭) ಕನೋಜದ ಅರಸನಾದ ಹರ್ಷವರ್ಧನನು ೬೦೬ರಿಂದ ೬೪೭ರವರೆಗೆ ಅತಿ ಪ್ರಸಿದ್ಧನಾಗಿ ಆಳಿದನು. ಇವನ ಕಾಲಕ್ಕೆ ವಿದ್ವಾಂಸರಿಗೆ ವಿಶೇಷ ಪ್ರೋತ್ಸಾಹನ

---

*E. B. Havell's Short History of India p. 101.

ವಿದ್ದದರಿಂದ ಕನೋಜದಲ್ಲಿ ಎಲ್ಲ ವಿದ್ವಾಂಸರು ನೆರೆಯುತ್ತಿದ್ದರು. ಹರ್ಷವರ್ಧನನು ಸಂಸ್ಕೃತದಲ್ಲಿ ರತ್ನಾವಳಿ, ನಾಗಾನಂದಗಳೆಂಬ ನಾಟಕಗಳನ್ನು ಬರೆದನು. ಹುವೆನ್ ತ್ಸಾಂಗನು ಇವನ ಕಾಲಕ್ಕೆ ಕನೋಜಕ್ಕೆ ಹೋಗಿ ೧೮ ದಿವಸಗಳ ವರೆಗೆ ಅಲ್ಲಿಯ ಪಂಡಿತರ ಕೂಡ ವಾದ ಮಾಡಿದನು. ಆನಂತರ ಹರ್ಷವರ್ಧನನು ಪ್ರಯಾಗದಲ್ಲಿ ಮಹೋತ್ಸವವನ್ನು ಮಾಡಿ ತನ್ನಲ್ಲಿದ್ದ ದ್ರವ್ಯವನ್ನು ಪಂಡಿತರಿಗೆ ದಾನಮಾಡಿದನು. ಇದೇ ಕಾಲಕ್ಕೆ ಅರಬಸ್ಥಾನದಲ್ಲಿ ಮಹಮ್ಮದ ಪೈಗಂಬರನು ಹುಟ್ಟಿ ಹೊಸ ಧರ್ಮದ ಪ್ರಸಾರವನ್ನು ಮಾಡಹತ್ತಿದನು.

(೮) ಬ್ರಾಹ್ಮಣ ಧರ್ಮದ ಮತಗ್ರಂಥಗಳೆಲ್ಲ ಸಂಸ್ಕೃತದಿಂದಲೇ ಬರೆಯಲ್ಪಟ್ಟಿರುವವು. ಆದರೆ ೧೪ನೇ ಶತಮಾನದ ಕೊನೆಗೆ ಆಗಿ ಹೋದ ರಾಮಾನಂದನೆಂಬುವನು ಸಂಸ್ಕೃತವನ್ನು ಬಿಟ್ಟು ಸಾಮಾನ್ಯ ಜನರಿಗೆ ತಿಳಿಯುವಂತೆ ಹಿಂದೀ ಭಾಷೆಯಲ್ಲಿಯೇ ಧರ್ಮ ಗ್ರಂಥಗಳನ್ನು ಬರೆಯಹತ್ತಿದನು. ಮತ್ತು ಶೂದ್ರರ ಕೂಡ ಅನ್ನ ವ್ಯವಹಾರವನ್ನು ಪ್ರಾರಂಭಿಸಿದನು. ಮುಸಲ್ಮಾನೀ ಧರ್ಮದ ಪ್ರವೇಶವು ಹಿಂದುಸ್ತಾನದಲ್ಲಿ ಆದದ್ದರಿಂದ ಹಿಂದು ಧರ್ಮವನ್ನು ರಕ್ಷಿಸಿಕೊಳ್ಳುವದಕ್ಕಾಗಿ ಸಾಮಾನ್ಯ ಜನರನ್ನು ಹಿಂದು ಧರ್ಮದಲ್ಲಿ ಇಟ್ಟುಕೊಳ್ಳುವದು ಅಗತ್ಯದ್ದಾಯಿತೆಂದು ತರ್ಕಿಸಬಹುದು. ಬಸವೇಶ್ವರನಿಂದ ಲಿಂಗಾಯತ ಮತವು ಇದೇ ಉದ್ದೇಶದಿಂದಲೇ ಸ್ಥಾಪಿತವಾಯಿತು. ಇದಲ್ಲದೆ ಆಗಿನ ಕಾಲದ ಅರಸರು ಬೌದ್ಧ ಜೈನ ಮತಾನುಯಾಯಿಗಳನ್ನು ಹಿಂಸೆಪಡಿಸಿದರೆಂದು ಗೊತ್ತಾಗುತ್ತದೆ. ೧೧ನೇ ಶತಕದಲ್ಲಿ ಯಾಜ್ಞವಲ್ಕ್ಯನ ಧರ್ಮಶಾಸ್ತ್ರಕ್ಕೆ ಮಿತಾಕ್ಷರವೆಂದು ಪ್ರಸಿದ್ಧವಾದ ಟೀಕೆಯನ್ನು ಬರೆದ ವಿಜ್ಞಾನೇಶ್ವರನು ಚಾಲುಕ್ಯ ವಂಶದ ೬ನೇ ವಿಕ್ರಮಾದಿತ್ಯನ ಕಾಲದಲ್ಲಿದ್ದನು. ಚೋಳ ವಂಶದ ರಾಜರಾಜದೇವನು ತಂಜಾವರದಲ್ಲಿದ್ದ ದೇವಾಲಯದಲ್ಲಿ ೧೯೦ ಫೂಟು ಎತ್ತರವಾದ ವಿಮಾನವನ್ನು ಕಟ್ಟಿಸಿದನು. ರಾಮಾನುಜನ ತತ್ವಗಳು ಬಂಗಾಲದಲ್ಲಿ ಪ್ರಸಾರವಾದವರಿಂದ ಜಯದೇವನೆಂಬ ಕವಿಯು ರಾಧಾಕೃಷ್ಣರ ಲೀಲೆಯನ್ನು ವರ್ಣಿಸುವ ಗೀತಗೋವಿಂದವನ್ನು ಬರೆದನು.

(೯) ಹಿಂದೂ ಮುಸಲ್ಮಾನರ ಒಕ್ಕಟ್ಟನ್ನು ಬೆಳೆಸುವ ಪ್ರಯತ್ನವು ಕಬೀರನಿಂದ ಪ್ರಾರಂಭವಾಯಿತು. ಬಂಗಾಲದಲ್ಲಿ ಆಗಿ ಹೋದ ಚೈತನ್ಯನು (೧೪೮೬—೧೫೩೩) ಇದೇ ಮಾರ್ಗದಿಂದ ಪ್ರಯತ್ನ ಮಾಡಿದನು. ಮುಸಲ್ಮಾನ ಬಾದಶಹರಲ್ಲಿ ಹಿಂದುಗಳೂ, ಹಿಂದು ಅರಸರಲ್ಲಿ ಮುಸಲ್ಮಾನರೂ ಮಂತ್ರಿಗಳಾಗಿ ಕೆಲಸ ಮಾಡಿದರು. ವಿಜಯನಗರದ ಸ್ಥಾಪಕರಾದ ಮಾಧವಾಚಾರ್ಯರು ಸರ್ವ ದರ್ಶನಸಂಗ್ರಹವೆಂಬ ಪುಸ್ತಕವನ್ನು ಬರೆದರು. ಅವರ ತಮ್ಮನಾದ ಸಾಯಣನು ಋಗ್ವೇದಕ್ಕೂ, ಐತರೇಯ-ಬ್ರಾಹ್ಮಣಕ್ಕೂ ಆರಣ್ಯಕಗಳಿಗೂ ಟೀಕೆಯನ್ನು ಬರೆದನು.

(೧೦) ಇನ್ನು ಬ್ರಿಟಿಶ ಆಳಿಕೆಯಲ್ಲಿ ಅನೇಕ ಹಿಂದೀ ಮುತ್ಸದ್ದಿಗಳೂ, ಧರ್ಮಸುಧಾರಕರೂ , ಕವಿಗ್ರಂಥಕಾರರೂ ಆಗಿ ಹೋಗಿರುವರು. ಅವರ ಬಗ್ಗೆ ಸಂಕ್ಷಿಪ್ತ

ವಾಗಿ ಕೆಲವು ಸಂಗತಿಗಳನ್ನು ಹೇಳುವದರಿಂದ ಬಾಲಕರಿಗೆ ಇತಿಹಾಸದ ಅಭ್ಯಾಸದಿಂದ ಆಗತಕ್ಕ ಸುಪರಿಣಾಮವಾಗದೆ ಇರದು.

## ಮುತ್ಸದ್ದಿಗಳು.

೧ ಪೂರ್ಣಯ್ಯ
೨ ಸರ. ಟಿ. ಮಾಧವರಾವ
೩ ಆರ್. ರಘುನಾಥರಾವ
೪ ಸರ ಶೇಷಾದ್ರಿ ಅಯ್ಯರ
೫ ಗೋಪಾಳಕೃಷ್ಣ ಗೋಖಲೆ
೬ ಲಾರ್ಡ ಸಿಂಹ
೭ ಸರ ಮೋಕ್ಷಗುಂಡಂ ವಿಶ್ವೇಶ್ವರಯ್ಯ
೮ ಶ್ರೀನಿವಾಸಶಾಸ್ತ್ರಿ

## ಧರ್ಮಸುಧಾರಕರೂ ಸಮಾಜಸುಧಾರಕರೂ.

೧ ದಯಾನಂದ ಸರಸ್ವತಿ
೨ ರಾಜಾರಾಮ ಮೋಹನರಾಯ
೩ ಈಶ್ವರಚಂದ್ರ ವಿದ್ಯಾಸಾಗರ
೪ ಸ್ವಾಮಿ ವಿವೇಕಾನಂದ
೫ ,, ರಾಮತೀರ್ಥ
೬ ವಿರೇಶಲಿಂಗಂ ಪಂತುಲು

## ಕವಿಗ್ರಂಥಕಾರರು.

೧ ರವೀಂದ್ರನಾಥ ಟಾಗೋರ
೨ ಸರೋಜಿನಿ ನಾಯಿಡು

## ವಿಜ್ಞಾನಶಾಸ್ತ್ರಶೋಧಕರು.

೧ ಸರ ಪ್ರಫುಲ್ಲ ಚಂದ್ರರಾಯ
೨ ,, ಜಗದೀಶಚಂದ್ರ ಬೋಸ

ಮೇಲೆ ಹೇಳಿದ ಪ್ರಸಿದ್ಧ ಜನರ ಚರಿತ್ರಗಳನ್ನು ಆಯಾ ಗವ್ಹರ್ನರ ಜನರಲ್ಲರ ಆಳಿಕೆಯ ಸಂಗಡಲೇ ಹೇಳುವದರಿಂದ ಬಾಲಕರ ದೃಷ್ಟಿಯು ಉಜ್ವಲವಾಗಿ ಅವರಲ್ಲಿ ಒಂದು ಪ್ರಕಾರದ ಚೈತನ್ಯವೂ ಸ್ಫೂರ್ತಿಯೂ ಉಂಟಾಗುವವು.

# ೧೭. ಸಾಕ್ರೆಟೀಸನ ಮತ್ತು ಹರ್ಬರ್ಟ್‍ನ ಪದ್ಧತಿಗಳು.

## ೧. ಸಾಕ್ರೆಟೀಸನ ಪದ್ಧತಿ.

ಅ. ಸಾಕ್ರೆಟೀಸನು ಪ್ರಾಚೀನ ಕಾಲದಲ್ಲಿ ಗ್ರೀಸದೇಶದ ಅತಿ ಪ್ರಸಿದ್ಧನಾದ ತತ್ವಜ್ಞಾನಿಯು. ಇವನು ಕ್ರಿಸ್ತಿಶಕಕ್ಕಿಂತ ಮೊದಲು ೪೬೯ ನೇ ವರ್ಷದಲ್ಲಿ ಅಥೆನ್ಸ ಪಟ್ಟಣದಲ್ಲಿ ಹುಟ್ಟಿದನು. ಇವನು ಗ್ರಂಥಗಳನ್ನು ಬರೆದಿಡದಿದ್ದರೂ ಇವನ ಶಿಷ್ಯರಾದ ಪ್ಲೇಟೊ, ಝೆನೊಫೋನರು ಇವನ ಉಪದೇಶಗಳನ್ನು ಒಟ್ಟುಗೂಡಿಸಿ ಬರೆದಿಟ್ಟಿದ್ದಾರೆ. ಅಥೆನ್ಸದಲ್ಲಿ ಸಾಕ್ರೆಟೀಸನು ಮೇಲಿಂದ ಮೇಲೆ ಅನೇಕ ವಿಷಯುಗಳ ಬಗ್ಗೆ ಅಂದರೆ ಮಿತ್ರಭಾವ, ಧೈರ್ಯ ಮೊದಲಾದ ಸದ್ಗುಣಗಳ ವಿಷಯಕ್ಕೆ ವಾದವಿವಾದ ಮಾಡುತ್ತಿದ್ದನು. ಅವನ ಸುತ್ತಲೂ ಅನೇಕ ವಿಷಯುಗಳಲ್ಲಿ ಪ್ರವೀಣರಾದ ಪ್ರೌಢ ಜನರೇ ಸೇರೆಯುತ್ತಿದ್ದರು. ಅವರಿಗೆ ಅನೇಕ ಪ್ರಶ್ನಗಳನ್ನು ಮಾಡಿ ಅವರ ಜ್ಞಾನವು ಎಷ್ಟು ಅಲ್ಪವಾಗಿರುವದೆಂಬದನ್ನು ಮನವರಿಕೆ ಮಾಡುತ್ತಿದ್ದನು.

### ಬ. ಸಾಕ್ರೆಟೀಸನ ಪ್ರಶ್ನಗಳು—

ಆ ಪ್ರಶ್ನಗಳು ಎರಡು ಪ್ರಕಾರದವು ಇರುತ್ತಿದ್ದವು. (೧) ನಕಾರಾರ್ಥಕ ಅಥವಾ ವ್ಯಾಜೋಕ್ತಿಯ ಪ್ರಶ್ನ (೨) ಏಕೀಕರಣದ ಅಥವಾ ನಿಗಮನ ಪದ್ಧತಿಯ ಪ್ರಶ್ನ.

ಮೊದಲನೇ ಪ್ರಕಾರದ ಪ್ರಶ್ನೆಯು ಅಲ್ಪಜ್ಞಾನಿಗಳ ಅಹಂಕಾರವನ್ನು ಕಡಿಮೆ ಮಾಡುವದಕ್ಕಾಗಿ ಅವನಿಂದ ಉಪಯೋಗಿಸಲ್ಪಡುತ್ತಿತ್ತು. ಈ ಪದ್ಧತಿಯು ಬಾಲಕರ ಶಿಕ್ಷಣದಲ್ಲಿ ಅನುಪಯುಕ್ತವು.

ಎರಡನೇ ಪ್ರಕಾರದ ಪ್ರಶ್ನೆಯು ಮಾನಸಿಕ ಶಿಕ್ಷಣದ ವಿಷಯದಲ್ಲಿ ಬಹಳ ಮಹತ್ವವಾದದ್ದು. ಯಾಕೆಂದರೆ ಇದರಿಂದ (೧) ಬಾಲಕನು ತತ್ವವನ್ನು ತಾನೇ ಕಂಡುಹಿಡಿಯುವನು. (೨) ಪಾಠದ ವಿಷಯವನ್ನು ಲಕ್ಷಪೂರ್ವಕವಾಗಿ ಚನ್ನಾಗಿ ತಿಳಿದುಕೊಂಡು ಅದನ್ನು ಪೃಥಃಕರಣ ಮಾಡುವನು. (೩) ಬಾಲಕರ ಜ್ಞಾನವು ಹಿಂದು ಮುಂದಿನವುಗಳಿಗೆ ಸಂಬಂಧವುಳ್ಳದ್ದಾಗುವದು.

ಈ ಎರಡನೇ ಪ್ರಕಾರದ ಪ್ರಶ್ನ ಪದ್ಧತಿಗೆ ಸಾಕ್ರೆಟೀಸನ ಪದ್ಧತಿ ಎಂಬ ಹೆಸರು.

## ೨. ಹರ್ಬರ್ಟ್‍ನ ಪದ್ಧತಿ.



ಜೋಹಾನ್ ಫ್ರೆಡ್ರರಿಕ್ ಹರ್ಬರ್ಟ ನೆಂಬುವನು ಜರ್ಮನಿಯ ತತ್ವಜ್ಞಾನಿಯೂ, ಶಿಕ್ಷಣ ಸುಧಾರಕನೂ ಆಗಿದ್ದನು. ಅವನು ಓಲ್ಡೆನ್‌ಬರ್ಗ ಎಂಬ ಗ್ರಾಮದಲ್ಲಿ ೧೭೭೬

ರಲ್ಲಿ ಹುಟ್ಟಿದನು. ಜೆನ್ನಾದಲ್ಲಿ ತತ್ವಜ್ಞಾನದ ಅಭ್ಯಾಸವನ್ನು ಮಾಡಿದನು. ಕೋನಿಂಗ್ಸ ಬರ್ಗದ ವಿಶ್ವವಿದ್ಯಾಲಯದಲ್ಲಿ ೧೮೦೯ ರಲ್ಲಿ ಪ್ರೊಫೆಸರನಾದನು. ಮತ್ತು ೧೮೩೩ ರಲ್ಲಿ ಗಾಟಿಂಜನ್ನದ ವಿಶ್ವವಿದ್ಯಾಲಯಕ್ಕೆ ಹೋದನು. ಅಲ್ಲಿ ಅವನು ಎಂಟು ವರ್ಷಗಳ ನಂತರ ತೀರಿಕೊಂಡನು. ಅವನು "ಶಿಕ್ಷಣ ಶಾಸ್ತ್ರವೂ ಶಿಕ್ಷಣ ಪದ್ಧತಿಯೂ" ಎಂಬ ಪುಸ್ತಕವನ್ನು ಬರೆದಿದ್ದಾನೆ. ಆ ಪುಸ್ತಕದೊಳಗಿನ ಕೆಲವು ಮಹತ್ವದ ಸಂಗತಿಗಳನ್ನು ಕೆಳಗೆ ಹೇಳಿದ್ದೇವೆ.

೧. Apperception:—ಅಂದರೆ ಕಲ್ಪನೆಗಳ ಅನ್ಯೋನ್ಯ ಸಂಬಂಧ. ಚಿಕ್ಕ ಮಕ್ಕಳಿಗೆ ಕೊಡುವಂಥ ಹೊಸ ಜ್ಞಾನವು ಅವರಿಗೆ ಗೊತ್ತಿದ್ದಂಥ ಜ್ಞಾನಕ್ಕೆ ಸಂಬಂಧಿಸಿದ್ದು ಇರಬೇಕು. ಆದದರಿಂದ ಆರಂಭದಲ್ಲಿ ಕಲಿಸತಕ್ಕ ಪಾಠದ ವಿಷಯಕ್ಕೆ ಬಾಲಕರಿಗೆ ಏನು ಗೊತ್ತದೆಂಬದನ್ನು ಪ್ರಶ್ನಗಳ ಮೂಲಕ ತಿಳಿದುಕೊಳ್ಳಬೇಕು.

೨. Correlation :—ಅಂದರೆ ವಿಷಯಗಳ ಅನ್ಯೋನ್ಯ ಸಂಬಂಧ. ಶಾಲೆಯಲ್ಲಿ ಕಲಿಸತಕ್ಕ ಅನೇಕ ವಿಷಯಗಳನ್ನು ಒಂದಕ್ಕೊಂದು ಸಂಬಂಧಿಸಿ ಕಲಿಸಬೇಕು. ಉದಾ:—ವಾಚನ, ವ್ಯಾಕರಣ, ಶುದ್ಧಬರಹ ಈ ವಿಷಯಗಳನ್ನು ಒಂದಕ್ಕೊಂದು ಸಂಬಂಧಿಸಿ ಕಲಿಸಬಹುದು. ಇತಿಹಾಸವನ್ನು ಕಲಿಸುವಾಗ ಭೂಗೋಲದ ಸಂಗತಿಗಳನ್ನು ತಿಳಿದುಕೊಳ್ಳುವದರಿಂದ ಐತಿಹಾಸಿಕ ಕಲ್ಪನೆಗಳು ಸ್ಪಷ್ಟವಾಗುವವು. ಗಣಿತ, ಡ್ರಾಯಿಂಗ ಮತ್ತು ಶಾಸ್ತ್ರೀಯ ವಿಷಯಗಳನ್ನು ಇದರಂತೆ ಒಂದಕ್ಕೊಂದು ಸಂಬಂಧಿಸಿ ಕಲಿಸಬೇಕು.

೩. **ಹರ್ಬರ್ಟನ ಐದು ಮೆಟ್ಟಲುಗಳು**:–೧. ಪಾಠದ ಸಿದ್ಧತೆ. ೨. ಹೊಸ ಕಲ್ಪನೆಗಳನ್ನು ಬಾಲಕರ ಮುಂದಿಡುವದು. ೩. ಹಿಂದೆ ಗೊತ್ತಿದ್ದ ಕಲ್ಪನೆಗಳಿಗೆ ಹೊಂದಿಸಿ ಹೊಸ ಕಲ್ಪನೆಗಳ ಸಂಬಂಧವನ್ನು ಸ್ಪಷ್ಟಮಾಡುವದು. ೪. ಸಾಮಾನ್ಯ ವಿವೇಚನ. ೫. ಪಾಠದಲ್ಲಿ ಕಲಿತ ತತ್ವಗಳನ್ನು ಹೊಸ ಉದಾಹರಣೆಗಳಿಗೆ ಹಚ್ಚಿ ತೋರಿಸುವದು.

ಪ್ರಾಸ್ತಾವಿಕ ಪ್ರಶ್ನೆಗಳಿಂದ ಕಲಿಸತಕ್ಕ ಹೊಸ ಪಾಠದ ವಿಷಯಕ್ಕೆ ಬಾಲಕರ ಮನಸ್ಸನ್ನು ಸಿದ್ಧಮಾಡುವರು. ಅಂದರೆ, ಅವರ ಲಕ್ಷವು ಪಾಠದ ವಿಷಯಕ್ಕೆ ಸಂಬಂಧಿಸಿದ ಜ್ಞಾನದ ಕಡೆಗೆ ಸಹಜವಾಗಿ ಹೋಗುವರು. ಆನಂತರ ಒಂದೊಂದಾಗಿ ಹೊಸ ಕಲ್ಪನೆಗಳನ್ನು ಅವರ ಮುಂದಿಡುವರು. ಹಳೇ ಕಲ್ಪನೆಗಳಿಗೆ ಹೊಸ ಕಲ್ಪನೆಗಳನ್ನು ಸಂಬಂಧಮಾಡಿಕೊಡುವಾಗ ಉದಾಹರಣೆ, ದೃಷ್ಟಾಂತ, ತುಲನೆ ಮೊದಲಾದ ಮೆಟ್ಟಿಗಳನ್ನು ಉಪಯೋಗಿಸಬೇಕು. ನಾಲ್ಕನೇ ಮೆಟ್ಟಿನಲ್ಲಿ, ಕಲಿಸಿದಂಥ ಸಂಗತಿಗಳ ಇಲ್ಲವೆ ತತ್ವಗಳ ಸಾರಾಂಶವನ್ನು ಪ್ರಶ್ನಗಳಿಂದ ಕೇಳಬೇಕು. ಮತ್ತು ಕಡೆಯ ಮೆಟ್ಟಿನಲ್ಲಿ ಬಾಲಕರು ಪಾಠದಲ್ಲಿ ದೊರಕಿಸಿದ ಜ್ಞಾನದ ಉಪಯೋಗವನ್ನು ಹೊಸ ಉದಾಹರಣೆಗಳಿಗೆ ಸರಿಯಾಗಿ ಹಚ್ಚಿ, ತೋರಿಸುವರು. ಉದಾಹರಣಾರ್ಥ:–ಗಣಿತದಲ್ಲಿ ಉದಾಹರ

ಣೆಗಳನ್ನು ಬಿಡಿಸುವದು. ವ್ಯಾಕರಣದಲ್ಲಿಯು ವ್ಯಾಖ್ಯೆಗಳಂತೆ ವ್ಯಾಕರಣ ಮಾಡುವದು. ಅಥವಾ ತೋಂಡಿ ಅಥವಾ ಲೇಖಿ ಪ್ರಶ್ನಗಳಿಂದ ವಿಷಯದ ಜ್ಞಾನವು ಎಷ್ಟರಮಟ್ಟಿಗೆ ಆಗಿದೆಂಬದನ್ನು ತಿಳಿದುಕೊಳ್ಳುವದು.

---

## ೧೮. ಕಿಂಡರಗಾರ್ಟನ ಪದ್ಧತಿ.



ಕಿಂಡರ ಗಾರ್ಟನ ಪದ್ಧತಿಯು ಜನಕನು ಫ್ರೊಬೆಲ್ಲನಾಗಿದ್ದರೂ ಅದರ ಮೂಲ ತತ್ತ್ವಗಳನ್ನು ಕಂಡುಹಿಡಿದ "ಜೊಹಾನ್ ಹೆನ್ರಿಕ್ ಪೆಸ್ಟಲಾಜಿ" ಎಂಬ ಸ್ವಿತ್ಸರ್ಲಂಡದ ಶಿಕ್ಷಣ ಸುಧಾರಕನ ವಿಷಯಕ್ಕೆ ಕೆಲವು ಸಂಗತಿಗಳನ್ನು ತಿಳಿದುಕೊಳ್ಳುವದು ಅವಶ್ಯವದೆ.

೧. **ಪೆಸ್ಟಲಾಜಿ**:—( ೧೭೪೬–೧೮೨೭ ) ಇವನು ಚಿಕ್ಕವನಿದ್ದಾಗಲೇ ತನ್ನ ಪರಗಣೆಯಲ್ಲಿದ್ದ ಒಕ್ಕಲಿಗರ ಸ್ಥಿತಿಯನ್ನು ಸುಧಾರಿಸಬೇಕೆಂದೂ, ಅವರ ಮಕ್ಕಳಿಗೆ ಸರಿಯಾದ ಶಿಕ್ಷಣ ಕೊಡಬೇಕೆಂದೂ ಒಂದು ಶಾಲೆಯನ್ನು ತೆಗೆದನು. ಮೊದಲು ೨೦ ವಿದ್ಯಾರ್ಥಿಗಳು ಕೂಡಿದರು. ಅವರನ್ನು ತನ್ನ ಮಕ್ಕಳಂತೆ ತನ್ನ ಮನೆಯಲ್ಲಿಯೇ ಇಟ್ಟುಕೊಂಡು ಅವರಿಗೆ ತನ್ನ ತೋಟದಲ್ಲಿ ಕೆಲಸಕೊಟ್ಟು ಅವರ ಶಿಕ್ಷಣವನ್ನು ಸಾಗಿಸುತ್ತಿದ್ದನು. ಕೆಲಸದ ಕಾಲವು ಬೇರೆ, ಶಾಲೆಯ ವೇಳೆಯು ಬೇರೆ ಹೀಗೇನೂ ಇದ್ದಿಲ್ಲ. ವಿದ್ಯಾರ್ಥಿಗಳ ಸಂಖ್ಯೆಯು ಕ್ರಮೇಣ ಬೆಳೆದದರಿಂದ "ಪೆಸ್ಟಲಾಜಿಯು" ಬೇರೆ ಕೆಲವು ಶಿಕ್ಷಕರನ್ನು ನೇಮಿಸಿಕೊಂಡನು. ಆದರೆ ಜನಸಹಾಯವಿಲ್ಲದ್ದರಿಂದ ಅವನಿಗೆ ಹಣದ ಕೊರತೆಯುಂಟಾಗಿ ಅವನು ಈ ಶಾಲೆಯನ್ನು ೧೭೮೦ ರಲ್ಲಿ ಬಂದು ಮಾಡಬೇಕಾಯಿತು. ಬಡತನದ ಮೂಲಕ ಮುಂದೆ ೧೮ ವರ್ಷಗಳವರೆಗೆ ಅವನು ಬಹಳ ಪೇಚಾಡಬೇಕಾಯಿತು. ಈ ಅವಧಿಯಲ್ಲಿ ಅವನು ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಪುಸ್ತಕಗಳನ್ನೂ ಕಾದಂಬರಿಗಳನ್ನೂ ಬರೆದನು. ಅವುಗಳಲ್ಲಿ ತನ್ನ ವಿಚಾರವನ್ನು ಜನರಿಗೆ ಸ್ಪಷ್ಟವಾಗಿ ತಿಳಿಸಿದನು. ೧೭೯೯ ರಲ್ಲಿ ಮತ್ತೆ "ವ್ಹರಡೂನ" (ಸ್ವಿತ್ಸರ್ಲಂಡ) ಎಂಬ ಗ್ರಾಮದಲ್ಲಿ ಮತ್ತೆ ಶಾಲೆಯನ್ನು ಆರಂಭಿಸಿದನು. ಈ ಶಾಲೆಯಲ್ಲಿ ೨೦೦ ವಿದ್ಯಾರ್ಥಿಗಳಿದ್ದು ಬೇರೆ ಬೇರೆ ದೇಶಗಳಿಂದ ಅನೇಕ ಶಿಕ್ಷಕರೂ ಪ್ರೇಕ್ಷಕರೂ ಇದನ್ನು ನೋಡಲಿಕ್ಕೆ ಬರುತ್ತಿದ್ದರು. ಆದರೆ ಪೆಸ್ಟಲಾಜಿಯಲ್ಲಿ ಆಳಿಕೆಯ ಸಾಮರ್ಥ್ಯವು ಕಡಿಮೆ ಇದ್ದದರಿಂದಲೂ ಹಣದ ಕೊರತೆಯಾದದರಿಂದಲೂ ಈ ಪ್ರಯೋಗವು ಸಾಕಷ್ಟು ಯಶಸ್ವಿಯಾಗಲಿಲ್ಲ. ಮುಂದೆ ೧೮೨೭ ರಲ್ಲಿ ಇವನು ೮೧ ವರ್ಷದವನಾಗಿ ತೀರಿಕೊಂಡನು. ಇವನ "ವ್ಹರಡೂನ"ದ ಶಾಲೆಯನ್ನು ನೋಡಲಿಕ್ಕೆ ಪ್ರಸಿದ್ಧ ಶಿಕ್ಷಣ ಸುಧಾರಕರಾದ ಹರ್ಬರ್ಟ ಮತ್ತು ಫ್ರೊಬೆಲ್ ಇವರು ಹೋಗಿದ್ದರು. ಶಿಕ್ಷಣವನ್ನು ಜನಪ್ರಿಯವಾಗಿ ಮಾಡುವಂತೆ ಆಸ್ಥೆಯಿಂದ ಪ್ರಯತ್ನಮಾಡಿದವರಲ್ಲಿ ಇವನೇ ಮೊದಲನೆಯವನು.

ವಿದ್ಯಾರ್ಥಿಗಳು ತಮ್ಮ ಅನುಭವದಿಂದ ಹೊಸ ಸಂಗತಿಗಳನ್ನು ಕಲಿಯಬೇಕೆಂಬ ತತ್ವವು ಇವನಿಗೆ ಮಾನ್ಯವಾಗಿತ್ತು. ಮತ್ತು ಶಿಕ್ಷಣದ ಧ್ಯೇಯವು ಎಲ್ಲ ಮಾನವ ಶಕ್ತಿಗಳ ಸುಸಂಬದ್ಧವಾದ ಮತ್ತು ಏಕಕಾಲೀನವಾದ ಪ್ರಗತಿಯು ಎಂಬದನ್ನು ಇವನು ಸಾರುತ್ತಿದ್ದನು.

೨. **ಫ್ರೆಡ್ರರಿಕ್ ಫ್ರೊಬೆಲ್**:—ಕಿಂಡರ ಗಾರ್ಟನ ಪದ್ಧತಿಯ ಜನಕನಾದ ಫ್ರೊಬೆಲ್‌ನು ಜರ್ಮನಿಯ ಒಂದು ಹಳ್ಳಿಯಲ್ಲಿ ೧೭೮೨ ರಲ್ಲಿ ಜನ್ಮತಾಳಿದನು. ಇವನು ೯ ತಿಂಗಳದವನಿರುವಾಗಲೇ ಇವನ ತಾಯಿಯು ತೀರಿದಳು. ಆದುದರಿಂದ ಇವನ ತಂದೆಯು ಇವನನ್ನು ಹೇಗಾದರೂ ದೊಡ್ಡವನನ್ನು ಮಾಡಿದನು. ಹನ್ನೊಂದು ವರ್ಷದವನಾದಮೇಲೆ ಇವನ ಸೋದರಮಾವನು ಇವನನ್ನು ತನ್ನ ಊರಿಗೆ ಕರಕೊಂಡು ಹೋಗಿ ಇವನನ್ನು ಶಾಲೆಗೆ ಹಾಕಿದನು. ಶಾಲೆಯಲ್ಲಿಯ ಅಭ್ಯಾಸವು ಇವನಿಗೆ ಸೇರದ್ದರಿಂದ ಇವನು ದಡ್ಡನೆಂದು ತಿಳಿದುಕೊಂಡರು. ೧೫ ವರ್ಷದವನಾದ ಮೇಲೆ ಇವನಿಗೆ ಜಂಗಲಖಾತೆಯಲ್ಲಿ ಒಂದು ಸಣ್ಣ ಚಾಕರಿಯನ್ನು ಕೊಡಿಸಿದರು. ಎರಡು ವರ್ಷಗಳ ವರೆಗೆ ಇವನು ಅಡವಿಯಲ್ಲಿ ತಿರುಗುತ್ತ ನಿರೀಕ್ಷಣ ಸಾಮರ್ಥ್ಯವನ್ನು ಬೆಳಸಿಕೊಂಡನು. ಈ ಚಾಕರಿಯನ್ನು ಬಿಟ್ಟ ಮೇಲೆ “ಜೆನ್ನಾ”ದ ವಿಶ್ವವಿದ್ಯಾಲಯದಲ್ಲಿ ಕೆಲವು ಕಾಲ ಅಭ್ಯಾಸಮಾಡಿದನು. ಮುಂದೆ ಫ್ರ್ಯಾಂಕ ಫರ್ಟ (ಜರ್ಮನಿ) ಎಂಬಲ್ಲಿ ಒಂದು ಶಾಲೆಯನ್ನು ತೆಗೆದನು. ಇಲ್ಲಿ ಎರಡು ವರ್ಷ ಕೆಲಸಮಾಡಿದ ಮೇಲೆ ಸರಿಯಾದ ಶಿಕ್ಷಣವನ್ನು ಕೊಡಲಿಕ್ಕೆ ತನ್ನಲ್ಲಿ ಹೆಚ್ಚಿನ ಯೋಗ್ಯತೆಯುಂಟಾಗಬೇಕೆಂದು ಎಣಿಸಿ, ಸ್ವರಡೂನಕ್ಕೆ ಹೋಗಿ ಪೆಸ್ಟಲಾಚಿಯ ಶಾಲೆಯಲ್ಲಿ ಉಪಶಿಕ್ಷಕನಾದನು. ಅಲ್ಲಿ ೧೮೦೭-೧೧ ರ ವರಿಗೆ ಕೆಲಸಮಾಡಿ ಮತ್ತೆ ಹೆಚ್ಚಿನ ಅಭ್ಯಾಸಕ್ಕಾಗಿ ಗಾಟಿಂಜೆನ್ ಮತ್ತು ಬರ್ಲಿನ ಪಟ್ಟಣಗಳಿಗೆ ಹೋದನು. ೧೮೧೬ ರಲ್ಲಿ “ಗ್ರೀಶಮ್” ಎಂಬಲ್ಲಿ ಒಂದು ಶಾಲೆಯನ್ನು ಸ್ಥಾಪಿಸಿದನು. ಸ್ವಲ್ಪ ದಿವಸಗಳಲ್ಲಿ ಶಾಲೆಯನ್ನು ಈ“ಕೀಲೋ” ಪಟ್ಟಣಕ್ಕೆ ಒಯ್ದನು. ಅಲ್ಲಿ ೧೫ ವರ್ಷಗಳವರೆಗೆ ತನ್ನ ಹೊಸ ಪದ್ಧತಿಯಂತೆ ಬಾಲಕರಿಗೆ ಶಿಕ್ಷಣವನ್ನು ಕೊಟ್ಟನು. ಅವನ ಪ್ರಯೋಗದ ಯಶಸ್ವಿತೆಯನ್ನು ಆ ದೇಶದಲ್ಲಿಯ ಜನರು ಕೇಳಿ ಇವನ ಶಾಲೆಯನ್ನು ನೋಡಲಿಕ್ಕೆ ಬರಹತ್ತಿದರು. ೧೮೨೬ ರಲ್ಲಿ ಇವನು ಎಜ್ಯುಕೇಶನ್ ಆಫ್ ಮ್ಯಾನ್ (Education of Man) ಎಂಬ ಪುಸ್ತಕವನ್ನು ಬರೆದನು. ಇದರಲ್ಲಿ ಎಲ್ಲ ಮಾನಸಿಕ ಶಕ್ತಿಗಳನ್ನು ಏಕಕಾಲಕ್ಕೆ ಅಭಿವೃದ್ಧಿಗೊಳಿಸುವದೇ ಶಿಕ್ಷಣದ ಮುಖ್ಯಕಾರ್ಯವು. ಎಂದು ಪ್ರತಿಪಾದಿಸಿದನು. ಮುಂದೆ ಕೀಲೋದಲ್ಲಿ ನಡೆದ ಶಾಲೆಯ ಉಪಶಾಖೆಗಳನ್ನು ಸುತ್ತಲಿನ ನಾಲ್ಕು ಸ್ಥಳಗಳಲ್ಲಿ ಆರಂಭಿಸಬೇಕೆಂದು ಪ್ರಯತ್ನಮಾಡಿದನು. ವಿಶ್ರಾಂತಿಗಾಗಿ ಇವನು ಸ್ವಿತ್ಸರ್ಲಂಡದಲ್ಲಿ ಕೆಲವು ಕಾಲ ಕಳೆದು ೧೮೩೭ರಲ್ಲಿ ಕೀಲೋದ ಹತ್ತರ ಬ್ಲ್ಯಾಕೆನ್‌ಬರ್ಗದಲ್ಲಿ ತನ್ನ ಮೊದಲನೇ ಕಿಂಡರ ಗಾರ್ಟನ್ ಶಾಲೆಯನ್ನು ಪ್ರಾರಂಭಿಸಿದನು. ಮತ್ತು ತನ್ನ ಶಿಕ್ಷಣದ ತತ್ವಗಳನ್ನು ಜನರಿಗೆ

ತಿಳಿಸುವದಕ್ಕಾಗಿ ಒಂದು ಸಾಪ್ತಾಹಿಕ ಪತ್ರವನ್ನು ಪ್ರಸಿದ್ಧಮಾಡಹತ್ತಿದನು. ಮತ್ತು ಜರ್ಮನಿಯ ದೊಡ್ಡ, ದೊಡ್ಡ ಪಟ್ಟಣಗಳಲ್ಲಿ ವ್ಯಾಖ್ಯಾನಗಳನ್ನು ಕೊಡಹತ್ತಿದನು. ಶಿಕ್ಷಕರ ಸಲುವಾಗಿ "ಬ್ಲ್ಯಾಕನ್‌ಬರ್ಗ"ದಲ್ಲಿ ಒಂದು ಹೊಸ ವರ್ಗವನ್ನು ಪ್ರಾರಂಭಿಸಿದನು. ಆದರೆ ಹಣದ ಕೊರತೆಯ ಮೂಲಕ ಇವನ ಸಂಸ್ಥೆಗಳು ೮ ವರ್ಷಗಳವರೆಗೆ ಮಾತ್ರ ನಡೆದವು. ೧೮೪೮ ರಲ್ಲಿ ಮೀನಿಂಜನದ "ಡಚಸಗಳು" (ದೇಸಾಯಿಣಿಯರು) ಇವನನ್ನು ಕರೆದು ಕಿಂಡರಗಾರ್ಟನದ ಶಾಲೆಯನ್ನು ಸ್ಥಾಪಿಸಲಿಕ್ಕೆ ಉತ್ತೇಜನ ಕೊಟ್ಟಳು. ಇಲ್ಲಿ ಅವನಿಗೆ ಮತ್ತೊಬ್ಬ "ಬ್ಯಾರೊನೆಸ ಮ್ಯಾರಿನ್ ಹೊಲ್ಜ ಬುಲೋ" ಎಂಬ ಪ್ರಸಿದ್ಧ ಹೆಣ್ಣುಮಗಳ ಪರಿಚಯವಾಯಿತು. ಅವಳು ಫ್ರೊಬೆಲ್‌ನ ಚರಿತ್ರವನ್ನು ಬರೆದಿಟ್ಟಿದ್ದಾಳೆ. ಈ ಚರಿತ್ರದಿಂದ ಫ್ರೊಬೆಲ್‌ನ ವಿಷಯಕ್ಕೂ ಅವನ ಪದ್ಧತಿಯ ವಿಷಯಕ್ಕೂ ಅನೇಕ ಸಂಗತಿಗಳು ಗೊತ್ತಾಗಿವೆ. ಇವನ ಶಾಲೆಗಳಲ್ಲಿ ನಡೆದ ಶಿಕ್ಷಣ ಪದ್ಧತಿಯು ಜರ್ಮನ ಸರಕಾರದವರಿಗೆ ಸೇರದ್ದರಿಂದ ಇಂಥ ಶಾಲೆಗಳನ್ನು ತೆಗೆಯ ಬಾರದೆಂದು ಕಟ್ಟಪ್ಪಣೆ ಮಾಡಿದರು. ಇವನ ಶಾಲೆಯಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳಿಗೆ ಇವನು ಸ್ವಾತಂತ್ರ್ಯವನ್ನು ಕೊಡುತ್ತಿದ್ದದ್ದು ಅವರು ದೊಡ್ಡವರಾದ ಮೇಲೆ ವಿಸಾದರೂ ಕೇಡಿಗೆ ಕಾರಣವಾಗಬಹುದೆಂದು ತಿಳಿದು ಈ ತರದ ಅಪ್ಪಣೆ ಮಾಡಿದಂತೆ ತೋರುತ್ತದೆ. ತಾನು ಇಷ್ಟು ಕಷ್ಟಪಟ್ಟು ನಡಿಸಿದಂಥ ಸಂಸ್ಥೆಗಳನ್ನು ಸರಕಾರದವರ ಅಪ್ಪಣೆಯ ಮೇರೆಗೆ ಬಂದು ಮಾಡಬೇಕೆಂಬುದು ಫ್ರೊಬೆಲ್ಲನಿಗೆ ಪರಮಾವಧಿ ದುಃಖವನ್ನುಂಟು ಮಾಡಿತು. ಅವನು ಇದರಿಂದಲೇ ಎದೆಯೊಡಕೊಂಡು ೧೮೫೨ನೇ ಇಸವಿಯ ಜೂನ ೨೧ನೇ ತಾರೀಖಿನ ದಿವಸ ತೀರಿಕೊಂಡನು. ಇವನ ಗೋರಿಯ ಮೇಲೆ ಇವನ ೨ನೇ ಗಿಫ್ಟಿನ ಚಿನ್ಹಗಳಾದ ಘನ, ಸಿಲಿಂದರ ಗೋಲ, ಇವುಗಳನ್ನು ಇವನ ಪದ್ಧತಿಯ ಸ್ಮಾರಕಕ್ಕಾಗಿ ಇಟ್ಟಿದ್ದಾರೆ.

## ೩ ಕಿಂಡರಗಾರ್ಟನ್ನದ ಸಾಮಾನ್ಯ ತತ್ವಗಳು.

ಕಿಂಡರಗಾರ್ಟನ್ ಎಂಬುದು ಜರ್ಮನ ಭಾಷೆಯ ಶಬ್ದವು. ಅದರ ಅರ್ಥವು "ಬಾಲಕರ ಉದ್ಯಾನ" ಅಂದರೆ ತೋಟದಲ್ಲಿ ವನಸ್ಪತಿಗಳನ್ನು ಜೋಕೆಮಾಡಿ ಬೆಳಿಸುವಂತೆ ಮಕ್ಕಳನ್ನು ಜೋಕೆಮಾಡಿ ಬೆಳಿಸುವಂಥ ಸ್ಥಳವು ಎಂದು ಆಗುವದು. ಜ್ಞಾನವನ್ನು ಸಂಗ್ರಹಿಸುವದಕ್ಕಿಂತ ಮಾನಸಿಕ ಶಕ್ತಿಗಳನ್ನು ವಿಕಾಸಪಡಿಸುವದೇ ಈ ಪದ್ಧತಿಯ ಮುಖ್ಯೋದ್ದೇಶವು. ಈ ಉದ್ದೇಶವನ್ನು ಸಾಧಿಸಲಿಕ್ಕೆ ಬೇರೆ, ಬೇರೆ ಪ್ರಕಾರದ ಆಟಗಳನ್ನೂ ಉಪಕರಣಗಳನ್ನೂ ಫ್ರೊಬೆಲ್‌ನು ರಚಿಸಿದ್ದಾನೆ. ಅವುಗಳಿಗೆ "ಗಿಫ್ಟ" (ವ್ಯವಸಾಯ) ಎಂಬ ಹೆಸರು. ಈ ಗಿಫ್ಟಗಳನ್ನು ಯಾವ ತತ್ವಗಳಿಗೆ ಅನುಸಾರವಾಗಿ ರಚಿಸಿದನೋ ಆ ತತ್ವಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ಹೇಳಿದೆ.

೧. ಶಿಕ್ಷಕರು ಬಾಲಕರ ಸ್ವಭಾವವನ್ನು ಚನ್ನಾಗಿ ಅಭ್ಯಾಸಿಸಿ ಮನಸ್ಸಿನ ವಿಕಾಸದ ನಿಯಮಗಳನ್ನು ಗೊತ್ತುಮಾಡಿಕೊಂಡು ಶಿಕ್ಷಣವನ್ನು ಪ್ರಾರಂಭಿಸಬೇಕು.

೩. ಬಾಲಕರ ಸ್ವಾಭಾವಿಕ ಚಟುವಟಿಕೆಯಿಂದ ಅವರ ಶಕ್ತಿಗಳೂ ಅವಯುವಗಳೂ ಬಲಪಡಬೇಕು. ಅವರ ಸ್ವಾಭಾವಿಕ ಚಟುವಟಿಕೆಯೆಂದರೆ ಆಟಗಳು. ಆದುದರಿಂದ ಪ್ರಾಥಮಿಕ ಶಿಕ್ಷಣದ ಆರಂಭದ ಮೆಟ್ಟಿನಲ್ಲಿ ಆಟವೇ ಪ್ರಾಧಾನ್ಯ ವಿಷಯವು. ಘನಗಳಿಂದ ಮನೆಕಟ್ಟುವದು, ಮಣಿಗಳನ್ನು ಪೋಣಿಸುವದು, ಹಾಡುವದು, ಡ್ರಿಲ್ ಮಾಡುವದು ಇವುಗಳಿಂದ ಬಾಲಕರಿಗೆ ಶಿಕ್ಷಣವು ದೊರೆಯುವಂತೆ ಮಾಡುವದು.

೩. ಸುಖವು ಬಾಲಕರ ಅಭಿವೃದ್ಧಿಗೆ ಅವಶ್ಯವಾದದ್ದು. ಆದುದರಿಂದ ಆನಂದದಾಯಕವಾದ ವ್ಯವಸಾಯಗಳೇ ಈ ಶಿಕ್ಷಣದ ಮುಖ್ಯ ಅಂಗಗಳು.

೪. ಒಂದೇ ವಿಷಯದ ಕಡೆಗೆ ಚಿಕ್ಕಮಕ್ಕಳು ಹೆಚ್ಚುಹೊತ್ತು ಲಕ್ಷ್ಯಕೊಡಲಾರರು. ಆದುದರಿಂದ ಪಾಠಗಳು ಸ್ವಲ್ಪವೇಳೆಯಲ್ಲಿ ಮುಗಿಯುವಂತಹವಿರಬೇಕು.

೫. ಬಾಲಕರ ಶಾರೀರಕ, ಮಾನಸಿಕ, ನೈತಿಕ ಶಕ್ತಿಗಳು ಸರಿಯಾಗಿ ಬಲಪಡುವಂತೆ ಶಿಕ್ಷಣವನ್ನು ಕೊಡಬೇಕು.

೬. ಬಾಲಕರಿಗೆ ಸಾಮಾಜಿಕ ಕರ್ತವ್ಯಗಳು ಗೊತ್ತಾಗುವಂತೆ ಕಿಂಡರಗಾರ್ಟನ್‌ದ ಆಟಗಳನ್ನು ರಚಿಸಬೇಕು. ಈ ಗಿಫ್ಟಗಳಿಂದ ರಚಿಸುವ ಆಕೃತಿಗಳಲ್ಲಿ ವ್ಯವಹಾರದ ಆಕೃತಿಗಳು (Forms of life) ಜ್ಞಾನವರ್ಧಕ ಆಕೃತಿಗಳು (Forms of Knowledge) ಸೌಂದರ್ಯಜನಕ ಆಕೃತಿಗಳು (Forms of beauty) ಎಂದು ಮೂರು ವರ್ಗಗಳನ್ನು ಮಾಡಿಕೊಳ್ಳುವರು. ಈ ಪದ್ಧತಿಯು ಮೂರು ವರ್ಷದಿಂದ ಏಳು ವರ್ಷ ವಯಸ್ಸಿನ ಬಾಲಕರಿಗೆ ಸರಿಯಾಗಿರುವದು. ಅದಕ್ಕಿಂತ ಹೆಚ್ಚು ವಯಸ್ಸಿನ ಬಾಲಕರಿಗೆ ಇದರಿಂದ ಪ್ರಯೋಜನವಾಗಲಾರದು.

## ೪. ಫ್ರೊಬೆಲ್‌ನ ಗಿಫ್ಟುಗಳು.

ಇವು ಒಟ್ಟಿಗೆ ೨೦ ಇರುವವು. ಅವುಗಳಲ್ಲಿ ಮೊದಲಿನ ಏಳು ವ್ಯವಸಾಯಗಳಿಗೆ "ಗಿಫ್ಟ"ಎಂದೆನ್ನುವರು. ಉಳಿದ ಹದಿಮೂರು ವ್ಯವಸಾಯುಗಳಲ್ಲಿ ವಿಶೇಷ ಪ್ರಕಾರದ ಉಪಕರಣಗಳು ಏನೂ ಇರುವದಿಲ್ಲ. ಒಂದೊಂದು ಗಿಫ್ಟಿನಲ್ಲಿ ಒಂದೊಂದು ಪ್ರಕಾರದ ಆಟಗೆಗಳು ಇರುವವು. ಈ ಆಟಗೆಗಳು ಬೇರೆ ಬೇರೆ ಪ್ರಕಾರದವು ಇರುವದರಿಂದ ಬಾಲಕರಿಗೆ ಮನೋರಂಜನವಾಗುವದು. ಮತ್ತು ಅವುಗಳಿಂದ ಬಾಲಕರ ಬೇರೆ ಬೇರೆ ಶಕ್ತಿಗಳಿಗೆ ಚಲನೆಯುಂಟಾಗಿ ಅವು ಅಭಿವೃದ್ಧಿಗೊಳ್ಳುವವು.

**೧ ನೇ ಗಿಫ್ಟ**:— ಆರು ಬಣ್ಣಗಳ ಉಣ್ಣೆಯ ಚಂಡುಗಳು, ಮೂರು ಪ್ರಾಥಮಿಕ (ಕೆಂಪು, ಹಳದಿ, ನೀಲಿ) ಬಣ್ಣಗಳು; ಮೂರು ಮಿಶ್ರ ಬಣ್ಣಗಳು (ಕಿತ್ತಳೆ, ಹಸರು, ಕಂದಿ) ಇದರ ಉದ್ದೇಶವು ಬಣ್ಣಗಳನ್ನೂ, ಎಡಬಲ ಹಿಂದೆ ಮುಂದೆ ಎಂಬ ದಿಕ್ಕುಗಳನ್ನೂ ಕಲಿಸುವದಿರುವದು.

**೨ನೇಗಿಫ್ಟ**:— ಗೋಲ, ಘನ, ಸಿಲಿಂದರ; ಆಕೃತಿಗಳನ್ನು ತುಲನೆ ಮಾಡಲಿಕ್ಕೆ ಹಚ್ಚುವದು.

**೩ನೇಗಿಫ್ಟ**:— ಎಂಟು ಸರಿಯಾದ ಭಾಗಗಳನ್ನು ಮಾಡಿದ ಒಂದು ಘನ. ಆ ಭಾಗಗಳು ಸಹ ಘನಗಳೇ ಆಗಿರುವವು. ಇವುಗಳಿಂದ ಬೇರೆಬೇರೆ ಉಪಯುಕ್ತವಾದ ಮತ್ತು ಸುಂದರವಾದ ಆಕೃತಿಗಳನ್ನು ಮಾಡಲಿಕ್ಕೆ ಬರುವದು. ಈ ಗಿಫ್ಟಿನಿಂದ ಬಾಲಕರಲ್ಲಿ ಶೋಧಕ ಬುದ್ಧಿಯೂ ರಚನಾ ಸಾಮರ್ಥ್ಯವೂ ಉಂಟಾಗುವದು. ಅಪೂರ್ಣಾಂಕ, ಬೇರಿಜು. ವಜಾಬಾಕಿ. ಪಟ್ಟು, ಪಾಲು, ಇವುಗಳ ಕಲ್ಪನೆಯು ಆಗಹತ್ತುವದು. ಇಡೀ ವಸ್ತುವಿಗೂ ಅದರ ಭಾಗಗಳಿಗೂ ಇರುವ ಸಂಬಂಧವು ಗೊತ್ತಾಗುವದು.

**೪ನೇಗಿಫ್ಟ**:— ಒಂದು ಘನದಲ್ಲಿ ಎಂಟು ಸರಿಯಾದ ಚೌಕೋನಗಳನ್ನು (ಇಟ್ಟಂಗಿಯ ಆಕಾರದ ಚೌಕೋನಗಳನ್ನು) ಮಾಡಿದೆ. ಪ್ರತಿಯೊಂದು ಭಾಗದ ಉದ್ದಳತೆಯು ಅಗಲದ ಇಮ್ಮಡಿ. ಅಗಲವು ದಪ್ಪದ ಇಮ್ಮಡಿ ಯಾಗಿರುವವು. ೩ನೇ ಗಿಫ್ಟಿನಲ್ಲಿ ಹೇಳಿದಂತೆ ಬೇರೆ, ಬೇರೆ ಆಕೃತಿಗಳನ್ನು ರಚಿಸುವದು.

**೫ನೇ ಗಿಫ್ಟ** (ಅ):—ಒಂದು ದೊಡ್ಡ ಘನದಲ್ಲಿ ೨೭ ಸಣ್ಣ ಘನಗಳನ್ನು ಮಾಡಿರುತ್ತದೆ. ಅವುಗಳಲ್ಲಿ ಮೂರು ಘನಗಳನ್ನು ಕರ್ಣ ರೇಷೆಯಗುಂಟ ಅಡ್ಡ ಕೊರೆದಿರುವರು ಮತ್ತೆ ಮೂರು ಸಣ್ಣಘನಗಳೊಳಗೆ ಮೇಲೆ ಹೇಳಿದಂತೆ ಕೊರೆದು ನಾಲ್ಕು ಭಾಗಗಳನ್ನು ಮಾಡಿದ್ದಾರೆ. ಇದರಿಂದ ಸಂಖ್ಯೆ, ಹಾಗು ಆಕಾರದ ಕಲ್ಪನೆಯು ದೃಢವಾಗುವದು.

**೫ನೇ ಗಿಫ್ಟ** (ಬ):—ಇದರಲ್ಲಿ ಮೇಲಿನಂತೆಯೇ ಒಂದು ದೊಡ್ಡ ಘನದಲ್ಲಿ ಅಡ್ಡಾ ಮಗ್ಗಲು ಕೊರೆದು ಮೂರು ಚೌರಸ ವಿಭಾಗಗಳನ್ನು ಮಾಡಿರುವರು. **ಮೊದಲನೆಯ ಚೌರಸದಲ್ಲಿ** ಸರಿಯಾಗಿ ಕೊರೆದು ೯ ಘನಗಳನ್ನು ಮಾಡಿದೆ. **ಎರಡನೇ ಚೌರಸದಲ್ಲಿ** ಪೂರ್ಣ ಘನಗಳು ಮೂರು ನಾಲ್ಕುನಾಲ್ಕು ವಿಭಾಗಮಾಡಿದ ಘನಗಳು ಮೂರು ಆ ಘನಗಳಷ್ಟೇ ವ್ಯಾಸವುಳ್ಳ ಸಿಲಿಂಡರದ ಅರ್ಧಗಳು ೬ ಇರುವವು. **ಮೂರನೇ ಚೌರಸದಲ್ಲಿ** ೬ ಅರ್ಧ ಸಿಲಿಂಡರಗಳೂ ಆ ಅರ್ಧ ಸಿಲಿಂಡರಗಳು ಕೂಡ್ರಲಿಕ್ಕೆ ತಕ್ಕಂತೆ ಪೊಳ್ಳುಮಾಡಿದ ೮ ಘನಗಳು ಇರುವವು. ಈ ಗಿಫ್ಟಿನ ಉದ್ದೇಶವು ೫ನೇ ಗಿಫ್ಟಿನ ರಚನೆಯನ್ನೇ ಮುಂದೆ ಸಾಗಿಸಿ ಹೆಚ್ಚು ಪರಿಪೂರ್ಣವಾದ ಕಲ್ಪನೆಯುಂಟಾಗುವಂಥ ಇಮಾರತು ಮುಂತಾದವುಗಳನ್ನು ರಚಿಸಲಿಕ್ಕೆ ಕಲಿಸುವದಿರುವದು.

**೬ನೇ ಗಿಫ್ಟ**:—ಇದರಲ್ಲಿ ಒಂದು ಘನದೊಳಗೆ ನಾಲ್ಕನೇ ಗಿಫ್ಟಿನಲ್ಲಿ ಇರುವಂಥವೇ ೨೭ಸರಿಯಾದ ಆಕಾರದ ಇಟ್ಟಂಗಿಗಳನ್ನು ಮಾಡಿರುವರು. ಆ ೨೭ ಇಟ್ಟಂಗಿಗಳಲ್ಲಿ ೧೮ ಪೂರ್ಣ ಇರುವವು. ಮಿಕ್ಕವುಗಳಲ್ಲಿ ಆರು ಇಟ್ಟಂಗಿಗಳನ್ನು ಉದ್ದಳತೆಯಲ್ಲಿ ನಟ್ಟನಡುವೆ ಕೊರೆದು ೧೨ ಚೌರಸಗಳನ್ನು ಮಾಡಿದೆ. ಮತ್ತು ಉಳಿದ ಮೂರು ಇಟ್ಟಂಗಿಗ

ಳನ್ನು ಉದ್ದದ ಗುಂಟ ಸರಿಯಾಗಿ ಸೀಳಿ ೬ ಕಂಬಗಳನ್ನು ಮಾಡಿದೆ. ಒಟ್ಟಿಗೆ ಈ ಕರಣದಲ್ಲಿ ೩೬ ತುಂಡುಗಳಿರುವವು.

ಮೂರನೇ ಗಿಫ್ಟಿನ ವಿಶೇಷ ರಚನೆಯು ಐದನೇದರಲ್ಲಿ ಬರುವಂತೆ ೪ನೇ ಗಿಫ್ಟಿನ ವಿಶೇಷ ರಚನೆಯು ೬ನೇದರಲ್ಲಿ ಬರುವದು.

ಇನ್ನು ಉಳಿದ ಹದಿಮೂರು ಗ್ರಿಫ್ಟುಗಳಲ್ಲಿ ಕಡ್ಡಿಗಳಿಂದ ಆಕೃತಿಗಳನ್ನು ಮಾಡುವದು, ಕಾಗದ ಕತ್ತರಿಸುವದು, ಕಾಗದ ಮಡಿಚುವದು, ಕಾಗದದಲ್ಲಿ ತೂತು ಮಾಡುವದು, ಮಣಿಗಳನ್ನು ಪೋಣಿಸುವದು , ಕಸೂತಿ ಹಾಕುವದು, ಚಾಪಿಯನ್ನು ಹೆಣಿಯುವದು, ಬುಟ್ಟಿಯನ್ನು ಹೆಣಿಯುವದು, ಬೀಜಗಳಿಂದ ಆಕೃತಿಯನ್ನು ಮಾಡುವದು, ತಂತಿಯ ಕೆಲಸ, ಚಿತ್ರತೆಗೆಯುವದು. ಆಟಿಗೆಗಳನ್ನು ಮಾಡುವದು ಮುಂತಾದ ಕೆಲಸ. ಗಳ ಉಪಕರಣಗಳಿರುವವು.

### ೫. ಕಿಂಡರ ಗಾರ್ಟನ್ ಪದ್ಧತಿಯಿಂದ ಆಗುವ ಲಾಭಗಳು

**ಮಾನಸಿಕ** :—ಬಾಲಕರ ಬುದ್ಧಿ ಶಕ್ತಿಯು ವಿಕಾಸವಾಗುವದು. ಮತ್ತು ಮುಂದೆ ಅಭ್ಯಾಸ ಮಾಡುವ ಲವಲವಿಕೆಯು ಹೆಚ್ಚಾಗುವದು.

**ನೈತಿಕ** :—ವ್ಯವಸ್ಥೆ, ಅಚ್ಚುಕಟ್ಟುತನ, ವಿಧೇಯತ್ವ. ಸಹಾನುಭೂತಿ ಮೊದಲಾದ ಸದ್ಗುಣಗಳನ್ನು ಉಂಟುಮಾಡುವದು.

**ಶಾರೀರಿಕ** :—ಬಾಲಕರ ಸ್ವಾಭಾವಿಕ ಚಟುವಟಿಕೆಯನ್ನು ಹೆಚ್ಚಿಸುವದು, ಅವಯವಗಳ ಬೆಳುವಣಿಗೆಯು ಚನ್ನಾಗಿ ಆಗುವದು.

---

## ೧೯ ಮಾಂಟೆಸೋರಿಯ ಪದ್ಧತಿ

**(೧) ಜೀವನಚರಿತ್ರೆ**:-ಚಿಕ್ಕಮಕ್ಕಳ ಶಿಕ್ಷಣದ ವಿಷಯದಲ್ಲಿ ಇತ್ತಲಾಗಿ ಬಹಳ ಪ್ರಸಿದ್ಧಿಯನ್ನೂ ಗೌರವವನ್ನೂ ಪಡೆದ ಮಾಂಟೆಸೋರಿಯು ಇತಾಲಿಯೊಳಗೆ ಒಂದು ಬಡ ಕುಟುಂಬದಲ್ಲಿ ಜನಿಸಿದಳು. ಇವಳು ತನ್ನ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ಮೇಲೆ ವೈದ್ಯಶಾಸ್ತ್ರದ ಅದರಲ್ಲಿಯೂ ಮುಖ್ಯವಾಗಿ ಚಿಕ್ಕಮಕ್ಕಳ ರೋಗಗಳ ಚಿಕಿತ್ಸೆಯ ಅಭ್ಯಾಸವನ್ನು ಕೈಕೊಂಡು ಚನ್ನಾಗಿ ಪರಿಶ್ರಮಮಾಡಿ ಡಾಕ್ಟರ ಎಂಬ ಬಹುಮಾನದ ಪದವಿಯನ್ನು ಹೊಂದಿದಳು. ರೋಮದ ವಿಶ್ವವಿದ್ಯಾಲಯದಿಂದ ಈ ಪದವಿಯನ್ನು ಹೊಂದಿದ ಸ್ತ್ರೀಯರಲ್ಲಿ ಇವಳೇ ಮೊದಲಿನವಳು. ಇತಾಲಿಯಲ್ಲಿ ಪೂರ್ಣ ಹುಚ್ಚರನ್ನೂ ಅರ ಹುಚ್ಚರನ್ನೂ ದುರ್ಬಲ ಮನಸ್ಸಿನವರನ್ನೂ ಒಂದೇ ಚಿಕಿತ್ಸಾಲಯದಲ್ಲಿಟ್ಟು ಉಪಚರಿಸುವ ಪರಿಪಾಠವುಂಟು. ಮಾಂಟೆಸೋರಿಯು ಮೊದಲು ಇಂಥದೊಂದು ಚಿಕಿತ್ಸಾಲಯದಲ್ಲಿ ಮುಖ್ಯ ಡಾಕ್ಟರನಿಗೆ ಸಹಾಯಕಳಾಗಿ ನಿಯಮಿಸಲ್ಪಟ್ಟಳು. ಅಲ್ಲಿ ಇವಳು

ಎಷ್ಟೋ ರೋಗಿಗಳ ಮಿದುಳಿನ ರೋಗಗಳನ್ನು ಒಂದು ವಿಶಿಷ್ಟವಾದ ಉಪಚಾರದಿಂದ ನೆಟ್ಟಗೆ ಮಾಡಿದಳು. ಹೀಗೆ ತನಗೆ ದೊರೆತ ಅನುಭವವನ್ನು ಚಿಕ್ಕಮಕ್ಕಳ ಶಿಕ್ಷಣದಲ್ಲಿ ಉಪಯೋಗಿಸಿ ನೋಡಬೇಕೆಂಬ ಕುತೂಹಲವು ಅವಗಳಲ್ಲಿ ಉತ್ಪನ್ನವಾಗಿ ಅದರಂತೆ ಪ್ರಯೋಗ ಮಾಡತೊಡಗಿದಳು. ಈ ಕಾರ್ಯದಲ್ಲಿ ತನಗೆ ನಿಶ್ಚಯವಾಗಿ ಯಶಸ್ಸು ದೊರೆಯುವದೆಂದು ಮನವರಿಕೆಯಾಗಲು ಇವಳು ಇದು ವರೆಗೆ ತಾನು ಮಾಡುತ್ತ ಬಂದಿದ್ದ ರೋಗಚಿಕಿತ್ಸೆಯ ಕೆಲಸವನ್ನು ಬಿಟ್ಟು ಬಾಲಕರ ಶಿಕ್ಷಣದಲ್ಲಿ ಸಂಪೂರ್ಣವಾಗಿ ಮನಸ್ಸು ಹಾಕಿ ಅವರಿಗಾಗಿ ಒಂದು ಶಾಲೆಯನ್ನು ಸ್ಥಾಪಿಸಿದಳು. ಅದರಲ್ಲಿ ೩ರಿಂದ ೬ ವರ್ಷದ ವಯಸ್ಸಿನ ಚಿಕ್ಕ ಬಾಲಕರನ್ನು ಸೇರಿಸಿಕೊಂಡು ತಾನು ಕಂಡು ಹಿಡಿದ 'ಸ್ವಯಂಶಿಕ್ಷಣ' ತತ್ವದ ಮೇರಿಗೆ ಶಿಕ್ಷಣ ಕೊಡಹತ್ತಿದಳು.

ಸ್ವಲ್ಪ ದಿವಸಗಳಲ್ಲಿಯೇ ಈ ಸಾಲೆಯ ಒಬ್ಬ ವಿದ್ಯಾರ್ಥಿಯು ಪರೀಕ್ಷೆಯಲ್ಲಿ ಎಲ್ಲರಿಗಿಂತ ಹೆಚ್ಚು ಗುಣಗಳನ್ನು ಪಡೆದು ಮೊದಲನೆಯ ನಂಬರು ಪಡೆದನು. ಮತ್ತು ಈ ಕ್ರಮವು ಹೀಗೆಯೇ ಮುಂದೆ ನಡೆಯಿತು. ಆದರಿಂದ ಜನರಿಗೆ ಮಾಂಟೆಸೋರಿಯ ಶಿಕ್ಷಣ ಪದ್ಧತಿಯಲ್ಲಿರುವ ಮಹತ್ವವು ತಿಳಿಯಲಾರಂಭಿಸಿತು. ವಿದ್ಯಾರ್ಥಿಗಳ ಸಂಖ್ಯೆಯು ದಿನದಿನಕ್ಕೆ ಬೆಳೆಯತೊಡಗಿತು. ಇದರಿಂದ ಇವಳು ಒಂದು ವರ್ಷದೊಳಗಾಗಿಯೇ ಬೇರೊಂದು ಶಾಲೆಯನ್ನು ಸ್ಥಾಪಿಸಬೇಕಾಯಿತು. ಸ್ವದೇಶವಲ್ಲಿಯೂ ಪರದೇಶಗಳಲ್ಲಿಯೂ ಇವಳ ಕೀರ್ತಿಯು ಹಬ್ಬಿತು. ಇವಳ ಶಿಕ್ಷಣ ಪದ್ಧತಿಯನ್ನು ನೋಡುವ ಸಲುವಾಗಿ ಬೇರೆ ಬೇರೆ ದೇಶಗಳಿಂದ ಎಷ್ಟೋ ಜನ ಶಿಕ್ಷಕರೂ ಬೇರೆ ಸದ್ಗೃಹಸ್ಥರೂ ಬರಹತ್ತಿದರು.

ಇಷ್ಟಾದ ಬಳಿಕ ಮಾಂಟೆಸೋರಿಯು ೯ ವರ್ಷದ ವರೆಗಿನ ಬಾಲಕರ ಶಿಕ್ಷಣವನ್ನು ಕೈಕೊಂಡು ಅದಕ್ಕಾಗಿ ಮತ್ತೆ ಮಾನಸಶಾಸ್ತ್ರದ ಅಧ್ಯಯನವನ್ನು ಮಾಡತೊಡಗಿದಳು. ಶಿಕ್ಷಣಶಾಸ್ತ್ರದ ಎಲ್ಲ ಗ್ರಂಥಗಳನ್ನು ಓದಿದಳು. ಸ್ವಾವಲಂಬನದ ತತ್ವವನ್ನು ಹೇಗೆ ಬಳಿಕೆಯಲ್ಲಿ ತರಬೇಕೆಂಬದನ್ನು ಚೆನ್ನಾಗಿ ಮನನಮಾಡಿಕೊಂಡಳು. ಆದರೆ ಮುಂದೆ ಜನಸಹಾಯ, ಧನಸಹಾಯಗಳು ದೊರೆಯದ್ದರಿಂದ ಈಕೆಯು ತನ್ನ ಶಾಲೆಯನ್ನು ತನ್ನ ಐವರು ಶಿಷ್ಯರಿಗೆ ಒಪ್ಪಿಸಿದಳು. ಈ ಶಿಷ್ಯರಾದರೂ ಇವಳ ಶಿಕ್ಷಣ ತತ್ವಗಳನ್ನು ಅಕ್ಷರಶಃ ಬಳಿಕೆಯಲ್ಲಿ ತರಲಿಕ್ಕೆ ತ್ರಿಕರಣಪೂರ್ವಕವಾಗಿ ಪ್ರಯತ್ನಿಸಿದರು. ಮಾಂಟೆಸೋರಿಯು ಈಗ ಶಿಕ್ಷಣದ ಕೆಲಸವನ್ನು ಬಿಟ್ಟು ಶಿಕ್ಷಣದ ಹೊಸ ತತ್ವಗಳ ಶೋಧನದ ಕೆಲಸವನ್ನು ಕೈಕೊಂಡಿರುವಳು. ಸುಧಾರಿಸಿದ ರಾಷ್ಟ್ರಗಳಲ್ಲೆಲ್ಲ ಇವಳ ಹೊಸ ತತ್ವಗಳೂ ಪದ್ಧತಿಯೂ ಮಾನ್ಯವಾಗಹತ್ತಿವೆ.

(೨) ಮಾಂಟೆಸೋರಿ ಪದ್ಧತಿ:—ಬಾಲಕರು ಸಂಪೂರ್ಣ ಸ್ವಾತಂತ್ರ್ಯದಿಂದ ಶಿಕ್ಷಣ ಹೊಂದುವದೇ ಈ ಪದ್ಧತಿಯ ಮುಖ್ಯೋದ್ದೇಶವು. ಆಟವಾಡುವದು, ಕಲಿಯುವದು, ಸುಮ್ಮನೆಕೂಡುವದು ಮುಂತಾದ ಎಲ್ಲ ಕೆಲಸಗಳು ಬಾಲಕರ ಮನಸ್ಸನ್ನು

ಅವಲಂಬಿಸಿರುವವು. ವಿದ್ಯಾರ್ಥಿಯು ತನ್ನ ಮನಸ್ಸಿಗೆ ಬಂದರೆ ಕೆಲಸವನ್ನು ಮಾಡಬಹುದು; ಬಾರದಿದ್ದರೆ ಬಿಡಬಹುದು. ಶಿಕ್ಷಕನು ಕೇವಲ ಮಾರ್ಗದರ್ಶಕ ನಾಗಿ ವಿದ್ಯಾರ್ಥಿಗಳ ಒಲವಿಗನುಸರಿಸಿ ಕೆಲಸಮಾಡುವನು. ಒಂದು ವೇಳೆ ಕಿಡಿ ಗೇಡಿ ಅಥವಾ ಮುಖಹೀನ ಹುಡುಗರು ಕೆಲಸಮಾಡದಿದ್ದರೆ ಶಿಕ್ಷಕನು ಅವರಿಗೆ ಯಾವ ತರದ ಶಿಕ್ಷೆಯನ್ನೂ ವಿಧಿಸದೆ ಅವರನ್ನು ಉಳಿದ ಬಾಲಕರಿಂದ ಬೇರೆಯಾಗಿ ಕುಳ್ಳಿರಿಸುವನು. ಇದರಿಂದ ಅವರಿಗೆ ಬೇಸರ ಅಥವಾ ನಾಚಿಕೆ ಉಂಟಾಗಿ ಅವರಲ್ಲಿ ಕಾರ್ಯಪ್ರೀತಿಯು ಹುಟ್ಟುವದು. ಒಟ್ಟಿನ ಮೇಲೆ ಈ ಪದ್ಧತಿಯಲ್ಲಿ ಶಾಲೆಯೂ ಅದರ ಕಾರ್ಯಕ್ರಮವೂ ವಿದ್ಯಾರ್ಥಿಗಳಿಗೆ ಬೇಸರ ಹಾಗು ಭಯವನ್ನುಂಟುಮಾಡದೆ ಅವರ ಉಲ್ಲಾಸ ಮತ್ತು ಕಾರ್ಯ ಪ್ರೀತಿಯನ್ನು ಹೆಚ್ಚಿಸುವವು.

(೧) ಬೌದ್ಧಿಕ ಶಿಕ್ಷಣ :—ಮಾಂಟೆಸೋರಿಯ ಶಿಕ್ಷಣಪದ್ಧತಿಯಲ್ಲಿ ಮೊದಲು ವಿದ್ಯಾರ್ಥಿಗಳಿಗೆ ಅಕ್ಷರ ಲೇಖನದ ಪೂರ್ವಸಿದ್ಧತೆಗಾಗಿ ಸರಳ, ವಕ್ರ, ವರ್ತುಳ, ಅರ್ಧ ವರ್ತುಳ ರೇಖೆಗಳನ್ನು ಬೇರೆ ಬೇರೆ ಪ್ರಕಾರದಿಂದ ಎಳೆಯಲಿಕ್ಕೆ ಕಲಿಸುವದುಂಟು. ಬಳಿಕ ಅಕ್ಷರದ ಇಸ್ಪೇಟು, ಕಟ್ಟಿಗೆಯ ಅಕ್ಷರ ಇವುಗಳ ಮೇಲೆ ಬೊಟ್ಟಿನಿಂದ ತೀಡುವ ದನ್ನೂ ಸುತ್ತಲು ಗೆರೆಹೊಡೆಯುವದನ್ನೂ ತೋರಿಸುವರು. ವಿದ್ಯಾರ್ಥಿಗಳು ಅವರಂತೆ ಅನುಕರಣ ಮಾಡುವರು. ಇದರಿಂದ ಸ್ವಲ್ಪಾವಕಾಶದಲ್ಲಿ ಬಾಲಕರು ಸುವಾಚ್ಯವಾದ ಅಕ್ಷರಗಳನ್ನು ಬರೆಯಹತ್ತುವರು. ಈ ಕೃತಿಯು ಪ್ರಾರಂಭದಲ್ಲಿ ಕೆಲಮಟ್ಟಿಗೆ ಸುತ್ತು ಳ್ಳದ್ದಾಗಿ ತೋರಿದರೂ ಒಟ್ಟಿನ ಮೇಲೆ ಇದರಿಂದ ಬೇರೆ ಪದ್ಧತಿಗಳಿಗಿಂತ ಶ್ರಮವೂ ಕಾಲವೂ ಕಡಿಮೆ ಹತ್ತಿ ಹೆಚ್ಚು ಸುಪರಿಣಾಮವಾಗುವದು. ಬರಹವು ಬಂದನಂತರ ಅಕ್ಷರ ವಾಚನವು ಪ್ರಾರಂಭವಾಗುವದು. ವಿದ್ಯಾರ್ಥಿಗಳಿಗೆ ಕಲಿಸಬೇಕಾಗಿದ್ದ ಅಕ್ಷ ರವು ಆದ್ಯಕ್ಷರವಾಗಿರುವಂಥ ಮತ್ತು ಯಾವದೊಂದು ಒಡವೆಯ ಹೆಸರನ್ನು ಹೇಳು ವಂಥ ಶಬ್ದಗಳುಳ್ಳ ಚಿತ್ರಪಟಗಳನ್ನು ಈ ಕೆಲಸಕ್ಕಾಗಿ ಉಪಯೋಗಿಸುವರು. ಸ್ವರ ವ್ಯಂಜನಗಳ ಭೇದವನ್ನು ತೋರಿಸಲಿಕ್ಕೆ ಬೇರೆ ಬೇರೆ ಬಣ್ಣಗಳನ್ನು ಉಪಯೋಗಿಸು ವರು. ಒಂದೆರಡು ಅಕ್ಷರಗಳು ಬರುತ್ತಲೆ ಅವುಗಳಿಂದಾಗಬಹುದಾದ ಶಬ್ದಗಳ ರಚ ನೆಯನ್ನು ಕಲಿಸುವರು. ಅಕ್ಷರವಾಚನವು ಮುಗಿದ ಬಳಿಕ ದೊಡ್ಡ ದೊಡ್ಡ ಶಬ್ದಗಳ ವಾಚನವೂ ಬಳಿಕ ವಾಕ್ಯಗಳ ವಾಚನವೂ ಪ್ರಾರಂಭವಾಗುವವು.

ಅಂಕೆಗಳನ್ನು ಕಲಿಸುವಾಗ ಒಂದು ಉದ್ದನ್ನ ಕಟ್ಟಿಗೆಯಲ್ಲಿ ಸರಿಯಾದ ಹತ್ತು ತುಂಡುಗಳನ್ನು ಮಾಡಿ ಅವುಗಳ ಸಹಾಯದಿಂದ ಬೇರೀಜು, ವಜಾಬಾಕಿ, ಗುಣಾಕಾರ, ಭಾಗಾಕಾರಗಳನ್ನು ಕಲಿಸುವರು ಅದು ಹೇಗೆಂದರೆ—

೧ ಎಕ್ಕಮಿಮ್ಮನ ತುಂಡು + ೯ ಎಕ್ಕಮಿಮ್ಮನ ತುಂಡು=೧೦ ಎಕ್ಕಮಿಮ್ಮನ ತುಂಡು

೨ ,, + ೮ ,, = ,, ಇತ್ಯಾದಿ.

ಈ ರೀತಿಯಿಂದ ಬೇರಿಜು ಕಲಿಸುವರು.

ಇದರ ವಿರುದ್ಧವಾದ ಕೃತಿಯಿಂದ ವಜಾಬಾಕಿಯನ್ನು ಕಲಿಸುವರು.

೧೦ ಎ. ತುಂಡು—೧ ಎ. ತುಂಡು=೯ ಎ. ತುಂಡು

,, —೨ ,, =೮ ,, ಇತ್ಯಾದಿ

ಇದರಂತೆ—

೨ ಎ. ತುಂಡು × ೨ ಸಾರೆ=೪ ಎ. ತುಂಡು

೩ ,, × ೨ ಸಾರೆ=೬ ,,

೨ ,, × ೩ ಸಾರೆ=೬ ,, ಇತ್ಯಾದಿ

ಹೀಗೆ ಗುಣಾಕಾರದ ಕೃತಿಯನ್ನೂ ಮತ್ತು ೧೦ ಎ. ತುಂಡಿನಲ್ಲಿ ೫ ಎ. ತುಂಡಿನಂಥವು ೨ ಆಗುವವು. ಇವರ ಮೇಲಿಂದ ೫ ನ್ನು ೨ ಸಾರೆ ತಕ್ಕೊಂಡು ಕೂಡಿಸಿದರೆ ೧೦ ಆಗುವದು. ಇತ್ಯಾದಿ ಕೃತಿಯಿಂದ ಭಾಗಾಕಾರದ ಕೃತಿಯನ್ನೂ ಕಲಿಸುವರು.

(೨) ಇಂದ್ರಿಯಗಳ ಶಿಕ್ಷಣವು :—ಈ ಶಿಕ್ಷಣಕ್ಕೆ ಮಾಂಟಿಸೋರಿಯ ಪದ್ಧತಿಯಲ್ಲಿ ದೊರೆತಷ್ಟು ಮಹತ್ವವು ಬೇರೆ ಯಾವ ಪದ್ಧತಿಯಲ್ಲಿಯೂ ಇಲ್ಲ. ಬೇರೆ ಬೇರೆ ಉಪಕರಣಗಳ ಸಹಾಯದಿಂದ ಬೇರೆ ಬೇರೆ ಇಂದ್ರಿಯಗಳಿಗೆ ಶಿಕ್ಷಣವು ದೊರೆಯುವಂತೆ ಈ ಪದ್ಧತಿಯಲ್ಲಿ ತಕ್ಕ ಯೋಜನೆಯು ಮಾಡಲ್ಪಟ್ಟಿರುತ್ತದೆ. ಒಂದು ಕಟ್ಟಿಗೆಯ ಮಣೆಯಲ್ಲಿ ಅರ್ಧಭಾಗಕ್ಕೆ ಉಸುಕಿನ ಕಾಗದವನ್ನು ಅಂಟಿಸಿ ಉಳಿದ ಅರ್ಧ ಭಾಗವನ್ನು ಚನ್ನಾಗಿ ನುಣುಪುಮಾಡುವರು. ವಿದ್ಯಾರ್ಥಿಗಳು ಈ ಎರಡೂ ಭಾಗಗಳ ಮೇಲೆ ಕೈಯಾಡಿಸಿ ನುಣುಪು ಹುರಬರಕುಗಳ ಜ್ಞಾನ ಮಾಡಿಕೊಳ್ಳುವರು. ಈ ಪ್ರಕಾರ ತಕ್ಕಷ್ಟು ರೂಢಿಯಾದ ಮೇಲೆ ಒಂದು ಉಸುಕಿನ ಕಾಗದ ಅಂಟಿಸಿದ ಭಾಗ ಬಳಿಕ ನುಣುಪಾದ ಭಾಗ, ಹೀಗೆ ಅನುಕ್ರಮವಾಗಿ ಅನೇಕ ಭಾಗಗಳುಳ್ಳ ಬೇರೊಂದು ಮಣೆಯನ್ನು ವಿದ್ಯಾರ್ಥಿಯ ಮುಂದಿಡುವರು. ಅವನು ಕಣ್ಣು ಮುಚ್ಚಿಕೊಂಡು ಕೈಯಾಡಿಸಿ ನುಣುಪು ಹುರಬರಕುಗಳನ್ನು ಹೇಳುವನು. ಇಂಥ ಅನೇಕ ಪ್ರಕಾರದ ಪಾಠಗಳ ಯೋಜನೆಯಿಂದ ಬಾಲಕರ ಸ್ಪರ್ಶೇಂದ್ರಿಯದ ಶಕ್ತಿಯು ಸುಲಭವಾಗಿ ಬೆಳೆಯುವದು.

ವಿದ್ಯಾರ್ಥಿಗಳು ತಾವೇ ತೂಕಮಾಡಿ ಪದಾರ್ಥಗಳ ತೂಕವನ್ನು ತಿಳಿಯಲು ಸಮರ್ಥರಾಗುವಂತೆ ಪಾಠಗಳ ಏರ್ಪಾಡು ಮಾಡುವರು. ಸರಿಯಾದ ಎತ್ತರದ, ಕ್ರಮವಾಗಿ ಕಡಿಮೆ ಅಗಲುಳ್ಳ ೧೦ ಸಿಲಿಂದರಗಳನ್ನು ಒಂದು ಕಟ್ಟಿಗೆಯಲ್ಲಿ ಕೂಡಿಸಿರುತ್ತಾರೆ. ವಿದ್ಯಾರ್ಥಿಗಳಿಗೆ ಅವುಗಳನ್ನು ಸುಲಭವಾಗಿ ತಕ್ಕೊಳ್ಳಲಿಕ್ಕೂ ಪುನಃ ಇಡಲಿಕ್ಕೂ ಬರುವಂತೆ ಅವುಗಳಿಗೆ ಹಿಡಿಕೆಗಳಿರುತ್ತವೆ. ಇವೆಲ್ಲ ತುಂಡುಗಳನ್ನು ತೆಗೆದು ಒಟ್ಟುಗೂಡಿಸಿ ಎಲ್ಲಕ್ಕೂ ಹೆಚ್ಚು ತೂಕದ ಸಿಲಿಂದರವು ಯಾವದು ? ಎಲ್ಲಕ್ಕೂ ಸಣ್ಣ ಸಿಲಿಂದರವು ಯಾವದು ? ಇತ್ಯಾದಿ ತರತರದ ಪ್ರಶ್ನಗಳನ್ನು ಕೇಳಿ ವಿದ್ಯಾರ್ಥಿಗಳನ್ನು ಶೋಧ ಮಾಡಹಚ್ಚುವರು. ಸಿಲಿಂದರಗಳ ಬದಲಾಗಿ ಘನಗಳನ್ನು ಸಹ ಉಪಯೋಗಿಸುವದುಂಟು ಕೇವಲ ತೂಕದ ಪಾಠವನ್ನೇ ಕಲಿಸುವಾಗ ಒಂದೇ ಆಕಾರದ ಬೇರೆ ಬೇರೆ

ತೂಕದ ಭಿನ್ನ ಭಿನ್ನ ಜಾತಿಯ ಕಟ್ಟಿಗೆಯ ಸಣ್ಣ ಸಣ್ಣ ಹಲಿಗೆಗಳನ್ನು ವಿದ್ಯಾರ್ಥಿಗಳಿಗೆ ಕೊಟ್ಟು ತೂಗಹಚ್ಚುವರು. ಅವರು ಅವುಗಳನ್ನು ತೂಗಿ ತೂಕದ ಮಾನದಂತೆ ಕ್ರಮಗೊಳಿಸುವರು. ಹೀಗೆ ಆಕಾರ ತೂಕಗಳ ಜ್ಞಾನಮಾಡಿಕೊಡುವರು.

ಬಣ್ಣದ ಆಕೃತಿಗಳ ಪೆಟ್ಟಿಗೆಯ ಸಹಾಯದಿಂದ ಬಣ್ಣಗಳ ಜ್ಞಾನಮಾಡಿಕೊಡುವರು. ಬಣ್ಣದಲ್ಲಿ ೮ ಮುಖ್ಯ ಭಾಗಗಳಿದ್ದು ಒಂದೊಂದು ಭಾಗದಲ್ಲಿ ೮ ಉಪಭಾಗಗಳಿರುತ್ತವೆ. ಅಂತು ಒಂದು ಪೆಟ್ಟಿಗೆಯಲ್ಲಿ ೬೪ ಆಕೃತಿಗಳಿರುತ್ತವೆ. ಇವೆಲ್ಲವನ್ನು ಒಟ್ಟುಗೂಡಿಸಿ ಒಂದೊಂದು ಜಾತಿಯ ಬಣ್ಣಗಳನ್ನು ಬೇರೆ ಬೇರೆ ಕ್ರಮಗೊಳಿಸಲಿಕ್ಕೆ ಹಚ್ಚುವರು. ವಿದ್ಯಾರ್ಥಿಗಳು ಒಂದೊಂದು ಬಣ್ಣದೊಳಗಿನ ಎಲ್ಲಕ್ಕೂ ಹೆಚ್ಚು ದಟ್ಟಬಣ್ಣವಿದ್ದ ಆಕೃತಿಯನ್ನು ಎಲ್ಲಕ್ಕೂ ಮೊದಲು, ನಂತರ ಅದಕ್ಕೂ ಕಡಿಮೆ ದಟ್ಟಬಣ್ಣವಿದ್ದ ಆಕೃತಿ, ಈ ಪ್ರಕಾರ ಕ್ರಮಗೊಳಿಸುವರು. ಬೇರೆ ಬೇರೆ ಹೂವುಗಳ ಸಹಾಯದಿಂದ ಘ್ರಾಣೇಂದ್ರಿಯದ ಶಿಕ್ಷಣವಾದರೂ ಕೊಡಲ್ಪಡುವದು.

(೨) **ನೈತಿಕ ಶಿಕ್ಷಣವು** :— ಮಾಂಟೆಸೋರಿಯ ಪದ್ಧತಿಯ ಶಾಲೆಗಳಲ್ಲಿ ತೋಟ ಹಾಗು ಪ್ರಾಣಿ ಸಂಗ್ರಹಾಲಯಗಳಿರುತ್ತವೆ. ವಿದ್ಯಾರ್ಥಿಗಳು ಈ ಪ್ರಾಣಿ-ವನಸ್ಪತಿಗಳ ಹಿತಾಹಿತಗಳನ್ನು ನೋಡಬೇಕಾಗುವದು. ವಿದ್ಯಾರ್ಥಿಗಳ ಆಸಕ್ತಿಯೂ ನಿರೀಕ್ಷಣ ಶಕ್ತಿಯೂ ಬೆಳೆದಂತೆ ಅವುಗಳ ಮೇಲಿನ ಪ್ರೇಮವೂ ಸಹಜವಾಗಿ ಬೆಳೆಯುವದು. ಅದರಂತೆಯೇ ಶಿಕ್ಷಕನು ತಮ್ಮ ವಿಷಯವಾಗಿ ತೋರಿಸುವ ಪ್ರೀತಿಯ ಸಲುವಾಗಿ ಅವನಲ್ಲಿ ಸದ್ಭಾವನೆಯುಂಟಾಗುವದು. ವಿದ್ಯಾರ್ಥಿಗಳಿಗೆ ಸ್ವಯಂಶಿಕ್ಷಣವು ದೊರೆತು ಮುನ್ನೋಟವುಂಟಾಗುವದು.

(೩) ಈ ಪದ್ಧತಿಯಲ್ಲಿ ಯಾವ ಉಪಕರಣಗಳ ಉಪಯೋಗವನ್ನು ಹೇಗೆ ಮಾಡುವರೆಂಬದನ್ನು ತಿಳಿದುಕೊಂಡು ನಮ್ಮಲ್ಲಿಯ ಪ್ರಾಥಮಿಕ ಶಿಕ್ಷಕರು ಅವುಗಳ ಉಪಯೋಗವನ್ನು ಮಾಡಿದರೆ ಬಾಲಕರಿಗೆ ಇಂದ್ರಿಯ ಶಿಕ್ಷಣವು ದೊರೆತು ಸಾಮಾನ್ಯ ಜ್ಞಾನವು ಉಂಟಾಗಹತ್ತುವದು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇಂಥ ಶಾಲೆಗಳಿಗೆ ಹೋಗತಕ್ಕ ಬಾಲಕರು ಚಿಕ್ಕವಯಸ್ಸಿನವರಿರುವರು. ನಮ್ಮಲ್ಲಿ ೫—೬ ವರ್ಷದ ಬಾಲಕರು ಮಾತ್ರ ಶಾಲೆಗೆ ಹೋಗುವರು. ಅದಕ್ಕಿಂತ ಚಿಕ್ಕವರನ್ನು ಕಾಣುವದು ಅಪರೂಪ. ಆದದರಿಂದ ಮಾಂಟೆಸೋರಿಯ ಶಿಕ್ಷಣದ ಮುಖ್ಯ ತತ್ವಗಳನ್ನು ನೆನಪಿನಲ್ಲಿಟ್ಟುಕೊಂಡು ಬಾಲಕರ ಒಲವಿನಂತೆ ಪಾಠಗಳ ಯೋಜನೆಯನ್ನು ಮಾಡಿ ಅವರೇ ತಮ್ಮ ಬುದ್ಧಿ ಅನುಭವಗಳಿಂದ ಹೊಸ ಜ್ಞಾನ ಮಾಡಿಕೊಳ್ಳಬೇಕೆಂಬದನ್ನು ಮರೆಯಕೂಡದು. ಈ ಪದ್ಧತಿಯಲ್ಲಿ ವ್ಯಕ್ತಿಶಿಕ್ಷಣಕ್ಕೆ ಹೆಚ್ಚು ಲಕ್ಷ್ಯವು ಕೊಡಲ್ಪಡುವದು. ಬೇರೆ ಬೇರೆ ಬಾಲಕರ ಬುದ್ಧಿಶಕ್ತಿಯು ಬೇರೆ ಬೇರೆಯಾಗಿರುವದರಿಂದ ಅವರೆಲ್ಲರನ್ನು ವರ್ಗದಲ್ಲಿ ಕೂಡ್ರಿಸಿ ಒಂದೇ ಪ್ರಕಾರದ ಶಿಕ್ಷಣವನ್ನು ಕೊಡುವದರಿಂದ ಅವರೆಲ್ಲರ ಬುದ್ಧಿವಿಕಾಸವು ಸರಿ

ಯಾಗಿ ಆಗಲಾರದು. ಆದದರಿಂದ ಬಾಲಕರ ವಿಶಿಷ್ಟ ಬುದ್ಧಿಶಕ್ತಿಯಂತೆ ಅವರಿಗೆ ಅನುರೂಪವಾದ ಶಿಕ್ಷಣವನ್ನು ಕೊಡುವದೇ ಈ ಪದ್ಧತಿಯ ವೈಶಿಷ್ಟ್ಯವು. ಈ ಪದ್ಧತಿಯನ್ನು ಪ್ರಾರಂಭಮಾಡುವ ಶಾಲೆಗಳಲ್ಲಿ ಕೆಲವು ಅನುಕೂಲತೆಗಳು ಬೇಕು. ಅವು ಯಾವವೆಂದರೆ:- ತೋಟ, ಆಟದಬೈಲು, ಪ್ರಾಣಿ ಮತ್ತು ವಸ್ತುಸಂಗ್ರಹ. ಈಗಿನ ಪ್ರಾಥಮಿಕ ಶಾಲೆಗಳಲ್ಲಿ ಈ ಪ್ರಕಾರದ ಅನುಕೂಲತೆಗಳು ದೊರೆಯುಹತ್ತಿವೆ. ಆದದರಿಂದ ಅಂಥ ಅನುಕೂಲ ಪರಿಸ್ಥಿತಿಯಲ್ಲಿದ್ದ ಪ್ರಾ. ಶಾ. ಗಳು ಮಾಂಟೆಸೋರಿಯ ಪದ್ಧತಿಯನ್ನು ಪ್ರಾರಂಭಿಸಬಹುದು.

(೩) ಕಿಂಡರಗಾರ್ಟನ ಪದ್ಧತಿಗೂ ಮಾಂಟೆಸೋರಿ ಪದ್ಧತಿಗೂ ತುಲನೆ.

**ಸಾಮ್ಯ**:—ಮೇಲಿನ ವಿವರಣೆಯಿಂದ ಮಾಂಟೆಸೋರಿಯ ಪದ್ಧತಿಯು ಫ್ರೋಬೆಲ್ಲನ ಕಿಂಡರ ಗಾರ್ಟನ್ ಪದ್ಧತಿಯಿಂದ ತೀರ ಭಿನ್ನವಾಗಿರದೆ ಅದರಲ್ಲಿಯೇ ಕೆಲವು ಟ್ಟಿಗೆ ಸುಧಾರಣೆಯನ್ನು ಹೊಂದಿದ ಪದ್ಧತಿಯೆಂಬದು ಸಹಜವಾಗಿ ತಿಳಿಯುವಂತಿದೆ. ಎರಡೂ ಪದ್ಧತಿಗಳು ಚಿಕ್ಕಬಾಲಕರ ವಿಷಯವಾಗಿರುವ ಅತಿಶಯವಾದ ಪ್ರೀತಿಮೂಲಕವಾಗಿಯೇ ಉತ್ಪನ್ನವಾಗಿರುವವೆಂಬದು ನಿರ್ವಿವಾದವಾದದ್ದು. ಎರಡೂ ಪದ್ಧತಿಗಳಲ್ಲಿ ಶಿಕ್ಷಕನ ಕೆಲಸವು ಕಡಿಮೆ ಇದ್ದು ವಿದ್ಯಾರ್ಥಿಗಳ ಕೆಲಸವು ಬಹಳವಾಗಿರುವದು. ಎರಡೂ ಪದ್ಧತಿಗಳಲ್ಲಿ ಬಾಲಕರಿಗೆ ಸ್ವಾತಂತ್ರ್ಯವಿದ್ದು ಶಿಕ್ಷಕನು ಕೇವಲ ಮಾರ್ಗದರ್ಶಕನಾಗಿ ವಿದ್ಯಾರ್ಥಿಗಳ ಒಲವಿಗನುಸರಿಸಿ ಕೆಲಸಮಾಡುವನು. ಬಾಲಕರ ಶಾರೀರಿಕ, ನೈತಿಕ, ಮಾನಸಿಕ ಉನ್ನತಿಯಾಗುವಂತೆ ಎರಡೂ ಪದ್ಧತಿಗಳಲ್ಲಿ ಪಾಠಗಳ ಮತ್ತು ಆಟಗಳ ಯೋಜನೆಯುಂಟು.

**ವೈಷಮ್ಯ**:—ಫ್ರೋಬೆಲ್ಲನ ಶಿಕ್ಷಣವು ಸಾಮೂಹಿಕವಾದದ್ದು. ಆದರೆ ಮಾಂಟೆಸೋರಿಯ ಶಿಕ್ಷಣವು ಆಟ, ಡ್ರಿಲ್ಲು ಮುಂತಾದ ಕೆಲವು ವಿಷಯಗಳ ಹೊರತು ಉಳಿದ ವಿಷಯಗಳಲ್ಲಿ ವ್ಯಕ್ತಿ ವಿಷಯಕವಾದದ್ದಿರುವದು. ಇಂದ್ರಿಯ ಶಿಕ್ಷಣದ ಪರಿಣಾಮವು ಮಾಂಟೆಸೋರಿಯ ಪದ್ಧತಿಯಿಂದಾದಷ್ಟು ಫ್ರೋಬೆಲ್ಲನ ಪದ್ಧತಿಯಿಂದ ಆಗುವದಿಲ್ಲ. ಫ್ರೋಬೆಲ್ಲನ ಉಪಕರಣಗಳು ಪೂರ್ಣ ಹಾಗು ಅಪೂರ್ಣ ವಸ್ತುಗಳಿರುವವು. ಆದರೆ ಮಾಂಟೆಸೋರಿಯ ಉಪಕರಣಗಳು ಕೇವಲ ಪೂರ್ಣ ವಸ್ತುಗಳಿರುವವು. ಕಿಂಡರ ಗಾರ್ಟನ್ ಪದ್ಧತಿಯಲ್ಲಿ ಲೇಖನ ಹಾಗು ವಾಚನವನ್ನು ಕಲಿಸುವ ಯೋಜನೆಯಿರುವದಿಲ್ಲ ಮಾಂಟೆಸೋರಿಯ ಪದ್ಧತಿಯಲ್ಲಿ ಉಂಟು. ಫ್ರೋಬೆಲ್ಲನ ಪದ್ಧತಿಯಲ್ಲಿ ಶಿಕ್ಷಕನು ಯಾವಾಗಲೂ ವಿದ್ಯಾರ್ಥಿಗಳ ಹತ್ತರಿದ್ದು ಶಿಕ್ಷಣ ಕೊಡಬೇಕಾಗುವದು; ಅದರಿಂದ ಬಾಲಕರು ಬಹುತರ ಶಿಕ್ಷಕನ ಅನುಕರಣವನ್ನು ಮಾತ್ರ ಮಾಡುವರು; ಆದರೆ ಮಾಂಟೆಸೋರಿಯ ಪದ್ಧತಿಯಲ್ಲಿ ಹೊಸ ಸಂಗತಿಗಳನ್ನು ತಾವೇ ಗೊತ್ತುಮಾಡಿಕೊಳ್ಳುವರು. ಕಿಂಡರಗಾರ್ಟನ ಪದ್ಧತಿಯಲ್ಲಿ ಶಿಕ್ಷಕನಿಗೆ ತಾನು ಕೊಡುವ ಶಿಕ್ಷಣದ

ಬಗ್ಗೆ ಆತ್ಮವಿಶ್ವಾಸವಿರುವದಿಲ್ಲ; ಆದರೆ ಮಾಂಟೆಸೋರಿಯು ಪದ್ಧತಿಯಲ್ಲಿ ದೃಢವಾದ ಆತ್ಮವಿಶ್ವಾಸವಿರುವದು. ಫ್ರೊಬೆಲ್ಲನ ಉಪಕರಣಗಳಿಂದ ಬಾಲಕರ ಶಾರೀರಕ ಪ್ರಗತಿಯಾಗುವದಿಲ್ಲ. ಮಾಂಟೆಸೋರಿಯು ಉಪಕರಣಗಳಿಂದಾಗುತ್ತದೆ. ವಿದ್ಯಾರ್ಥಿಗಳಿಗೆ ಕಥೆಗಳದ್ವಾರ ಸಾಮಾಜಿಕ ಶಿಕ್ಷಣವು ದೊರೆಯುವಂತೆ ಫ್ರೊಬೆಲ್ಲನ ಯೋಜನಾಕ್ರಮವಿರುವದು; ಮಾಂಟೆಸೋರಿಯು ಸಮಾಜದ ಕೆಲಸಗಳನ್ನು ಪ್ರತ್ಯಕ್ಷವಾಗಿ ಹುಡುಗರಿಂದ ಮಾಡಿಸಿಯೇ ಬಿಡುವಳು. ಒಟ್ಟಿನ ಮೇಲೆ ಕಿಂಡರಗಾರ್ಟನ ಪದ್ಧತಿಯಲ್ಲಿ ಶಿಕ್ಷಕನು ಕಲಿಸುತ್ತಾನೆ; ಮಾಂಟೆಸೋರಿಯು ಪದ್ಧತಿಯಲ್ಲಿ ವಿದ್ಯಾರ್ಥಿಯೇ ಕಲಿಯುತ್ತಾನೆಂದು ಹೇಳಬಹುದು.

---

## ೨೦. ಡಾಲ್ಟನ್ ಪ್ಲ್ಯಾನ ಎಂಬ ಹೊಸ ಪದ್ಧತಿ.

(೧) **ಪೂರ್ವೇತಿಹಾಸ:—** ಡಾಲ್ಟನ್ ಎಂಬದು ಅಮೇರಿಕೆಯೊಳಗಿನದೊಂದು ಪಟ್ಟಣವು. ಅಲ್ಲಿಯ ಹಾಯಸ್ಕೂಲಿನ ಶಿಕ್ಷಿಕೆಯಾದ ಕುಮಾರಿ ಹೆಲೆನ್ ಪಾರ್ಕಹರ್ಸ್ಟ ಎಂಬವಳು ಈ ಪದ್ಧತಿಯ ಉತ್ಪಾದಕಳು. ಇತ್ತಲಾಗಿ ಶಿಕ್ಷಣ ಶಾಸ್ತ್ರಜ್ಞರು ಇಡೀ ವರ್ಗದ ಶಿಕ್ಷಣಕ್ಕಿಂತ ವ್ಯಕ್ತಿಯ ಶಿಕ್ಷಣವು ಮಹತ್ವವಾದದ್ದೆಂದು ಅಭಿಪ್ರಾಯ ಪಡಹತ್ತಿದ್ದಾರೆ. ಆದರೆ ಕುಮಾರಿ ಪಾರ್ಕಹರ್ಸ್ಟಳು ತನ್ನ ಪದ್ಧತಿಯಲ್ಲಿ ಈ ಎರಡೂ ಪದ್ಧತಿಗಳನ್ನು ಅನುಕೂಲವಾದ ರೀತಿಯಿಂದ ಏಕೀಕರಿಸಲು ಪ್ರಯತ್ನಿಸಿದ್ದಾಳೆ. ಇವಳು ಮೊದಲು ಇ. ಸ. ೧೯೨೦ ರಲ್ಲಿ ೮ರಿಂದ ೧೨ ವರ್ಷಗಳ ಹುಡುಗರಿಗೆ ಈ ಪದ್ಧತಿಯಿಂದ ಶಿಕ್ಷಣಕೊಟ್ಟು ಇದರ ಉಪಯುಕ್ತತೆಯನ್ನು ಕಂಡುಹಿಡಿದಳು. ಬಳಿಕ ಆ ಸಾಲೆಯ ಮುಖ್ಯಾಧ್ಯಾಪಕನಿಗೆ ತನ್ನ ಪದ್ಧತಿಯ ತತ್ವಗಳನ್ನೂ ಗುಣವಿಶೇಷಗಳನ್ನೂ ಚೆನ್ನಾಗಿ ತಿಳಿಸಿದಳು. ಅವನಾದರೂ ಇದರ ಉಪಯುಕ್ತತೆಯನ್ನು ಮನಗಂಡು, ವರಿಷ್ಠರಿಂದ ಅಪ್ಪಣೆಯನ್ನು ಪಡೆದು ತನ್ನ ಸಾಲೆಯಲ್ಲಿ ಈ ಪದ್ಧತಿಯಿಂದ ಶಿಕ್ಷಣಕೊಡುವದಕ್ಕೆ ಪ್ರಾರಂಭಿಸಿದನು. ಆದರೆ ಈ ಹೊಸ ಪದ್ಧತಿಯ ವಿಷಯಕ್ಕೆ ಜನರಲ್ಲಿ ಸಂಪೂರ್ಣವಾದ ನಂಬಿಗೆಯು ಮಾತ್ರ ಹುಟ್ಟಲಿಲ್ಲ. ಮುಂದೆ ನ್ಯೂಯಾರ್ಕದ ಚಿಕ್ಕಮಕ್ಕಳ ವಿಶ್ವವಿದ್ಯಾಲಯದಲ್ಲಿಯೂ ಈ ಪದ್ಧತಿಯ ತತ್ವದಂತೆ ಪ್ರಯೋಗಮಾಡಿ ನೋಡಿದರು. ಅದರ ಪರಿಣಾಮವು ಕೊನೆಯಲ್ಲಿ ಅತ್ಯಂತ ಸ್ಫೂರ್ತಿದಾಯಕವೆಂದು ಕಂಡು ಬಂದದರಿಂದ ಕು. ಪಾರ್ಕಹರ್ಸ್ಟ ಇವಳ ಹೆಸರು ಶಿಕ್ಷಣ ಸುಧಾರಕರ ಮಾಲಿಕೆಯಲ್ಲಿ ಸೇರಿಸಲ್ಪಟ್ಟಿತು.

(೨) **ಸಾಮಾನ್ಯ ವರ್ಣನೆ:—** ಈ ಪದ್ಧತಿಯಲ್ಲಿ ಹುಡುಗರನ್ನು ಕೋಣೆಯೊಳಗೆ ಕೂಡ್ರಿಸಿಕೊಂಡು ಕಲಿಸುವದು ಕಡಿಮೆ. ವಿದ್ಯಾರ್ಥಿಗಳನ್ನು ಬೇರೆ ಬೇರೆ

ತರಗತಿಯವರನ್ನಾಗಿ ವಿಭಾಗಿಸುವರು. ಆದರೆ ಒಂದೇ ತರಗತಿಯ ಹುಡುಗರೆಲ್ಲರು ಒಂದೇ ಕೋಣೆಯಲ್ಲಿ ಕುಳಿತು ಶಿಕ್ಷಕನು ಹೇಳಿದಂತೆ ಕಲಿಯಬೇಕೆಂಬ ನಿರ್ಬಂಧವಿರುವದಿಲ್ಲ ವರ್ಗದ ಶಿಕ್ಷಣದಿಂದಲೇ ಚೆನ್ನಾಗಿ ಸಾಗುವಂತಹ ವಿಷಯಗಳ ಶಿಕ್ಷಣಕ್ಕಾಗಿ ಮಾತ್ರ ಒಂದೇ ತರಗತಿಯವರು ಒಂದೆಡೆಯಲ್ಲಿ ಸೇರಬೇಕಾಗುವದು. ಉಳಿದ ಶಿಕ್ಷಣಕ್ಕೆ ಹುಡುಗರು ತಮತಮಗೆ ಇಷ್ಟವಾದ ಕೋಣೆಗಳಿಗೆ ಹೋಗುವರು. ಈ ಕೋಣೆಗಳಿಗೆಲ್ಲ ಪ್ರಯೋಗಶಾಲೆಗಳೆಂಬ ಹೆಸರು. ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟ ಎಲ್ಲ ತರದ ಜ್ಞಾನಾರ್ಜನೆಯ ಸಾಧನಗಳು ಈ ಪ್ರಯೋಗಶಾಲೆಗಳಲ್ಲಿ ವ್ಯವಸ್ಥಿತವಾಗಿ ಇಡಲ್ಪಟ್ಟಿರುತ್ತವೆ. ಉದಾಹರಣಾರ್ಥವಾಗಿ ಭಾಷಾ ವಿಷಯಕ ಪ್ರಯೋಗಶಾಲೆಯಲ್ಲಿ ಅನೇಕ ಪ್ರಕಾರದ ಶಬ್ದ ಕೋಶಗಳೂ ಜ್ಞಾನ ಕೋಶಗಳೂ ಗದ್ಯ ಪುಸ್ತಕಗಳೂ ಭಾಷಾ ಶಾಸ್ತ್ರಜ್ಞರ ಭಾವಪಟಗಳೂ ಇವೇ ಮುಂತಾದ ಸಾಮಗ್ರಿಗಳಿರುವವು. ಇದರಂತೆಯೇ ಇತಿಹಾಸದ ಪ್ರಯೋಗ ಶಾಲೆಯಲ್ಲಿ ಅನೇಕ ಐತಿಹಾಸಿಕ ಗ್ರಂಥಗಳೂ, ನಕಾಶಗಳೂ, ಕಥಾರೂಪದ ಇತಿಹಾಸ ಪುಸ್ತಕಗಳೂ ಮುಂತಾದ ಎಲ್ಲ ಸಾಧನಗಳಿರುವವು. ಒಂದೇ ವಿಷಯವನ್ನು ಕಲಿಯತಕ್ಕ ವಿದ್ಯಾರ್ಥಿಗಳು ಬೇರೆ ಬೇರೆ ತರಗತಿಯವರಿದ್ದರೂ ಅವರು ಆಯಾ ವಿಷಯದ ಪ್ರಯೋಗ ಶಾಲೆಯಲ್ಲಿಯೇ ಕುಳಿತುಕೊಳ್ಳುವರು.

ಪ್ರತಿಯೊಂದು ಪ್ರಯೋಗಶಾಲೆಗೆ ಆಯಾ ವಿಷಯದಲ್ಲಿ ನಿಪುಣನಾದ ಒಬ್ಬ ಶಿಕ್ಷಕನಿರುತ್ತಾನೆ. ಅವನು ಅವಶ್ಯವಿದ್ದಲ್ಲಿ ಮಾತ್ರ ಹುಡುಗರಿಗೆ ತಕ್ಕ ಸಹಾಯವನ್ನು ಮಾಡುವನು. ಆದರೆ ಹುಡುಗರಿಗೆ ತಿಳಿಯದೇ ಇದ್ದ ವಿಷಯದ ಸಂಪೂರ್ಣ ಭಾಗವನ್ನು ಸ್ಪಷ್ಟವಾಗಿ ತಾನೇ ತಿಳಿಸುವನು. ಮತ್ತು ಪ್ರಯೋಗಶಾಲೆಯೊಳಗಿನ ಸಾಧನಗಳ ಯೋಗ್ಯವಾದ ಉಪಯೋಗವನ್ನು ಮಾಡಿಕೊಳ್ಳುವ ರೀತಿ ಪದ್ಧತಿಗಳನ್ನು ಗೊತ್ತು ಮಾಡಿ ಕೊಡುವನು. ಪರಸ್ಪರರಿಗೆ ತೊಂದರೆಯಾಗದಂತೆ ಹುಡುಗರೆಲ್ಲರು ತಮ್ಮತಮ್ಮ ಮನಸ್ಸಿಗೆ ಬಂದ ಕಾರ್ಯದಲ್ಲಿ ತೊಡಗುವಂತೆ ವ್ಯವಸ್ಥೆಯನ್ನಿಡುವನು. ಯಾವನಾದರೊಬ್ಬ ಹುಡುಗನು ತನ್ನ ವಿಷಯದಲ್ಲಿ ಬಹಳೇ ಹಿಂದುಳಿಯಹತ್ತಿದರೆ ಅವನಿಗೆ ಸೌಮ್ಯ ರೀತಿಯಿಂದ ಉಪದೇಶ ಮಾಡುವನು. ಆದರೆ ಈ ತರದ ಉಪದೇಶವನ್ನು ಕೇಳುವ ಇಲ್ಲವೆ ಕೇಳದಿರುವ ಸಂಪೂರ್ಣ ಸ್ವಾತಂತ್ರ್ಯವು ಹುಡುಗನಿಗಿರುತ್ತದೆ.

ಹುಡುಗರು ತಮಗೆ ಇಷ್ಟವಾದ ಒಂದೇ ಪ್ರಯೋಗಶಾಲೆಯಲ್ಲಿ ೨-೩ ತಾಸು ಒಂದೇ ಸಮನಾಗಿ ಕಳೆಯಬಹುದು. ಇಲ್ಲವೆ ಪ್ರತಿ ಅರ್ಧ ತಾಸಿಗೂ ಬೇರೆ ಬೇರೆ ಕೋಣೆಗಳಿಗೆ ಹೋಗಬಹುದು. ಪ್ರತಿ ಒಬ್ಬ ವಿದ್ಯಾರ್ಥಿಗೆ ಪ್ರತಿ ಒಂದು ವಿಷಯದ ಕೆಲವೊಂದು ಭಾಗವು ನಿಯಮಿಸಿಕೊಡಲ್ಪಡುತ್ತದೆ. ಅದಕ್ಕನುಸರಿಸಿ ಅವನು ಒಂದು ತಿಂಗಳಲ್ಲಿ ಕೆಲವು ಪಾಠಗಳನ್ನು ಕಲಿಯಬೇಕಾಗುವದು. ಮತ್ತು ಪ್ರತಿ ಒಬ್ಬ ಹುಡುಗನು ಪ್ರತಿ ದಿವಸದಲ್ಲಾದ ತನ್ನ ಅಭ್ಯಾಸದ ಪ್ರಗತಿಯನ್ನು ಬರೆದಿಡಬೇಕಾಗುವದು.

ವಿದ್ಯಾರ್ಥಿಯು ತನ್ನ ನಿಯಮಿತವಾದ ಅಭ್ಯಾಸವನ್ನು ಪ್ರಥಮ ಪಕ್ಷದಲ್ಲಿಯೇ ಮುಗಿಸಿ ಮುಂದಿನ ಎಲ್ಲ ದಿವಸಗಳನ್ನು ವಿಶ್ರಾಂತಿಯಲ್ಲಿ ಕಳೆಯುಬಹುದು; ಇಲ್ಲವೆ ಮೊದಲಿನ ದಿವಸಗಳನ್ನು ವ್ಯರ್ಥವಾಗಿ ಕಳೆದು ತಿಂಗಳ ಕೊನೆಯು ಭಾಗದಲ್ಲಿ ತನ್ನ ಕೆಲಸವನ್ನು ಪೂರ್ಣಮಾಡಬಹುದು; ಅಥವಾ ದಿನಾಲು ಸಾವಕಾಶವಾಗಿ ಕೆಲವು ಭಾಗವನ್ನು ಮಾಡುತ್ತ ತಿಂಗಳ ಕಡೆಯಲ್ಲಿ ಸರಿಯಾಗಿ ತನ್ನ ಪಾಠವನ್ನು ಮುಗಿಸಬಹುದು. ಆದರೆ ಅವನು ತನ್ನ ಮೊದಲಿನ ಪಾಠಗಳನ್ನು ಚನ್ನಾಗಿ ಮುಗಿಸಿ ಅದರಲ್ಲಿ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಟ್ಟ ಹೊರತು ಮುಂದಿನ ಪಾಠಗಳನ್ನು ಕಲಿಯುಲಿಕ್ಕೆ ಅವನಿಗೆ ಅಪ್ಪಣೆಯು ದೊರೆಯುಲಾರದು. ಈ ಪದ್ಧತಿಯಲ್ಲಿ ವಿದ್ಯಾರ್ಥಿಗಳಿಗಿರತಕ್ಕ ನಿರ್ಬಂಧ ವೆಂದರೆ ಇದೊಂದೇ.

**(೩) ಮಾಂಟೆಸೋರಿ ಪದ್ಧತಿಗೂ ಡ್ಯಾಲನ್ ಪ್ಲ್ಯಾನ್ ಪದ್ಧತಿಗೂ ತುಲನೆ**:— ಮಾಂಟೆಸೋರಿ ಪದ್ಧತಿಯು ತೀರ ಚಿಕ್ಕ ಬಾಲಕರಿಗೆ ವಿಶೇಷ ಉಪಯುಕ್ತವಾದದ್ದು. ಡ್ಯಾಲನ್ ಪದ್ಧತಿಯು ಪ್ರೌಢ ವಿದ್ಯಾರ್ಥಿಗಳಿಗೆ ತಮ್ಮ ಪ್ರೀತಿಯ ಅಭ್ಯಾಸದ ವಿಷಯಗಳಲ್ಲಿ ಪ್ರಗತಿಯನ್ನು ಹೊಂದಲಿಕ್ಕೆ ಅನುಕೂಲವಾದದ್ದು. ಇವೆರಡೂ ಪದ್ಧತಿಗಳಲ್ಲಿ ವ್ಯಕ್ತಿಶಿಕ್ಷಣಕ್ಕೆ ಪ್ರಾಧಾನ್ಯವಿರುವದು. ಮಾಂಟೆಸೋರಿಯು ಪದ್ಧತಿಯು ಪ್ರಮೇಯುವೆಂದು ಕಲ್ಪಿಸಿದರೆ ಡ್ಯಾಲನ್ ಪ್ಲ್ಯಾನ್ ಪದ್ಧತಿಯು ಅದರ ಕುರಲರಿಯು. ಡ್ಯಾಲನ್ ಪ್ಲ್ಯಾನ್‌ದಲ್ಲಿಯ ಶಿಕ್ಷಕರು ತಮ್ಮ ತಮ್ಮ ವಿಷಯಗಳಲ್ಲಿ ನಿಷ್ಣಾತರಿರಬೇಕಾಗುವದು. ಅಂದರೆ ಮಾತ್ರ ಅವರು ತಮ್ಮ ವಿದ್ಯಾರ್ಥಿಗಳಿಗೆ ಯೋಗ್ಯ ಮಾರ್ಗದರ್ಶಕರಾಗುವರು. ಈ ಪದ್ಧತಿಯಿಂದ ಕಲಿಸತಕ್ಕ ಶಾಲೆಗಳಲ್ಲಿ ಉಪಕರಗಳನ್ನೂ ಪುಸ್ತಕಗಳನ್ನೂ ಸಂಗ್ರಹಮಾಡಿ ವ್ಯವಸ್ಥಿತವಾಗಿ ಬೇರೆ ಬೇರೆ ವಿಷಯುಗಳ ಅಭ್ಯಾಸಕ್ಕೆ ಅನುಕೂಲವಾಗುವಂತೆ ಇಡತಕ್ಕದ್ದು. ಈ ಅನುಕೂಲತೆಗಳು ಇಲ್ಲದಲ್ಲಿ ಈ ಪದ್ಧತಿಯ ಪ್ರಯೋಗವನ್ನು ಮಾಡುವದು ಅಸಾಧ್ಯವು. ಮಾಂಟೆಸೋರಿಯು ಪದ್ಧತಿಯ ಉಪಕರಣಗಳನ್ನು ತಾವೇ ರಚಿಸಿಕೊಳ್ಳಬಹುದು. ಅದಕ್ಕೆ ವೆಚ್ಚವು ವಿಶೇಷವಿಲ್ಲ. ಡಾಲ್ಟನ್ ಪ್ಲ್ಯಾನ್‌ದ ಪದ್ಧತಿಯು ಉಪಕರಣಗಳನ್ನು ಸಂಗ್ರಹಿಸಲಿಕ್ಕೆ ಹೆಚ್ಚು ವೆಚ್ಚವು ಹತ್ತುವದು. ಮತ್ತು ಅವೆಲ್ಲ ಉಪಕರಣಗಳನ್ನು ಶಿಕ್ಷಕರೇ ರಚಿಸಿಕೊಳ್ಳುವದು ಬಹು ಗಡಚಾದದ್ದು. ನಮ್ಮಲ್ಲಿಯ ಹಾಯಸ್ಕೂಲುಗಳಲ್ಲಿ ಡಾಲ್ಟನ್ ಪದ್ಧತಿಯಂತೆ ಶಿಕ್ಷಣವನ್ನು ಸಾಗಿಸಲಿಕ್ಕೆ ಅನುಕೂಲತೆಗಳಿರುವವು ಆದರೆ ನಮ್ಮಲ್ಲಿಯ ಪ್ರಾ. ಶಾ. ಗಳಲ್ಲಿ ಈ ಪದ್ಧತಿಯನ್ನು ಪ್ರಯೋಗಿಸುವದು ಸದ್ಯಕ್ಕೆ ಅಸಾಧ್ಯವಾಗಿ ಕಂಡುಬರುವದು. ಮಾಂಟೆಸೋರಿಯು ಪದ್ಧತಿಯನ್ನು ಚನ್ನಾಗಿ ಅಭ್ಯಾಸಿಸಿ ತಕ್ಕ ಉಪಕರಣಗಳನ್ನು ಸಿದ್ಧಪಡಿಸಿಕೊಂಡು ಪ್ರಯೋಗ ಮಾಡುವದು ಟ್ರೇಂಡ ಶಿಕ್ಷಕರ ಕರ್ತವ್ಯವು. ಇವೆರಡೂ ಪದ್ಧತಿಗಳಲ್ಲಿ ವ್ಯಕ್ತಿಶಿಕ್ಷಣಕ್ಕೆ ಅತಿಶಯವಾದ ಮಹತ್ವವಿರುವದು. ಆದ್ದರಿಂದ ವರ್ಗದ ಶಿಕ್ಷಣದೊಂದಿಗೆ ಈ ವ್ಯಕ್ತಿಶಿಕ್ಷಣದ ತತ್ವವನ್ನು ಮನಸಿನಲ್ಲಿಟ್ಟು ಹಿಂದುಳಿದ ಹುಡುಗರಿಗೆ ಹೆಚ್ಚು

ಶಿಕ್ಷಣವನ್ನು ಕೊಡುವದೂ ಮುಂದರಿದ ಹುಡುಗರಿಗೆ ನಿರುತ್ಸಾಹವುಂಟಾಗದಂತೆ ಹೆಚ್ಚಿನ ಅಭ್ಯಾಸ ಮಾಡಿಸುವದೂ ಅವಶ್ಯವಿದೆ. ಪ್ರಾ. ಶಿ. ದ ಅಭ್ಯಾಸವು ಈಗ ೮ ವರ್ಷಗಳಲ್ಲಿ ಮುಗಿಯುವದು. ಈ ಅವಧಿಯು ಸಾಧಾರಣ ಬುದ್ಧಿಯುಳ್ಳ ಹುಡುಗರಿಗೆ ಸಹ ಸಾಕು. ಚುರುಕಾದ ಹುಡುಗರು ೬ ವರ್ಷಗಳಲ್ಲಿ ಈ ಅಭ್ಯಾಸವನ್ನೆಲ್ಲ ಮುಗಿಸ ಬಹುದೆಂಬದು ಧಾರವಾಡದ ಪ್ರಾ. ಸ್ಕೂ. ನಲ್ಲಿ ಮಾಡಿದ ಪ್ರಯೋಗಗಳಿಂದ ಕಂಡು ಬಂದದೆ.

## ೨೧. ಪಾಠದ ಟಿಪ್ಪಣಿ.

ಬೇರೆ ಬೇರೆ ವಿಷಯಗಳನ್ನು ಕಲಿಸುವ ಟಿಪ್ಪಣಿಯನ್ನು ತಯಾರಿಸುವಾಗ ಮುಂದೆ ಹೇಳುವಂತೆ ಮೆಟ್ಟುಗಳನ್ನು ಕಲ್ಪಿಸಿಕೊಳ್ಳಬೇಕಾಗುವದು. ಉಪೋದ್ಘಾತ ಮತ್ತು ಉಪಸಂಹಾರ ಈ ಎರಡು ಮೆಟ್ಟುಗಳು ಎಲ್ಲ ಪಾಠಗಳಿಗೂ ಸಾಮಾನ್ಯವಾಗಿರುವವು.

### ವಾಚನ.

| ಕೆಳಗಿನ ಇಯತ್ತೆ. (೧ – ೩) | ಮೇಲಿನ ಇಯತ್ತೆ. (೪ – ೭) |
|---|---|
| ೧. ಪಾಠದ ಸಾರಾಂಶ ಮತ್ತು ಕಠಿಣ ಶಬ್ದಗಳ ವಾಚನ. | ೧ ಪಾಠದ ಸಾರಾಂಶ. |
| ೨. ಶಿಕ್ಷಕನ ವಾಚನ. | ೨ ಮೌನ ವಾಚನ; ಬಳಿಕ ಒಂದೊಂದು ಕಲಮಿನ ಸಾರಾಂಶವನ್ನು ಸಂಗ್ರಹಿಸಿ ಹೇಳುವದು. |
| ೩. ಬಾಲಕರ ವಾಚನ. | ೩. ಶಬ್ದಾರ್ಥ ವಾಕ್ಯಾರ್ಥಗಳ ವಿವರಣೆ. |
| ೪. ಕಠಿಣ ಶಬ್ದಗಳ ಅರ್ಥ. | ೪. ವ್ಯಾಕರಣ ವಿಶೇಷಗಳು. |
| ೫. ಓದಿದ ಭಾಗದಲ್ಲಿ ಪ್ರಶ್ನಗಳು ( ವಾಕ್ಯಾರ್ಥ ವಿವರಣೆ ವರುಂ. ) | ೫. ಓದಿದ ಭಾಗದ ತಾತ್ಪರ್ಯ. |

### ಕವಿತೆ.

| ಕೆಳಗಿನ ಇಯತ್ತೆ (೧ – ೩) | ಮೇಲಿನ ಇಯತ್ತೆ. (೪ – ೭) |
|---|---|
| ೧. ಶಿಕ್ಷಕನು ಪದ್ಯವನ್ನು ಸರಿಯಾಗಿ ಅನ್ನುವದು. | ೧. ಶಿಕ್ಷಕನು ಪದ್ಧತಿಯಿಂದ ಅನ್ನುವದು. |
| ೨. ಪದ್ಯದ ಸಾರಾಂಶ. | ೨. ಪದ್ಯದ ಸಾರಾಂಶ. |
| ೩. ಅನ್ವಯ. | ೩. ಅನ್ವಯ. |
| ೪. ಶಬ್ದಾರ್ಥ ವಾಕ್ಯಾರ್ಥಗಳ ವಿವರಣೆ. | ೪. ಅರ್ಥವಿವರಣೆ. |
| ೫. ಕವಿತೆಯ ತಾತ್ಪರ್ಯ. | ೫. ವ್ಯಾಕರಣ ವಿಶೇಷ. |

| | |
|---|---|
| ೬. ಬಾಲಕರು ಪದ್ಯವನ್ನು ಅನ್ನುವದು. | ೬. ಪದ್ಯದ ಭಾವಾರ್ಥವನ್ನು ಹುಡುಗರಿಂದ ಹೊರಡಿಸುವದು. |
| | ೭. ವಿದ್ಯಾರ್ಥಿಗಳು ಪದ್ಯವನ್ನು ಅನ್ನುವದು. |

### ೩. ಭೂಗೋಲ.

| ಪ್ರಾಕೃತಿಕ. | ಪ್ರಾಂತ ಅಥವಾ ದೇಶ. |
|---|---|
| ೧. ಮಾಡೆಲ್ಲಿನ ನಿರೀಕ್ಷಣ | ೧. ಮಾಡೆಲ್ಲು ನಕಾಶಗಳ ನಿರೀಕ್ಷಣ ಪ್ರಾಕೃತಿಕ ಸ್ವರೂಪ. |
| ೨. ನಿರೀಕ್ಷಿಸಿದ ಸಂಗತಿಗಳ ಮೇಲಿಂದ ವಿಚಾರ | ೨. ಹವೆ, ಮಳೆ, ಬೆಳೆ. |
| ೩. ಅವುಗಳಿಂದಾಗುವ ಪರಿಣಾಮಗಳು. | ೩. ಜನರ ಆಹಾರ, ಸ್ವಭಾವ, ಉದ್ಯೋಗ ಮುಂತಾದವುಗಳು. |
| | ೪. ರಾಜಕೀಯ ವಿಭಾಗಗಳು. |
| | ೫. ಮುಖ್ಯ ಪಟ್ಟಣಗಳು, ಮಾರ್ಗಗಳು |
| | ೬. ಆ ದೇಶದ ಅಥವಾ ಪ್ರಾಂತದ ಇತಿಹಾಸಕ್ಕೆ ಸಂಬಂಧಿಸಿದ ಮಹತ್ವದ ವಿಚಾರಗಳು. ( ಮೇಲಿನ ೬-೭ ಇಯತ್ತೆಗಳಿಗೆ ) |

**ಸೂಚನೆ—** ನಕಾಶ, ಮಾಡೆಲ್ಲುಗಳಿಲ್ಲದೆ ಭೂಗೋಲ ವಿಷಯವನ್ನು ಕಲಿಸಬಾರದು.

### ೪. ಇತಿಹಾಸ.

| ಜೀವನ ಚರಿತ್ರೆ. | ಒಂದು ಕಾಲದ ಇತಿಹಾಸ. |
|---|---|
| ೧. ಪ್ರಸಿದ್ಧಿಯ ಕಾರಣಗಳು. | ೧. ಮುಖ್ಯ ಮನೆತನದ ವಿಚಾರ. |
| ೨. ಬಾಲ್ಯ ಹಾಗು ತಾರುಣ್ಯ(ಪೂರ್ವ ಸಿದ್ಧತೆ) | ೨. ಮಿತ್ರ ಅಥವಾ ಶತ್ರು ರಾಜರಿಂದ ಆದ ಸಹಾಯ ಅಥವಾ ಹಾನಿ. |
| ೩. ಮಹತ್ವದ ಕಾರ್ಯಗಳು. | ೩. ರಾಜಕೀಯ ಧೋರಣ. |
| ೪. ಆ ಕಾಲದ ಜನರ ಹಾಗೂ ದೇಶದಮೇಲೆ ಆದ ಪರಿಣಾಮ. | ೪. ಯುದ್ಧವಾಗಿದ್ದರೆ ಅದರ ಸಂಕ್ಷಿಪ್ತ ವರ್ಣನೆ. |
| | ೫. ದೇಶದ ಸ್ಥಿತಿ. |

### ೫. ಗಣಿತ.

| | |
|---|---|
| ೧. ಸುಲಭ ಉದಾಹರಣೆಗಳು. | ೨. ತತ್ವದ ಕಲ್ಪನೆ. |
| ೩. ಬಾಲಕರ ಕೆಲಸ. | ೪. ತತ್ವದ ಪುನರಾವರ್ತನ. |

# ೧ನೆಯ ಇಯತ್ತೆ.

**ಶಿಕ್ಷಕ—**

**ವಿಷಯ:—** ವಾಚನ (೧೧ ನೆಯ ಪಾಠದ ಮೊದಲಿನ ಮೂರು ಕಲಮುಗಳು)

**ವೇಳೆ:—** ೪೫ ಮಿನಿಟು.

**ಉಪಕರಣ:—** ಹುಡುಗರ ಪಂತಿಯು ಚಿತ್ರ.

**ಉಪೋದ್ಘಾತ:—** ಮನೆಯಲ್ಲಿ ನೀವು ಬೇರೆ ಬೇರೆ ಹುಡುಗರು ಕೂಡಿ ಎಂದಾದರೂ ಪಂತಿಯನ್ನು ಮಾಡಿರುವಿರೋ? ಪಂತಿಗೆ ಯಾರು ಯಾರು ಬಂದಿದ್ದರು? ಏನೇನು ತಂದಿದ್ದಿರಿ? ಈ ಪ್ರಶ್ನೆಗಳನ್ನು ಕೇಳಿ ವಿಷಯವನ್ನು ಆರಂಭಿಸುವದು.

| ಮೆಟ್ಟು. | ವಿಷಯ. | ಕ್ರಮ. | ಕ. ಹ. ಉಪಯೋಗ. |
|---|---|---|---|
| ೧ ಪಾಠದ ಸಾರಾಂಶವು. | ಹುಣ್ಣಿವೆಯ ದಿನ ಬೆಳದಿಂಗಳಲ್ಲಿ ರಾಮು, ಗೋವಿಂದ, ರಂಗ, ಭೀಮ ಇವರೂ ಇನ್ನೂ ಕೆಲವು ಸಣ್ಣ ಹುಡುಗರೂ ಕೂಡಿ ಪಂತಿಯನ್ನು ಮಾಡಿದರು. ಹುಡುಗರು ಬೇರೆ ಬೇರೆ ಪದಾರ್ಥಗಳನ್ನು ತಂದಿದ್ದರು. ಪಂತೀ ಮಾಡಿ ಬೆಳದಿಂಗಳಲ್ಲಿ ಆನಂದದಿಂದ ಹೊತ್ತು ಕಳೆದರು. | ಪಂತಿಯ ಚಿತ್ರವನ್ನು ತೋರಿಸಿ, ಇದರಲ್ಲಿ ಯಾರು ಇರುವರು? ಎಲ್ಲಿ ಕುಳಿತಿರುವರು? ಎಡೆಯಲ್ಲಿ ಏನೇನು ಅದೆ? ಈ ಪ್ರಶ್ನೆಗಳನ್ನು ಮಾಡುವದು. | |
| ೨ ಕಠಿಣ ಶಬ್ದಗಳ ಉಚ್ಚಾರ | ಭಾರತ ಹುಣ್ಣಿವೆ, ಬರುತ್ತೀರಾ, ನಮ್ಮವ್ವನು, ಕಲಸನ್ನ. | ಈ ಶಬ್ದಗಳನ್ನು ಕರೇ ಹಲಗೆಯ ಮೇಲೆ ಬರೆದು ಹುಡುಗರಿಂದ ಓದಿಸಿ ಸ್ಪಷ್ಟೋಚ್ಚಾರ ಮಾಡಿಸುವದು | ಭಾರತ ಹುಣ್ಣಿವೆ, ಬರುತ್ತೀರಾ, ನಮ್ಮವ್ವನು, ಕಲಸನ್ನ. |

| | | | |
|---|---|---|---|
| ೩ (ಅ) ಮಾದರಿಯ ವಾಚನ. | ರಾಮು ... ... ... ... ... ... ಬರುತ್ತೀರಾ. | ಶಿಕ್ಷಕನು ಮಾದರಿಗಾಗಿ ಎಡಕ್ಕೆ ಬರೆದ ಖಂಡವನ್ನು ಓದಿ ತೋರಿಸುವದು. | |
| (ಬ) ಗುಪ್ತವಿರಾಮ. | ಹಾಗೆ, ನಾವೆಲ್ಲರು, ಅಂಗಳದಲ್ಲಿ, | ಈ ಸ್ಥಳಗಳಲ್ಲಿದ್ದ ಗುಪ್ತವಿರಾಮಗಳನ್ನು ಪುಸ್ತಕದಲ್ಲಿ ಗುರುತು ಮಾಡಿಕೊಳ್ಳಲಿಕ್ಕೆ ಹೇಳುವದು. | |
| ೪ ಬಾಲಕರ ವಾಚನ. | ೧ನೆಯ ಖಂಡ. | ಉಚ್ಚಾರ ವಿರಾಮಚಿಹ್ನಗಳಿಗೆ ಲಕ್ಷಗೊಟ್ಟು ಬಾಲಕರಿಂದ ಓದಿಸುವದು; ತಪ್ಪಿದಲ್ಲಿ ಬೇರೊಬ್ಬನ ಕಡೆಯಿಂದ ತಿದ್ದಿಸುವದು. | |
| ೫ ಕಠಿಣ ಶಬ್ದಗಳಅರ್ಥ | ಭಾರತ ಹುಣ್ಣಿವೆ. | ಹಿಂದೂ ಜನರ ತಿಂಗಳುಗಳು (ಮಾಸಗಳು) ಯಾವವು? ಇದರಲ್ಲಿ ಹನ್ನೊಂದನೇ ಮಾಸವು ಯಾವದು? ಹುಣ್ಣಿವೆಯು ಎಷ್ಟು ದಿವಸಕ್ಕೊಮ್ಮೆ ಬರುವದು? ಈ ಪ್ರಶ್ನಗಳನ್ನು ಮಾಡಿ ಕಲ್ಪನೆ ಮಾಡಿಕೊಡುವದು. | ಭಾರತ ಹುಣ್ಣಿವೆ= ಮಾಘದ ಹುಣ್ಣಿವೆ. |
| ೬ ಭಾವ. | ೧ನೆಯ ಖಂಡ. | ಪಂತಿ ಮಾಡಲಿಕ್ಕೆ ರಾಮನು ಯಾರನ್ನು ಕರೆದನು? ಯಾವ ವೇಳೆಗೆ ಕರೆದನು? ಈ ಪ್ರಶ್ನಗಳನ್ನು ಕೇಳಿ ಸಾರಾಂಶ ಹೊರಡಿಸುವದು. | |

ಸೂಚನೆ:— ಇದರಂತೆ ೨ನೆ ಯ ಮತ್ತು ೩ನೆ ಯ ಖಂಡಗಳನ್ನು ಕಲಿಸಬೇಕು.

ಉಪಸಂಹಾರ:— (೧) ಹುಣ್ಣಿವೆಯು ಎಷ್ಟು ದಿವಸಕ್ಕೊಮ್ಮೆ ಬರುವದು? (೨) ಎಣೆಗಾರ ಜೋಳ ಅಂದರೇನು?
(೩) ಕಲಸನ್ನ ಹೇಗೆ ಮಾಡುವರು.

# ೬ನೆಯ ಇಯತ್ತೆ

**ಶಿಕ್ಷಕ:—**

**ವಿಷಯ:**—ವಾಚನ (೧೩ನೆಯ ಪಾಠ ಕಾಶೀ ಯಾತ್ರೆ ಮೊದಲಿನ ನಾಲ್ಕು ಕಲಮುಗಳು.)

**ವೇಳೆ:**—೫೦ ಮಿನಿಟು.

**ಉಪಕರಣ:**—ಹಿಂದುಸ್ತಾನದ ನಕಾಶೆ, ಕಾಶೀ ಕ್ಷೇತ್ರದ ಚಿತ್ರ.

**ಉಪೋದ್ಘಾತ:**—ಕಾಶೀಪಟ್ಟಣವನ್ನು ನಕಾಶದಲ್ಲಿ ತೋರಿಸು ? ಕಾಶಿಯು ಯಾತಕ್ಕೆ ಪ್ರಸಿದ್ಧವದೆ ? ಅಲ್ಲಿಗೆ ಯಾವಧರ್ಮದವರು ಹೋಗುವರು ? ಯಾಕೆ? ಹಾಗಾದರೆ ಮುಸಲ್ಮಾನರು ಎಲ್ಲಿಗೆ ಹೋಗುವರು ? ಈ ಪ್ರಶ್ನೆಗಳನ್ನು ಮಾಡಿ ವಿಷಯವನ್ನು ಆರಂಭಿಸುವದು.

| ಮೆಟ್ಟು. | ವಿಷಯ. | ಕ್ರಮ. | ಕ. ಹ. ಉಪಯೋಗ. |
|---|---|---|---|
| ೧ ಪಾಠದ ಸಾರಾಂಶ. | ಈ ಕ್ಷೇತ್ರದಲ್ಲಿ ಹಿಂದುಸ್ತಾನದ ಜ್ಯೋತಿರ್ಲಿಂಗಗಳಲ್ಲಿ ಪ್ರಸಿದ್ಧವಾದ ವಿಶ್ವೇಶ್ವರನ ಲಿಂಗವದೆ ಮತ್ತು ದೇವಾಲಯಗಳೂ ಬೇರೆ ನೋಡತಕ್ಕ ಸ್ಥಳಗಳೂ ಇರುತ್ತವೆ. ಈ ಕ್ಷೇತ್ರವು ನೋಡಲಿಕ್ಕೆ ಬಹುಚಂದವದೆ | ಕಾಶೀ ಕ್ಷೇತ್ರದ ಚಿತ್ರವನ್ನು ತೋರಿಸಿ ಗಂಗಾನದಿಯು ದಂಡೆಯಮೇಲೆ ಏನು ಕಾಣುತ್ತದೆ? ಶಿಖರಗಳು ಹೇಗೆಕಾಣುತ್ತವೆ ? ದಂಡೆಯಮೇಲೆ ಜನರು ಏನುಮಾಡುತ್ತಿರುವರು ? ಎಂಬ ಪ್ರಶ್ನೆಗಳನ್ನು ಮಾಡುವದು. | |

| | | | |
|---|---|---|---|
| ೨ (ಅ) ವಿದ್ಯಾರ್ಥಿಗಳ ಮೌನ ವಾಚನ. | (೧) ಕಾಶೀಪಟ್ಟಣವು·········ಹೆಸರುಂಟು.<br>(೨) ಇದು······ಮಹಾ ಪ್ರಯಾಸವುಳ್ಳದ್ದಿತ್ತು. | ವಾರಣಾಸೀ ಎಂಬ ಹೆಸರು ಯಾಕೆ ಬಂದಿತು? ಈ ಯಾತ್ರೆಗೆ ಎಂಥ ಯಾತ್ರೆ ಅನ್ನುವರು? ಮೊದಲು ಈ ಯಾತ್ರೆಯು ಯಾಕೆ ಕಷ್ಟಕರವಾಗಿತ್ತು. | |
| (ಬ) ಸ್ಪಷ್ಟವಾಚನ. | ಸದರ. | ವಿರಾಮ ಚಿಹ್ನ, ಉಚ್ಚಾರ ತಪ್ಪಿದಲ್ಲಿ ಬೇರೊಬ್ಬನಕಡೆಯಿಂದ ತಿದ್ದಿಸುವದು. ಪ್ರಸಂಗ ವಿಶೇಷದಲ್ಲಿ ಮಾದರಿಗಾಗಿ ಓದಿ ತೋರಿಸುವದು. | |
| ೩ ಅರ್ಥವಿವರಣೆ. | (ಅ) ಶಬ್ದಾರ್ಥ:—ಪ್ರಾಚೀನ, ಕ್ಷಾಲನ, | ಈ ಶಬ್ದಗಳ ಅರ್ಥ ಕೇಳಿ ಬಾರದಿದ್ದರೆ ಕರೇ ಹಲಗೆಯ ಮೇಲೆ ಬರೆಯಿಸುವದು.<br>ಪ್ರಾಚೀನ ಇದರ ವಿರುದ್ಧ ಶಬ್ದ ಅರ್ವಾಚೀನ.<br>ಎಂಥದನ್ನು ತೊಳೆಯುವದು ? ಪಾಪ, ಹೊಲಸು ಎಂಬ ಉತ್ತರ ಬಂದಬಳಿಕ ಇಲ್ಲಿ "ಪಾಪ ಕ್ಷಾಲನ" ಎಂಬದನ್ನು ಉಪಯೋಗಿಸಿರುವರು. | ಪ್ರಾಚೀನ = ಮೊದಲಿನ; ಕ್ಷಾಲನ= (ಕ್ಷಲ್—ತೊಳೆ) ತೊಳೆಯೋಣ |
| | (ಬ) ವಾಕ್ಯಾರ್ಥ:—<br>ಕಾಶೀವಿಶ್ವೇಶ್ವರನ ······ಹೋಗುತ್ತಾರೆ. ಹಿಂದಿನ ಕಾಲದಲ್ಲಿ ···ಪ್ರಯಾಸವುಳ್ಳದಾಗಿತ್ತು.· | ಯಾತರಿಂದ ಪಾಪವು ಹೋಗುವದು ? ಯಾವತ್ತು ಭಾಗಗಳೆಂದರೇನು ? ಈಗ ಪ್ರವಾಸಕ್ಕೆ ಅನುಕೂಲತೆಗಳು ಏನು ಅವೆ ? ಈ ಅನುಕೂಲತೆಗಳು ಮೊದಲು ಇಲ್ಲದ್ದರಿಂದ ಏನು ಆಗುತ್ತಿತ್ತು? ಈ ಪ್ರಶ್ನಗಳನ್ನು ಮಾಡಿ ವಾಕ್ಯಾರ್ಥವನ್ನು ಸ್ಪಷ್ಟ ಮಾಡುವದು. | |

| | | | |
|---|---|---|---|
| | | ಹಿಂದೂ ಜನರು ಕಾಶಿಗೆ ಹೋಗುವಂತೆ ಬೌದ್ಧರೂ ಶೀಖರೂ ಗಯಾ, ಅಮೃತಸರಕ್ಕೆ ಹೋಗುವರು. | |
| ೪. ವ್ಯಾಕರಣ ವಿಚಾರ. | ವಾರಣಾಸೀಶಬ್ದದ ವಿಗ್ರಹ. | ಇದು ಯಾವಸಂಧಿ? ಅದರ ನಿಯಮುವೇನು? | ಸವರ್ಣ ದೀರ್ಘ ಸಂಧಿ. |
| ೫ ಭಾವ.— | ಕಾಶೀಪಟ್ಟಣವು ........ಹೆಸರುಂಟು... ಇದು ... ... ಪ್ರಯಾಸವುಳ್ಳದ್ದಾಗಿತ್ತು. | ಕಾಶೀ ಪಟ್ಟಣವು ಯಾವ ನದಿಯ ದಂಡೆಯ ಮೇಲೆ ಇರುತ್ತದೆ. ವಾರಣಾಸೀ ಎಂಬ ಹೆಸರು ಬರಲಿಕ್ಕೆ ಕಾರಣವೇನು? ಈ ಪ್ರಶ್ನಗಳನ್ನು ಕೇಳಿ ಸ್ಪಷ್ಟ ಮಾಡುವದು. | |

**ಸೂಚನೆ:**—ಇದರಂತೆ ಉಳಿದ ಖಂಡಗಳನ್ನು ಕಲಿಸುವದು.

ಉಪಸಂಹಾರ:—(೧) ದೈವತ ಅಂದರೇನು.

(೨) ೧೨ ಜ್ಯೋತಿರ್ಲಿಂಗಗಳು ಯಾವವು ?

(೩) ಗಂಗಾನದಿಗೆ ಇಷ್ಟು ಮಹತ್ವವು ಏಕೆ ?

## ೨ನೆಯ ಇಯತ್ತೆ.

**ಶಿಕ್ಷಕ—**

**ವಿಷಯ:**— ಕವಿತೆ (ಧ್ರುವ ಚರಿತ್ರೆ, ೧ನೆಯ ಪದ್ಯ)

**ವೇಳೆ:**— ೪೫ ಮಿನಿಟು.

**ಉಪಕರಣ:**— ಧ್ರುವನಾರಾಯಣರ ಚಿತ್ರ, ಕವಿತೆಯನ್ನು ಬರೆದ ಪಟ.

**ಉಪೋದ್ಘಾತ:**— ಚಿತ್ರದಲ್ಲಿಯ ನಾರಾಯಣನನ್ನು ತೋರಿಸಿ ಇವರು ಯಾರು? ಅವನ ಮುಂದೆ ಕುಳಿತ ಹುಡುಗನು ಯಾರು? ಅವರಿಗೆ ಗೊತ್ತಿಲ್ಲದಿದ್ದರೆ ಧ್ರುವನೆಂದು ಹೇಳುವದು. ಇವನು ಉತ್ತಾನಪಾದನೆಂಬ ಅರಸನ ಮಗನು. ಉತ್ತಾನ ಪಾದನಿಗೆ ಇಬ್ಬರು ಹೆಂಡರಿದ್ದರು. ಹಿರಿಯ ಹೆಂಡತಿಯಾದ ಸುನೀತಿಯ ಹೊಟ್ಟೆಯಲ್ಲಿ ಧ್ರುವನು ಹುಟ್ಟಿದನು. ಅರಸನು ಚಿಕ್ಕ ಹೆಂಡತಿಯಾದ ಸುರುಚಿಯನ್ನು ವಿಶೇಷವಾಗಿ ಪ್ರೀತಿಸುತ್ತಿದ್ದನು; ಮತ್ತು ಸುನೀತಿಯನ್ನು ಧ್ರುವನೊಡನೆ ಹೊರಗೆ ಹಾಕಿದ್ದನು, ಆತನ ಕಥೆಯು ಈ ಪಾಠದಲ್ಲಿ ಅದೆ ಎಂದು ವಿಷಯವನ್ನು ಆರಂಭಿಸುವದು.

* ಆರಂಭದ ಪದ್ಯವಿದ ದರಿಂದ ಪಾಠದ ಸಾರಾಂಶ ಹೇಳಬೇಕು.

| ಮೆಟ್ಟು | ವಿಷಯ. | ಕ್ರಮ. | ಕ. ಹ. ಉಪಯೋಗ. |
|---|---|---|---|
| ೧. ಪಾಠದ ಸಾರಾಂಶ* | ಒಂದು ದಿನ ಧ್ರುವನು ತನ್ನ ತಂದೆ ಯಾರೆಂದು ತಾಯಿಯನ್ನು ಕೇಳಿಕೊಂಡು ಹೋಗಿ, ತಂದೆಯ ತೊಡೆಯಮೇಲೆ ಕುಳಿತಿರಲು ಸುರುಚಿಯು ನೋಡಿ ಧ್ರುವನನ್ನು ಎಡಗಾಲಿನಿಂದ ಒದೆದಳು. ಆಗ ಧ್ರುವನು ಅಳುತ್ತ ಬಂದು ತಾಯಿಗೆ ಹೇ | ಚಿತ್ರವನ್ನು ತೋರಿಸಿ ಧ್ರುವನು ಏತರ ಮೇಲೆ ಕುಳಿತಿರುವನು? ಏನು ಮಾಡುತ್ತಿರುವನು? ಎಂಥ ಪ್ರದೇಶದಲ್ಲಿ ಕುಳಿತಿರುವನು? ಎದುರಿಗೆ ಯಾರು | |

| | | |
|---|---|---|
| | ಳಲು, ಆಕೆಯು ನೀನು ದೇವರಲ್ಲಿ ಬೇಡಿ ಬಂದಿಲ್ಲವೆಂದು ಅಂದಳು. ಆಗ ಧ್ರುವನು ದೇವರು ಎಲ್ಲಿರುವನೆಂದು ಕೇಳಿಕೊಂಡು ದೇವರನ್ನು ಹುಡುಕುವದಕ್ಕಾಗಿ ಅರಣ್ಯಕ್ಕೆ ಹೋದನು. ಆಗ ನಾರದನು ಭೆಟ್ಟಿಯಾಗಿ ಮಂತ್ರೋಪದೇಶ ಮಾಡಿದನು. ಆ ಮಂತ್ರವನ್ನು ಜಪಿಸಲು ದೇವರು ಭೆಟ್ಟಿಯಾಗಿ ಏನು ಬೇಕೆಂದು ಕೇಳಲು ಮಲತಾಯಿಯು ದೂಡದಿದ್ದಂಥಾ ಸ್ಥಳವನ್ನು (ಮೋಕ್ಷವನ್ನು) ಬೇಡಿಕೊಂಡನು. | ನಿಂತಿರುವರು? ಈ ಪ್ರಶ್ನಗಳ ಸಹಾಯದಿಂದ ಪಾಠದ ಸಾರಾಂಶವನ್ನು ಪೂರ್ಣ ಮಾಡುವದು. |
| ೨. ಶಿಕ್ಷಕನು ಕವಿತೆಯನ್ನು ಅನ್ನುವದು. | ಒಂದು ದಿನ ... ... ಹೇಳಿದನು. | ಪಟದ ಮೇಲೆ ಬರೆದು ತಂದ ಈ ಪದ್ಯವನ್ನು ಬಾಲಕರ ಎದುರಿಗಿಟ್ಟು ಸುಸ್ವರದಿಂದ ಶಿಕ್ಷಕನು ಅನ್ನುವದು. |
| ೩. ಅನ್ವಯ. | ೧ ಒಂದುದಿನ ಧ್ರುವ ತಾಯ ಬಳಿಯಲಿ ಬಂದು,<br>೨. ತನ್ನಯ ತಂದೆ ಯಾರೌ ಎಂದೆನಲು,<br>೩. ಸುನೀತೆ ದುಃಖದಲಿ ಕಣ್ಣೀರ ಸುರಿಸಿ, | ಧ್ರುವನು ಯಾರ ಹತ್ತರ ಬಂದನು; ಏನು ಕೇಳಿದನು? ಆಗ ಸುನೀತಿಯು ಏನು ಮಾಡಿದಳು? ಮತ್ತು ಏನು ಹೇಳಿದಳು? ಈ ಪ್ರಶ್ನಗಳ ಸಹಾಯದಿಂದ ಅನ್ವಯವನ್ನು ಹೊರಡಿಸುವದು. |

| | | | |
|---|---|---|---|
| | ೪. ಕಂದ ಚಂದದಿಂದ ಈ ನಾಡನು ಆಳುವವನೇ ನಿನ್ನನು ಪಡೆದವನು ತಿಳಿ ಎಂದು ಪೇಳಿದಳು. | | |
| ೪. ಅರ್ಥವಿವರಣೆ<br>(ಅ) ಶಬ್ದಾರ್ಥ | ಬಳಿ, ತನ್ನಯ, ನಾಡು, ಕಂದ, ಪಡೆ ಪೇಳು. | ಈ ಕಠಿಣ ಶಬ್ದಗಳ ಅರ್ಥವನ್ನು ಬಲಕ್ಕೆ ಬರೆದಂತೆ ಹೇಳುವದು. | ಬಳಿ=ಹತ್ತರ<br>ತನ್ನಯ=ತನ್ನ<br>ನಾಡು=ದೇಶ<br>ಕಂದ=ಮಗ<br>ಪಡೆ=ಹಡೆ |
| (ಬ) ವಾಕ್ಯಾರ್ಥ | ಅನ್ವಯದಂತೆ ಹೊಂದಿಸಿದ ವಾಕ್ಯಗಳು. | ಅನ್ವಯ ಹೊರಡಿಸುವಾಗ್ಗೆ ಮಾಡಿದ ಪ್ರಶ್ನಗಳ ಸಹಾಯದಿಂದಲೇ ವ್ಯಾಕ್ಯಾರ್ಥವನ್ನು ಹೊರಡಿಸುವದು | |
| ೫. ತಾತ್ಪರ್ಯ | ಒಂದು ದಿವಸ ಧ್ರುವನು ತಾಯಿಯ ಹತ್ತರ ಬಂದು ತನ್ನ ತಂದೆಯು ಯಾರು ಎಂದು ಕೇಳಲು ಸುನೀತಿಯು ಮಗುವಿಗೆ ದಿಂದ ಈ ದೇಶದ ಅರಸನೇ ನಿನ್ನನ್ನು ಹಡೆದವನು ಎಂದು ಹೇಳಿದಳು. | ಧ್ರುವನು ಯಾರ ಹತ್ತರ ಬಂದು ಏನು ಕೇಳಿದನು ? ಆಗ ಸುನೀತಿಯು ಏನು ಮಾಡಿದಳು. ಮತ್ತು ಏನು ಹೇಳಿದಳು? ಈ ಪ್ರಶ್ನಗಳ ಸಹಾಯದಿಂದ ಭಾವವನ್ನು ಹೊರಡಿಸುವದು. | |
| ೬. ಬಾಲಕರು ಕವಿತೆಯನ್ನು ಅನ್ನುವದು. | ಒಂದು ದಿಸ ... ... ...<br>... ... ... ಪೇಳಿದಳು. | ಶಿಕ್ಷಕನು ಹೇಳಿದಂತೆ ಬಾಲಕರು ಅನ್ನುವದು. | |

**ಉಪಸಂಹಾರ** :—ಧ್ರುವನ ತಂದೆಯು ಯಾರು ? ನಾಡು ಅಂದರೇನು? ಉತ್ತಾನಪಾದನು ಸುನೀತಿಯನ್ನು ಹೊರಗೆ ಯಾಕೆ ಹಾಕಿದ್ದನು ?

## ೫ನೆಯ ಇಯತ್ತೆ

**ಶಿಕ್ಷಕ**:—

**ವಿಷಯ**:—ಕವಿತೆ ( ೩೪ನೇ ಪಾಠ, ೩ನೇ ಪದ್ಯ. )

**ವೇಳೆ**:—೫೦ ಮಿನಿಟು.

**ಉಪಕರಣ**:—ದ್ರೌಪದಿಯ ಸ್ವಯಂವರದ ಚಿತ್ರ, ಕವಿತೆ ಬರೆದ ಪಟ.

**ಉಪೋದ್ಘಾತ**:—( ೧ ) ಸ್ವಯಂವರವೆಂದರೇನು, ( ೨ ) ಸ್ವಯಂವರದ ಸಲುವಾಗಿ ದ್ರೌಪದಿಯ ಪಣವು ಏನು ಇತ್ತು ? (೩) ಪಾಂಡವರು ಆ ಕಾಲಕ್ಕೆ ಯಾವ ವೇಷದಿಂದ ಬಂದು ಕುಳಿತಿದ್ದರು? ( ೪ ) ದ್ರೌಪದಿಯ ಸ್ವಯಂವರದ ಕಾಲಕ್ಕೆ ಡಂಗುರವನ್ನು ಮೊದಲು ಎಲ್ಲಿ ಹೊಡೆದರು? (೫) ಬ್ರಾಹ್ಮಣರು ಆಗ ಏನು ಅಂದರು? ಈ ಪ್ರಶ್ನೆಗಳನ್ನು ಕೇಳುವದು.

| ಮೆಟ್ಟು | ವಿಷಯ. | ಕ್ರಮ. | ಕ. ಹ. ಉಪಯೋಗ. |
|---|---|---|---|
| (೧) ಪದ್ಯದ ಸಾರಾಂಶ. | ಡಂಗುರ ಹೊಡೆವ ಕೂಡಲೇ ಧರ್ಮರಾಜನು ಅರ್ಜುನನಿಗೆ ಸನ್ನೆಯನ್ನು ಮಾಡಲು ಅರ್ಜುನನು ತನ್ನ ಹಿರಿಯರಿಗೆ ಮನವಲ್ಲಿಯೇ ನಮಸ್ಕಾರಮಾಡಿ ದೋತರ ಮೊದಲಾದವುಗಳನ್ನು ಸಾವರಿಸಿ ಕೊಳ್ಳುತ್ತ ಮತ್ಸ್ಯಯಂತ್ರವನ್ನು ಭೇದಿಸುವದಕ್ಕೆ ಎದ್ದನು. | ಎಡಕ್ಕೆ ಬರೆದ ಸಾರಾಂಶವನ್ನು ಹೇಳುವದು. | |

| | | | |
|---|---|---|---|
| (೨) ಕವಿತೆ ಅನ್ನುವದು. | ನೋಡಿದನು.................. ..................ಪಾರ್ಥ | ಶಿಕ್ಷಕನು ಕವಿತೆ ಬರೆದ ಪಟವನ್ನು ವಿದ್ಯಾರ್ಥಿಗಳ ಮುಂದೆ ಇಟ್ಟು ಸುಸ್ವರದಿಂದ ಅನ್ನುವದು. ತಮ್ಮನನು, ಕೈಕೊಂಡನು, ನೋಡಿ, ಸಂವರಿಸುತ್ತ ಈ ಶಬ್ದಗಳ ಮುಂದೆ ಗುರ್ತು ಹಾಕಿಕೊಳ್ಳಲಿಕ್ಕೆ ಹೇಳುವದು | |
| (೩) ವಿದ್ಯಾರ್ಥಿಗಳ ವಾಚನ. | ಸದರ, | ಮೇಲೆ ಗುರ್ತಿಸಿದಲ್ಲಿ ನಿಲ್ಲುತ್ತ ಸಾದಾವಾಚನದಂತೆ ಓದಿಸುವದು. | |
| (೪) ಅನ್ವಯ, | ೧. ತಮ್ಮನನು ನೋಡಿದನು. ೨ ಸನ್ನೆಯ ಮಾಡಿಬೊಡೆ ಆ ಪಾರ್ಥ ಕೈಕೊಂಡನು. ೩. ಅವನಿಪಗೂಡಿ ಕುಂತಿಗೆ ಭೀಮಸೇನಂಗೆ ಮನದೊಳಗೆ ಎರಗಿ, ೪. ಕೂಡೆ ಕುಳ್ಳಿರ್ದ, ಅಖಿಳ ವಿಪ್ರರ ನೋಡಿ. ೫. ದೋತ್ರ ದರ್ಭೆಯಗೂಡು ಸಂವರಿಸುತ್ತ ಸಭೆಯಿಂದ ಎದ್ದನು. | ಯಾರು ಅರ್ಜುನನನ್ನು ನೋಡಿದರು ? ನೋಡಿ ಏನು ಮಾಡಿದರು ? ಸನ್ನೆಯ ಮಾಡಿದ ಕೂಡಲೆ ಅರ್ಜುನನು ಏನು ಮಾಡಿದನು ? ಯಾರಿಗೆ ಹೇಗೆ ಎರಗಿದನು ? ಯಾರನ್ನು ನೋಡಿದನು ? ಏನನ್ನು ಸಂವರಿಸುತ್ತ ಎದ್ದನು ? ಈ ಪ್ರಶ್ನಗಳನ್ನು ಮಾಡಿ ಅನ್ವಯವನ್ನು ಪೂರ್ಣಗೊಳಿಸುವದು. | |
| ೭. ಅರ್ಥವಿವರಣೆ<br>ಅ) ಶಬ್ದಾರ್ಥ | ಅವನಿಪ, ಎರಗು, ಅಖಿಳ, ವಿಪ್ರ, ದೋತ್ರ, ಗೂಡು, ಸಂವರಿಸು, ಪಾರ್ಥ, | ಈ ಶಬ್ದಗಳನ್ನು ಕೇಳಿ ಬಾರದಿದ್ದರೆ ಕರೇ ಹಲಿಗೆಯ ಮೇಲೆ (ಬಲಕ್ಕೆ ಬರೆದಂತೆ) ಬರೆಸುವದು. | ಅವನಿ+ಪ = ಭೂಮಿಯನ್ನು ರಕ್ಷಿಸುವವ ( ಅರಸು—ಧರ್ಮರಾಜ) |

| | | | |
|---|---|---|---|
| | | | ಎರಗು=ನಮಸ್ಕಾರಮಾಡು<br>ಅಖಿಳ=ಎಲ್ಲ<br>ವಿಪ್ರ=ಬ್ರಾಹ್ಮಣ<br>ದೋತ್ರ(ತ್ರ)=ದೋತರ<br>ಗೂಡು=ಗಂಟು<br>ಸಂವರಿಸು=ಮುದುಡಿಕೊಳ್ಳು<br>ಪಾರ್ಥ=ಅರ್ಜುನ |
| (ಬ) ವಾಕ್ಯಾರ್ಥ. | ಅನ್ವಯಂತೆ ಹೊಂದಿಸಿದ ವಾಕ್ಯಗಳು. | ಅನ್ವಯ ಹೊರಡಿಸುವಾಗ್ಗೆ ಮಾಡಿದ ಪ್ರಶ್ನಗಳ ಸಹಾಯದಿಂದಲೇ ವಾಕ್ಯಾರ್ಥವನ್ನು ಹೊರಡಿಸುವದು | |
| ೬. ವಿಶೇಷಾರ್ಥ. | ೧. ಧರ್ಮರಾಜನು ಅರ್ಜುನನಿಗೇ ಸನ್ನೆಯನ್ನು ಏಕೆ ಮಾಡಿದನು?<br>೨. ಅರ್ಜುನನು ಹಿರಿಯರಿಗೆ ಏಕೆ ನಮಸ್ಕಾರ ಮಾಡಿದನು?<br>೩. ಮನಸ್ಸಿನಲ್ಲಿಯೇ ಏಕೆ ಮಾಡಿದನು. | ಪಾಂಡವರೊಳಿಗೆ ಧನುರ್ವಿದ್ಯೆಯಲ್ಲಿ ಯಾರು ನಿಪುಣರು? ಯಾವದೊಂದು ಶುಭಕಾರ್ಯಕ್ಕೆ ಅಥವಾ ಊರಿಗೆ ಹೋಗುವಾಗ ಹಿರಿಯರಿಗೆ ನಮಸ್ಕಾರ ಮಾಡುವ ಪದ್ಧತಿಯನ್ನು ನೆನಪಿಗೆ ತಂದುಕೊಡುವದು. ಪಾಂಡವರು ಅಲ್ಲಿಗೆ ವೇಷಬದಲಿಸಿಕೊಂಡು ಯಾಕೆ ಬಂದಿದ್ದರು? ಇವುಗಳ ಸಹಾಯದಿಂದ ಈ ವಾಕ್ಯಗಳ ಸ್ವಾರಸ್ಯವನ್ನು ಸ್ಪಷ್ಟಮಾಡುವದು. | |
| ೭. ವಿದ್ಯಾರ್ಥಿಗಳು ಕವಿತೆ ಅನ್ನುವದು. | ನೋಡಿದನು ... ಪಾರ್ಥ. | ಮೊದಲು ಕಲಿತ ದಾಟಿಯಂತೆ ಅನ್ನಿಸುವದು. | |

**ಉಪಸಂಹಾರ:**—೧. ಅವನಿಪ ಇದರ ಅವಯವಾರ್ಥವನ್ನು ಹೇಳು ? ೨. ಧರ್ಮರಾಜನು ಅರ್ಜುನನಿಗೇ ಏಕೆ ಸನ್ನೆಯನ್ನು ಮಾಡಿದನು ? ೩. ಸನ್ನೆಯನ್ನು ಮಾಡಿದ ಕೂಡಲೇ ಅರ್ಜುನನು ಏನೇನು ಮಾಡಿದನು ?

## ೨ನೆಯ ಇಯತ್ತೆ.

**ಶಿಕ್ಷಕ:**—

**ವಿಷಯ:**— ಗಣಿತ (ಕೈಲೆ ಬರುವ ಬೇರೀಜು)

**ವೇಳೆ:**— ೪೫ ಮಿನೀಟು.

**ಉಪಕರಣ:**— ಎಲ್ಲ ಹುಡುಗರಿಗೆ ಸಾಕಷ್ಟು ಹತ್ತರ ಗಂಟು, ಬಿಡಿ ವಸ್ತುಗಳು,

**ಉಪೋದ್ಘಾತ:**— ನಿಮ್ಮ ಹತ್ತರ ಇದ್ದ ೫ ಗುಂಡುಗಳಲ್ಲಿ ೩ ಗುಂಡುಗಳನ್ನು ಕೂಡಿಸಿದರೆ ಎಷ್ಟು ! ೪೨ ರಲ್ಲಿ ೩೬ ಕೂಡಿಸಿದರೆ ಎಷ್ಟು ! ಈ ಪ್ರಶ್ನಗಳನ್ನು ಕೇಳಿ ವಿಷಯುವನ್ನು ಆರಂಭಿಸುವದು.

| ಮೆಟ್ಟು. | ವಿಷಯ. | ಕ್ರಮ. | ಕ. ಹ. ಉಪಯೋಗ. |
|---|---|---|---|
| (೧) ವಸ್ತುಗಳ ಸಹಾಯದಿಂದ ತಿಳಿಸುವದು. | (ಅ)<br>೪, ೫<br>+ ೩, ೬<br>———<br>೭, ೧೧ | ೪ ಹತ್ತರಗಂಟು, ೫ ಬಿಡಿವಸ್ತುಗಳಲ್ಲಿ ೩ ಹ. ಗ. ೬ ಬಿ. ವ. ಗಳನ್ನು ಕೂಡಿಸಲು ಎಷ್ಟೆಷ್ಟು ಆದವು? ಈ ಪ್ರಶ್ನಮಾಡಿ ಕೃತಿಯನ್ನು ಮಾಡಿಸಿ ಪ್ರತಿಯೊಂದನ್ನು ಎಣಿಸ ಹಚ್ಚುವದು. | |

| | | | |
|---|---|---|---|
| | (ಬ) ಹ. ಬಿ.<br>೭, ೧೧<br>=೮, ೧ | ಎಷ್ಟು ಬಿಡಿವಸ್ತುಗಳಾದ ಕೂಡಲೆ ಹತ್ತರ ಗಂಟು ಕಟ್ಟುವಿರಿ? ಎಷ್ಟು ಹತ್ತರ ಗಂಟುಗಳಾದ ಕೂಡಲೆ ನೂರರ ಗಂಟು ಮಾಡುವಿರಿ? ಹಾಗಾದರೆ ಇದರಲ್ಲಿ ಯಾವ ಯಾವ ಗಂಟುಗಳು ಎಷ್ಟೆಷ್ಟು ಆದವು? ಬಿಡಿ ವಸ್ತುಗಳು ಎಷ್ಟು ಉಳಿದವು. ಈ ಪ್ರಶ್ನೆಗಳನ್ನು ಮಾಡಿ ಕೃತಿಯನ್ನು ಮಾಡಿಸಿ ಉತ್ತರ ಹೊರಡಿಸುವದು. | |
| ೨. ಅಂಕಿಗಳ ಬೇರೀಜು. | ೨೭<br>+೩೪<br>———<br>೬೧ | ೭ ಬಿಡಿ ವಸ್ತುಗಳಲ್ಲಿ ೪ ಬಿಡಿ ವಸ್ತುಗಳನ್ನು ಕೂಡಿಸಲು ಎಷ್ಟು ಬಿಡಿ ವಸ್ತುಗಳಾದವು? ಅವುಗಳಿಗೆ ಹ. ಗ. ಎಷ್ಟು ಆಗುವವು? ಉಳಿದ ಒಂದು ಬಿಡಿ ವಸ್ತುವನ್ನು ಬಿ. ವ. ನ. ಬುಡದಲ್ಲಿ ಇಡಿರಿ. ಹೊಸದಾಗಿ ಕಟ್ಟಿದ ೧ ಹ. ಗ. ನ್ನು ಹ. ಗ. ನ ಬುಡಕ್ಕೆ ಇಡಬೇಕು. ಈಗ ಎಲ್ಲ ಹ. ಗ. ಗಳು ಕೂಡಿ ಎಷ್ಟಾದವು ? | ೨೭<br>೩೪<br>———<br>೧<br>———<br>೬೧ |
| (೩) ರೂಢಿ | ೪೮<br>+೯೫ | ಬಾಲಕರಿಗೆ ಪಾಟಿಯ ಮೇಲೆ ಸಂಖ್ಯೆ ಹೇಳಿ ಬೇರೀಜು ಮಾಡಹಚ್ಚುವದು. ಬಾರದಿದ್ದವರಿಗೆ ಎರಡನೇ ಪಟ್ಟಿನಲ್ಲಿ ಮಾಡಿದಂತೆ ಪ್ರಶ್ನೆಗಳನ್ನು ಮಾಡಿ ತಿಳಿಸುವದು. | ೪೮<br>೯೫<br>———<br>೧,೧<br>———<br>೧೪೩ |

**ಉಪಸಂಹಾರ:**— ೩೮,೪೭ ಹೇಗೆ ಕೂಡಿಸುವಿರಿ.

# ೩ನೆಯ ಇಯತ್ತೆ.

**ಶಿಕ್ಷಕ:**—

**ವಿಷಯ:**— ಗಣಿತ (ಏರಿಕೆಯ ರೂಪಾಂತರ)

**ವೇಳೆ:**— ೪೫ ಮಿನೀಟು.

**ಉಪಕರಣ:**— ಪೈಗಳು, ಬಿಲ್ಲಿಗಳು, ಆಣೆಗಳು.

**ಉಪೋದ್ಘಾತ:**— ಎರಡು ಆಣೆಗೆ ಪೈಗಳೆಷ್ಟು? ಒಂದು ಆಣೆಯನ್ನು ನಾಲ್ಕು ಮಂದಿಯಲ್ಲಿ ಹಂಚಿದರೆ ಒಬ್ಬೊಬ್ಬರಿಗೆ ಏನು ಬರುವದು? ಈ ಪ್ರಶ್ನೆಗಳನ್ನು ಕೇಳಿ ವಿಷಯವನ್ನು ಆರಂಭಿಸುವದು.

| ಮೆಟ್ಟು. | ವಿಷಯ. | ಕ್ರಮ. | ಕ. ಹ. ಉಪಯೋಗ. |
|---|---|---|---|
| ೧. ವಸ್ತುಗಳ ಸಹಾಯದಿಂದ ತಿಳಿಸುವದು. | (ಅ) ೧೫ ಪೈಗಳಿಗೆ ಬಿಲ್ಲಿಗಳ ರೂಪಕೊಡುವದು.<br>(ಬ) ೨೦ ಬಿಲ್ಲಿಗಳಿಗೆ ಆಣೆಗಳ ರೂಪಕೊಡುವದು. | ಮೂರು ಮೂರು ಪೈಗಳ ಗುಂಪಿಗಳನ್ನು ಮಾಡಿರಿ ಎಷ್ಟು ಆದವು?<br>ನಾಲ್ಕು ನಾಲ್ಕು ಬಿಲ್ಲಿಗಳ ಗುಂಪು ಮಾಡಿರಿ ಎಷ್ಟು ಆಣೆಗಳಾದವು?<br>೩ ಎಷ್ಟಲೆ ೧೫ ಮತ್ತು ೪ ಎಷ್ಟಲೆ ೨೦. ಈ ಪ್ರಶ್ನೆಗಳ ಸಹಾಯದಿಂದ ಭಾಗಾಕಾರದ ಕಲ್ಪನೆಯನ್ನು ತಂದು ಕೊಡುವದು. | |

| | | | |
|---|---|---|---|
| ೨. ಅಂಕಿಗಳ ಸಹಾಯದಿಂದ ತಿಳಿಸುವದು. | ೩೭೪ ಪೈಗಳಿಗೆ ಆಣೆಗಳ ರೂಪ ಕೊಡುವದು. | ಎಷ್ಟು ಪೈಗಳಿಗೆ ೧ ಆಣೆ ಯಾಗುವದು ? ಪೈಗಳಿಗೆ ಆಣೆಗಳನ್ನು ಮಾಡಬೇಕಾದರೆ ಎಷ್ಟರಿಂದ ಏನು ಮಾಡಬೇಕು ? ಈ ಪ್ರಶ್ನಗಳ ಸಹಾಯದಿಂದ ಕೃತಿಯನ್ನು ಮಾಡಿಸುವದು. | ೧೨)೩೭೪(೩೧ ಆ<br>೩೬<br>——<br>೧೪<br>೧೨<br>——<br>೨ ಪೈ. |
| ೩. ರೂಢಿ | ೨೩ ಆ, ೧೭ ಪೈಗಳಿಗೆ ರೂ. ಯ ರೂಪ ಕೊಡುವದು. | ಮೇಲಿನಂತೆ ಪ್ರಶ್ನಗಳನ್ನು ಮಾಡಿ ಕೃತಿಯನ್ನು ಮಾಡಿಸುವದು. | ೨೩ಆಣೆ. ೧೭ಪೈ.<br>ರು. ಆ. ಪೈ.<br>೧, ೮, ೫. |

೪. **ಉಪಸಂಹಾರಃ**—(೧) ಆಣೆಗಳಿಗೆ ರೂಪಾಯಿಯ ರೂಪ ಕೊಡಬೇಕಾದರೆ ಎಷ್ಟರಿಂದ ಭಾಗಿಸುವಿರಿ? ಯಾಕೆ? (೨) ೪೩ ಆಣೆಗಳಿಗೆ ರೂಪಾಯಿಯ ರೂಪ ಕೊಟ್ಟರೆ ಎಷ್ಟು ರೂಪಾಯಿಗಳಾಗುವವು ? ಮತ್ತು ಎಷ್ಟು ಆಣೆಗಳು ಉಳಿಯುವವು.

## ೪ನೆಯ ಇಯತ್ತೆ.

**ಶಿಕ್ಷಕ:**—

**ವಿಷಯ:**— ಗಣಿತ ( ಅಪೂರ್ಣಾಂಕಗಳ ಪ್ರಾರಂಭ )

**ವೇಳೆ:**— ೪೫ ಮಿನಿಟು

**ಉಪಕರಣ:**— ಲಿಂಬಿಯಹಣ್ಣು, ಕಾಗದದ ಪಟ್ಟಿಗಳು.

**ಉಪೋದ್ಘಾತ:**— ಒಂದು ಲಿಂಬೀಹಣ್ಣಿನಲ್ಲಿ ಸರಿಯಾಗಿ ೨ ಪಾಲು ಮಾಡಿದರೆ ಪ್ರತಿಯೊಂದಕ್ಕೆ ಏನನ್ನುವಿರಿ? ಅದನ್ನು ಹ್ಯಾಗೆ ಬರೆಯುವಿರಿ? ಈ ಅರ್ಧಹಣ್ಣಿನಲ್ಲಿ ಮತ್ತೆ ಎರಡು ಸರಿ ಭಾಗಗಳನ್ನು ಮಾಡಿದರೆ ಪ್ರತಿಯೊಂದು ಭಾಗಕ್ಕೆ ಏನು ಅನ್ನುವಿರಿ? ಅದನ್ನು ಬರೆದು ತೋರಿಸಿರಿ. ಈ ಪ್ರಶ್ನಗಳನ್ನು ಮಾಡಿ ವಿಷಯವನ್ನು ಪ್ರಾರಂಭಿಸುವದು.

| ಮೆಟ್ಟು | ವಿಷಯು | ಕಲಿಸುವ ಕ್ರಮು | ಕ. ಹ. ಉಪಯೋಗ. |
|---|---|---|---|
| ೧ ಬರಹ | ಒಂದು ವಸ್ತುವಿನಲ್ಲಿ ೩ ಸಮಪಾಲು ಮಾಡಿ ೧ ಪಾಲು ಬರೆಯುವದು. | (೧) ಕಾಗದದ ಪಟ್ಟಿಯಲ್ಲಿ ೩ ಸರಿಯಾದ ಪಾಲು ಮಾಡಿ ೧ ಪಾಲು ತಕ್ಕೊಳ್ಳಿರಿ. ಅದನ್ನು ಬರೆದು ತೋರಿಸಿರಿ. ಬರೆಯಲಿಕ್ಕೆ ಬರುವದಿಲ್ಲವೆಂದು ಉತ್ತರ ಬಂದ ಬಳಿಕ ಒಂದು ಅಡ್ಡಗೆರೆ ತೆಗೆದು, ಮಾಡಿದ ಪಾಲುಗಳನ್ನು ತೋರಿಸುವ ಅಂಕಿಯನ್ನು ಗೆರೆಯ ಕೆಳಗೆ, ತಕ್ಕೊಂಡ ಪಾಲುಗಳನ್ನು ತೋರಿಸುವ ಅಂಕಿಯನ್ನು ಮೇಲೆ ಬರೆಯಲಿಕ್ಕೆ ಹೇಳುವದು. | ೧ ತಕ್ಕೊಂಡ ಪಾಲು<br>—<br>೩ ಮಾಡಿದ ಪಾಲು. |

| | | | |
|---|---|---|---|
| ೨ ವಾಚನ | $\frac{೧}{೪}$ | ಒಂದು ವಸ್ತುವಿನಲ್ಲಿ ಸರಿಯಾದ ೪ ಪಾಲು ಮಾಡಿ ೧ ಪಾಲು ತಕ್ಕೊಂಡರೆ ಎಷ್ಟನೆಯ ಪಾಲು ತಕ್ಕೊಂಡಂತಾಯಿತು? ಒಂದು ನಾಲ್ಕನೆಯ ಪಾಲು ಎಂಬ ಉತ್ತರ ಬಂದಬಳಿಕ ಪಾಲು=ಅಂಶ ಆದ್ದರಿಂದ ಒಂದು ೪ನೆಯ ಅಂಶವೆಂದು ಓದುವ ರೂಢಿ ಅದೆ ಎಂದು ಹೇಳುವದು. | $\frac{೧}{೪}$=ಒಂದು ನಾಲ್ಕನೆಯ ಅಂಶ<br>$\frac{೨}{೩}$=ಎರಡು ಮೂರನೆಯ ಅಂಶ |
| ೩ ಅಂಶ ಭೇದಗಳ ವಿವರಣೆ | $\frac{೨}{೫}$ | ಎಷ್ಟು ಸರಿಯಾದ ತುಂಡು ಮಾಡಿರುವೆವು? ಎಷ್ಟು ತುಂಡು ತಕ್ಕೊಂಡಿರುವೆವು? ತಕ್ಕೊಂಡ ತುಂಡುಗಳು ಎಷ್ಟು ಅಂಶಗಳು? ಆದ್ದರಿಂದ ತಕ್ಕೊಂಡ ತುಂಡುಗಳಿಗೆ (ಮೇಲಿನ ಅಂಕಿಗೆ) ಏನು ಅನ್ನಬೇಕಾಯಿತು. ಕೆಳಗಿನ ಅಂಕಿಯು ಏನನ್ನು ತೋರಿಸುವದು? ಒಟ್ಟು ತುಂಡು=ಭೇದ ? | ೨ ಅಂಶ<br>—<br>೫ ಭೇದ |
| ೪ ಪೂರ್ಣ ಮತ್ತು ಅಪೂರ್ಣ ವಸ್ತುಗಳ ಕಲ್ಪನೆ | ೧ ಹಣ್ಣು<br>$\frac{೧}{೪}$ ಹಣ್ಣು | ಒಂದು ಲಿಂಬೀಹಣ್ಣು ತೋರಿಸಿ ಎಷ್ಟು ಹಣ್ಣು ಅವೆ, ಇಡೀ ಹಣ್ಣು ಅದೆಯೋ ತುಂಡುಮಾಡಿದೆಯೋ? ಇದನ್ನು ಬರೆದುತೋರಿಸುವ ಅಂಕಿಗೆ ಎಂಥ ಅಂಕಿಯೆನ್ನುವರು? ನಾಲ್ಕುಪಾಲುಮಾಡಿದ ಒಂದು | ೧ಪೂರ್ಣಅಂಕಿ<br>$\frac{೧}{೪}$ಅಪೂರ್ಣ ಅಂಕಿ<br>ಪೂರ್ಣ ವಸ್ತುವಿನಲ್ಲಿ ಹಲವು ಸರಿಯಾದ ತುಂಡುಗಳನ್ನು ಮಾಡಿ ಅದ |

| | | | |
|---|---|---|---|
| | | ತುಂಡುತೋರಿಸಿ ಇದು ಪೂರಾ ಹಣ್ಣು ಅದೆಯೋ? ಅಂದಮೇಲೆ ಇದನ್ನು ಬರೆದು ತೋರಿಸುವ ಅಂಕಿಗೆ ಎಂಥ ಅಂಕಿ ಅನ್ನಬೇಕಾಯಿತು. | ರಲ್ಲಿ ಕೆಲವು ತುಂಡು ತಕ್ಕೊಂಡದ್ದನ್ನು ಬರೆದು ತೋರಿಸುವ ಅಂಕಿಗೆ ಅಪೂರ್ಣಾಂಕವೆನ್ನುವರು. |

**ಉಪಸಂಹಾರ:**— (೧) ಒಂದು ವಸ್ತುವಿನಲ್ಲಿ ೬ ಸರಿಯಾದ ತುಂಡು ಮಾಡಿ ೫ ತುಂಡು ತಕ್ಕೊಂಡೆವು. ಇದನ್ನು ಬರೆದು ತೋರಿಸು.

(೨) ⅚ ಇದನ್ನು ಓದು. ಇದರಲ್ಲಿ ಲಕ್ಕೆ ಏನನ್ನುವರು?

(೩) ಅಪೂರ್ಣಾಂಕ ಅಂದರೇನು?

# ೪ನೆಯ ಇಯತ್ತೆ

**ಶಿಕ್ಷಕ:**—
**ವಿಷಯ:**— ವ್ಯಾಕರಣ ( ನಾಮಪದ ಕ್ರಿಯಾಪದಗಳು. )
**ವೇಳೆ:**— ೪೫ ಮಿನಿಟು.
**ಉಪೋದ್ಘಾತ:**— 'ರಾಮನು ಪುಸ್ತಕವನ್ನು ಓದುತ್ತಾನೆ.' ಈ ವಾಕ್ಯವನ್ನು ಕರೇಹಲಿಗೆಯ ಮೇಲೆ ಬರೆದು ಬಾಲಕರಿಂದ ಓದಿಸಿ ಇದರಲ್ಲಿ ಎಷ್ಟು ಶಬ್ದಗಳವೆ? ಒಬ್ಬೊಬ್ಬರು ಒಂದೊಂದು ಶಬ್ದವನ್ನು ಹೇಳಿರಿ. ಈ ವಾಕ್ಯದಿಂದ ನಿಮಗೆ ಏನು ಅರ್ಥವಾಗುತ್ತದೆ? ಮುಂತಾದ ಪ್ರಶ್ನೆಗಳನ್ನು ಮಾಡಿ ವಿಷಯವನ್ನು ಆರಂಭಿಸುವದು.

| ಮೆಟ್ಟು | ವಿಷಯ | ಕಲಿಸುವ ಕ್ರಮ | ಕ. ಹ. ಬಳಕೆ |
|---|---|---|---|
| ೧. | ವಿದ್ಯಾರ್ಥಿಗಳಿಂದ ಕೆಲವು ವಾಕ್ಯಗಳನ್ನು ಹೊರಡಿಸುವದು. | ಹಕ್ಕಿಗಳು ಏನನ್ನು ತಿನ್ನುತ್ತವೆ? ಕಪ್ಪೆಗಳು ನೀರಲ್ಲಿ ಏನು ಮಾಡುವವು? ನಿಮ್ಮ ಮನೆಯಲ್ಲಿ ಅಡಿಗೆಯನ್ನು ಯಾರು ಮಾಡುವರು? ಈ ಪ್ರಶ್ನೆಗಳ ಸಹಾಯದಿಂದ ಹೊರಟ ವಾಕ್ಯಗಳನ್ನು ಕ. ಹ. ಮೇಲೆ ಬರೆಯುವದು. | ೧ ಹಕ್ಕಿಗಳು ಕಾಳು ತಿನ್ನುತ್ತವೆ. ೨ ಕಪ್ಪೆಗಳು ನೀರಲ್ಲಿ ಈಸುವವು. ೩ ಅವ್ವನು ಅಡಿಗೆಯನ್ನು ಮಾಡುತ್ತಾಳೆ. |
| ೨. | ಕ್ರಿಯಾಪದ | ಈ ವಾಕ್ಯಗಳಲ್ಲಿ ತಿನ್ನುತ್ತವೆ, ಈಸುವವು, ಮಾಡುತ್ತಾಳೆ ಈ ಶಬ್ದಗಳನ್ನುಬಿಟ್ಟು ಓದಿದರೆ ಅರ್ಥವು ತಿಳಿಯುವದೋ? ಮತ್ತು ಮಾತು ಮುಗಿಯುವ | ಅರ್ಥವು ತಿಳಿಯುವಂತೆ ಒಂದು ಮಾತನ್ನು ಮುಗಿಸುವ ಶಬ್ದಕ್ಕೆ ಕ್ರಿ |

| | | | |
|---|---|---|---|
| | | ದೋ? ಇವು ಅನುಕ್ರಮವಾಗಿ ಯಾವ ಯಾವ ಕೆಲಸಗಳನ್ನು ಹೇಳುವವು? ಇವು ವಾಕ್ಯದಲ್ಲಿ ಎಂಥಲ್ಲಿ ಇರುವವು? ಈ ಪ್ರಶ್ನಗಳ ಸಹಾಯದಿಂದ ಹೊರಟ ವ್ಯಾಖ್ಯೆಯನ್ನು ಕ. ಹ. ಮೇಲೆ ಬರೆಯುವದು. | ಯಾಪದವೆನ್ನುವರು. |
| ೩. | ನಾಮಪದ | ೧ ನೇ ವಾಕ್ಯದಲ್ಲಿ— ಯಾವವು ತಿನ್ನುತ್ತವೆ? ಏನನ್ನು ತಿನ್ನುವವು?<br>೨ನೇ ವ್ಯಾಕ್ಯನಲ್ಲಿ–ಯಾವವು ಈಸುವವು? ಎಲ್ಲಿ ಈಸುವವು.<br>೩ನೇ ವಾಕ್ಯದಲ್ಲಿ— ಯಾರು ಮಾಡುತ್ತಾರೆ ಏನನ್ನು ಮಾಡುವರು. ಈ ಪ್ರಶ್ನಗಳನ್ನು ಮಾಡಿ ಬಂದ ಉತ್ತರಗಳನ್ನು ಕ. ಹ. ಮೇಲೆ ಬರೆಯುವದು.<br>ಈ ಎಲ್ಲ ಶಬ್ದಗಳು ಕ್ರಿಯಾಪದದಂತೆ ಕೆಲಸವನ್ನು ಹೇಳುವವೋ? ಮತ್ತು ಮಾತನ್ನು ಮುಗಿಸುವವೋ? ಹಾಗಾದರೆ ಏನನ್ನು ಮಾಡುವವು.<br>ಇವುಗಳಿಗೆ ನಾಮವೆನ್ನುವರು ಎಂದು ಹೇಳಿ ವ್ಯಾಖ್ಯೆಯನ್ನು ಹೊರಡಿಸಿ ಕ. ಹ. ಮೇಲೆ ಬರೆಯುವದು. | ಹಕ್ಕಿಗಳು ಕಾಳು<br>ಕಪ್ಪೆಗಳು ನೀರಲ್ಲಿ<br>ಅವ್ವನು ಅಡಿಗೆಯನ್ನು<br>ಮನುಷ್ಯ, ಪ್ರಾಣಿ, ವಸ್ತು ಮುಂತಾದವುಗಳ ಹೆಸರನ್ನು ಹೇಳುವ ಪದಗಳಿಗೆ ನಾಮಪದಗಳೆನ್ನುವರು. |

**ಉಪಸಂಹಾರ:**— ನಾಮವೆಂದರೇನು? ಕ್ರಿಯಾಪದದ ಕೆಲಸವೇನು? ಮತ್ತು ವಾಕ್ಯದಲ್ಲಿ ಎಂಥಲ್ಲಿ ಇರುವದು? ಕುದುರೆಯು ಹುಲ್ಲನ್ನು ತಿನ್ನುತ್ತದೆ. ಈ ವಾಕ್ಯದಲ್ಲಿ ನಾಮಪದಗಳು ಯಾವವು? ಕ್ರಿಯಾಪದವು ಯಾವದು?

# ೪ನೆಯ ಇಯತ್ತೆ.

**ವಿಷಯ:—** ವ್ಯಾಕರಣ ( ಕ್ರಿಯಾವಿಶೇಷಣ )

**ವೇಳೆ:—** ೪೫ ಮಿನಿಟು

**ಉಪಕರಣ:—** (೧) ರಾಮನು ಮೆಲ್ಲಗೆ ಹೋಗುತ್ತಾನೆ. (೨) ಗಂಗೆಯು ಚೆನ್ನಾಗಿ ಹಾಡುತ್ತಾಳೆ. ಈ ವಾಕ್ಯಗಳನ್ನು ಬರೆದ ರಟ್ಟು.

**ಉಪೋದ್ಘಾತ:—** ನಾಮವೆಂದರೇನು! ಚಿಕ್ಕ ಇದು ಏನು ಅದೆ! ವಿಶೇಷಣವೆಂದರೇನು ಉದಾಹರಣೆ ಹೇಳು. ಈ ಪ್ರಶ್ನೆಗಳನ್ನು ಮಾಡಿ ವಿಷಯವನ್ನು ಪ್ರಾರಂಭಿಸುವದು.

| ಮೆಟ್ಟು | ವಿಷಯ. | ಕಲಿಸುವ ಕ್ರಮ. | ಕ. ಹ. ಉಪಯೋಗ. |
|---|---|---|---|
| ೧. ವಾಕ್ಯದ ಬೇರೆ ಬೇರೆ ಭಾಗಗಳನ್ನು ಹೇಳುವದು. | ಪಟದಲ್ಲಿ ಬರೆದ ವಾಕ್ಯ. | ಒಬ್ಬೊಬ್ಬರು ಒಂದೊಂದು ಭಾಗವನ್ನು ಹೇಳತಕ್ಕದ್ದು. | ರಾಮನು । ಮೆಲ್ಲಗೆ । ಹೋಗುತ್ತಾನೆ. ಗಂಗೆಯು । ಚೆನ್ನಾಗಿ । ಹಾಡುತ್ತಾಳೆ. |
| ೨. ಬೇರೆ ಬೇರೆ ಪದಗಳ ವ್ಯಾಕರಣ ಹೇಳುವದು | ಸದರ. | ರಾಮನು, ಗಂಗೆಯು } ಇವು ಏನು ಅವೆ ?<br>ಹೋಗುತ್ತಾನೆ, ಹಾಡುತ್ತಾಳೆ } ಇವು ಏನು ಅವೆ !<br>ಹೆಸರು ಹೇಳಲಿಕ್ಕೆ ಬಾರದ ಪದಗಳು ಯಾವವು ಉಳಿದವು? | ಮೆಲ್ಲಗೆ, ಚೆನ್ನಾಗಿ |

| | | | |
|---|---|---|---|
| ೩ ಕ್ರಿಯಾ ವಿಶೇಷಣ | ಮೆಲ್ಲಗೆ, ಚೆನ್ನಾಗಿ | ಮೆಲ್ಲಗೆ ಏನು ಮಾಡುತ್ತಾನೆ? ಚೆನ್ನಾಗಿ ಏನು ಮಾಡುತ್ತಾಳೆ? ಎಂಬ ಪ್ರಶ್ನಗಳನ್ನು ಕೇಳುವದು. ಹೋಗುತ್ತಾನೆ, ಹೋಗುತ್ತಾಳೆ ಇವು ಏನು ಅವೆ? ಚೆನ್ನಾಗಿ, ಮೆಲ್ಲಗೆ ಇವು ಯಾವ ಪದವನ್ನು ವರ್ಣಿಸುವವು? ವರ್ಣಿಸುವ ಪದಗಳಿಗೆ ಏನನ್ನುವರು? | ಕ್ರಿಯಾಪದಗಳ ವಿಶೇಷಣಗಳಿಗೆ ಕ್ರಿಯಾವಿಶೇಣವೆನ್ನುವರು. |

ಪರೀಕ್ಷೆ :— "ಬಳಿಕ ರಾಮನು ಮೃಗವನ್ನು ಬೆನ್ನಟ್ಟಿ ದೂರ ಅಡವಿಗೆ ಹೋದನು" ಈ ವಾಕ್ಯದೊಳಗಿನ ಪದಗಳನ್ನು ಹೇಳಿ ಅವುಗಳಲ್ಲಿ ಕ್ರಿಯಾವಿಶೇಷಣಗಳು ಯಾವವೆಂಬದನ್ನು ಹುಡುಗರು ಹೇಳತಕ್ಕದ್ದು.

**ಉಪಸಂಹಾರ:**—೧. ಕ್ರಿಯಾವಿಶೇಷಣವೆಂದರೇನು ?

೨. ಉದಾಹರಣೆಗಳನ್ನು ಹೇಳಿರಿ.

# ೪ನೇ ಇಯತ್ತೆ

**ಶಿಕ್ಷಕ:**—

**ವಿಷಯ:**—ಇತಿಹಾಸ ( ಹೈದರನ ಚರಿತ್ರೆ )

**ಉಪಕರಣಗಳು:**— ಹಿಂದುಸ್ಥಾನದ ನಕಾಶ, ಹೈದರನ ಚಿತ್ರ

**ಉಪೋದ್ಘಾತ:**—ಈಗ ಮೈಸೂರಲ್ಲಿ ಆಳುವ ಅರಸರು ಯಾರು ? ಇವರು ಯಾವ ಧರ್ಮದವರು? ಈ ಹಿಂದು ಅರಸರನ್ನು ತಳ್ಳಿ ಇಬ್ಬರು ಮುಸಲ್ಮಾನ ಅರಸರು ಆಳಿದರು. ಅದರಲ್ಲಿ ಮೊದಲನೆಯವನಾದ ಹೈದರನ ಚರಿತ್ರವನ್ನು ಕಲಿಯುವಾ.

| ಮೆಟ್ಟು | ವಿಷಯ | ಕ್ರಮ | ಕ. ಹ. ಉಪಯೋಗ |
|---|---|---|---|
| ೧. ಜನ್ಮ. | ಹೈದರನು ಫತ್ತೇಖಾನ ಶಿಪಾಯಿಯ ಮಗನು. ಇವನು ೧೭೨೧ರಲ್ಲಿ ಹುಟ್ಟಿದನು. | ಇದನ್ನು ವಿದ್ಯಾರ್ಥಿಗಳಿಗೆ ಹೇಳಬೇಕು. | ಜನ್ಮ ೧೭೨೧. |
| ೨. ಬಾಲ್ಯ. | ಹೈದರನು ಚಿಕ್ಕಂದಿನಲ್ಲಿ ಓದು, ಬರಹ ಕಲಿಯಲಿಲ್ಲ. ಶಿವಾಜಿಯಂತೆ ಪುಂಡತನವನ್ನು ಮಾಡುತ್ತಿದನು. ಮತ್ತು ಕೆಲವು ಜನರನ್ನು ಕೂಡಿಸಿಕೊಂಡು ಹಳ್ಳಿಗಳನ್ನು ಸುಲಿಯುವದು, ಕಾಳು, ಕಡಿ ಮೊದಲಾದವುಗಳನ್ನು ಲೂಟಿ ಮಾಡುವದು ಮುಂತಾದ ಕೆಲಸಗಳನ್ನು ಮಾಡಹತ್ತಿದನು. | ಇವನ ಚಿತ್ರವನ್ನು ತೋರಿಸುತ್ತ ಎಲ್ಲ ಸಂಗತಿಯನ್ನು ವಿಸ್ತಾರವಾಗಿ ಹುಡುಗರಿಗೆ ಮನೋರಂಜನೆಯಾಗುವಂತೆ ಹೇಳಬೇಕು. | |

| | | | |
|---|---|---|---|
| ೩. ಸಾಹಸ. | ಇವನ ಪುಂಡಾಟಿಕೆಯನ್ನು ಕಂಡು ಕೃಷ್ಣರಾಜನ ಮಂತ್ರಿಯಾದ ನಂದಿರಾಜನು ಇವನನ್ನು ದಂಡಿನಲ್ಲಿ ಚಾಕರಿಗೆ ಇಟ್ಟುಕೊಂಡನು. ಇವನು ತನ್ನ ಶೌರ್ಯ ಸಾಹಸಗಳಿಂದ ಸೇನಾಧಿಪತ್ಯವನ್ನು ಸಂಪಾದಿಸಿದನು. ಮುಂದೆ ಕೃಷ್ಣರಾಜನಿಗೂ ನಂದಿರಾಜನಿಗೂ ದ್ವೇಷ ಹುಟ್ಟಿದ್ದರಿಂದ ಇವನು ಯುಕ್ತಿಯಿಂದ ನಂದಿರಾಜನನ್ನು ತಳ್ಳಿ ಕೃಷ್ಣರಾಜನನ್ನು ಸೆರೆಯಲ್ಲಿಟ್ಟು ತಾನೇ ಕಾರಭಾರ ಮಾಡಹತ್ತಿದನು. | ಸ್ಪಷ್ಟವಾಗಿ ಎಲ್ಲ ಸಂಗತಿಗಳನ್ನು ಶಿಕ್ಷಕನು ಹೇಳಬೇಕು. | ಕೃಷ್ಣರಾಜ<br>ನಂದಿರಾಜ. |
| ೪ ಹೈದರನ ಜಯಗಳು. | ಇವನು ೧೭೬೧ ರಲ್ಲಿ ಮೈಸೂರಿನ ರಾಜಕಾರ್ಯಗಳನ್ನೆಲ್ಲ ನೋಡ ಹತ್ತಿದನು. ಅವನು ಪೇಶವೆಯು ಸೀರಾ ಸರಗಣೆಯನ್ನು ತಕ್ಕೊಂಡ ಬಳಿಕ ಹರಪನಹಳ್ಳಿ, ರಾಯದುರ್ಗ, ಚಿತ್ರದುರ್ಗಗಳ ನಾಯಕರಿಂದ ಕಪ್ಪ ತಕ್ಕೊಂಡನು. ಬೇದನೂರ ನಗರವನ್ನು ಸುಲಿದು ಬಹಳ ದ್ರವ್ಯ | ” ” ” | ೧೭೬೧ ರಲ್ಲಿ ಮೈಸೂರಿನ ರಾಜಕಾರ್ಯ ನೋಡಹತ್ತಿದನು.<br>ಸೀರಾ<br>೧೭೬೩ |

| | | | | | |
|---|---|---|---|---|---|
| ಸ ಮಾಡಿದ ಯುದ್ಧಗಳು. | ತಕ್ಕೊಂಡನು. (೧೭೬೩) ಮುಂದೆ ಸವಣೂರ ರಾಜ್ಯವನ್ನೆಲ್ಲ ತಕ್ಕೊಂಡು ಪೇಶವೆಯ ರಾಜ್ಯದೊಳಗೆ ಹೊಕ್ಕು ಧಾರವಾಡ ಮುಂತಾದ ಕೋಟೆಗಳನ್ನು ತಕ್ಕೊಂಡು ಮಲಾಪಹಾರಿಯ ವರೆಗೆ ದಾಳಿಯನ್ನು ಮಾಡಿದನು.<br>ಇವನು ಬಲಿಷ್ಠನಾದದ್ದನ್ನು ನೋಡಿ ಮಹಾರಾಷ್ಟ್ರರು ಯುದ್ಧಕ್ಕೆ ಬರಲು ರಟ್ಟೀಹಳ್ಳಿಯಲ್ಲಿಹೈದರನು ಸೋತನು(೧೭೬೫) ಇವನು ಇಂಗ್ಲಿಷರ ಆಶ್ರಿತನಾದ ಕರ್ಣಾಟಕದ ನವಾಬನ ಎಷ್ಟೋ ಕೋಟೆಗಳನ್ನು ಹಿಡಕೊಂಡದ್ದಲ್ಲದೆ ಅವರ ಸ್ನೇಹಿತನಾದ ನಿಜಾಮನಮೇಲೆ ದಂಡೆತ್ತಿ ಹೋಗಲಿಕ್ಕೆ ಅನುವಾಗಿದ್ದನು. ಇದರಿಂದ ಇಂಗ್ಲಿಷರಿಗೂ ಇವನಿಗೂ ಯುದ್ಧವಾಯಿತು. ಇದರಲ್ಲಿ ಹೈದರನು ಇಂಗ್ಲಿಷರನ್ನುಸೋಲಿಸಿದನು. (೧೭೭೦) ಕೆಲವು ದಿನಗಳ ಮೇಲೆ ಹೈದರನು ಮಹಾರ್‍ಾ | ,, | ,, | ,, | ರಟ್ಟೀಹಳ್ಳೀಯುದ್ಧ ೧೭೬೫ |

| | | | |
|---|---|---|---|
| | ಪ್ಪರನ್ನು ಕೂಡಿಕೊಂಡು ಇಂಗ್ಲಿಷರನ್ನು ಈ ದೇಶದಿಂದ ಹೊರಗೆ ಹಾಕುವ ನಿಶ್ಚಯಮಾಡಿ ಯುದ್ಧಕ್ಕೆ ಆರಂಭಮಾಡಿದನು. (೧೭೭೬). ಈ ಪ್ರಸಂಗದಲ್ಲಿ ಪೊಲಿಲೂರ ಹತ್ತರ ಎರಡು ಸಾರೆ, ಕಾವೇರಿಯು ಧಡದಲ್ಲಿ ಒಮ್ಮೆ ಇಂಗ್ಲಿಷರು ಸೋತರು. ಆದರೆ ಪೋರ್ಟೋನೋವೊ, ಸೊಲಿಮುಗಡ, ತಲಿಚೇರಿ ಈ ಮೂರು ಕಾಳಗಗಳಲ್ಲಿ ಹೈದರನಿಗೆ ಸೋಲು ಒದಗಿತು. (೧೭೮೧) | | ಪೊಲಿಲೂರ ಪೊರ್ಟೋನೋವೊ ಸೊಲಿಮುಗಡ ತಲಿಚೇರಿ ೧೭೮೧. |
| ೫ ಗುಣ. | ಇವನು ಶೂರನೂ ಚತುರನೂ ಸಾಹಸಿಯೂ ಇದ್ದನು. | ಇವನಲ್ಲಿ ಯಾವ ಯಾವ ಗುಣಗಳು ಕಂಡು ಬರುವವು? ಎಂದು ಒಂದೊಂದು ಸಂಗತಿಯನ್ನು ಉದ್ದೇಶಿಸಿ ಬಾಲಕರಿಗೆ ಪ್ರಶ್ನ ಕೇಳುವದು. | ಶೂರನೂ ಚತುರನೂ. ಮರಣ ೧೭೮೨. |
| ೬ ಮರಣ. | ೧೭೮೨ರಲ್ಲಿ ಬೇನೆ ಬಂದು ಸತ್ತನು. | ,, ,, | |

**ಉಪಸಂಹಾರ:**—೧. ಹೈದರನು ಎಂದು ಸತ್ತನು? ೨. ಪಟ್ಟವನ್ನು ಹೇಗೆ ದೊರಕಿಸಿದನು? ೩. ಯಾವ ಯಾವಪಟ್ಟಣಗಳನ್ನು ಗೆದ್ದನು? ೪. ಯಾವ ಯಾವ ಯುದ್ಧಗಳಲ್ಲಿ ಇಂಗ್ಲಿಷರನ್ನು ಸೋಲಿಸಿದನು? ೫. ಎಂದು ಸತ್ತನು?

# ೩ನೇ ಇಯತ್ತೆ

**ಶಿಕ್ಷಕ:** —

**ವಿಷಯ:**—ಭೂಗೋಲು ( ಧಾರವಾಡ ಜಿಲ್ಹೆಯ ಬೆಳೆಗಳು )

**ಉಪಕರಣ:**—ಧಾರವಾಡ ಜಿಲ್ಹೆಯ ಮಾಡೆಲ್, ನಕಾಶ

**ಉಪೋದ್ಘಾತ:**—ಬಾಲಕರೇ, ನೀವು ಇರುವ ತಾಲೂಕ ಯಾವದು ? ಆ ತಾಲೂಕಿನ ಯಾವ ಯಾವ ಭಾಗದ ಭೂಮಿಯು ಹೇಗೆ ಇರುವದು ? ಮತ್ತು ಏನೇನು ಬೆಳೆಯುವದು ? ಯಾಕೆ ? ಅದಕ್ಕೆ ಏನು ಅನಕೂಲತೆಗಳಿರುವವು ? ಹಾಗಾದರೆ ಈ ಜಿಲ್ಹೆಯ ಯಾವ ಯಾವ ಭಾಗದಲ್ಲಿ ಯಾವ ಯಾವ ಬೆಳೆಯು ಬರುತ್ತದೆಂಬದನ್ನು ಕಲಿಯುವಾ.

| ಮೆಟ್ಟು. | ವಿಷಯ. | ಕ್ರಮ. | ಕ. ಹ. ಉಪಯೋಗ. |
|---|---|---|---|
| ೧ | ಮೂರು ಭಾಗಗಳ ಪ್ರಾಕೃತಿಕ ಸ್ವರೂಪ | ಧಾರವಾಡ ಜಿಲ್ಹೆಯ ಮಾಡೆಲ್ಲನ್ನು ನಿರೀಕ್ಷಿಸಿದ ನಂತರ ನಿಮಗೆ ಎಷ್ಟು ಭಾಗಗಳು ಕಾಣಿಸುವವು? | ಮೂರು ಭಾಗಗಳು |
| ೨ | ಮಲೆನಾಡು | ಮಾಡೆಲ್ ತೋರಿಸಿ ಇದರ ಯಾವ ಭಾಗದಲ್ಲಿ ಗುಡ್ಡಗಳು ಹೆಚ್ಚು ಇರುವವು. ಮಲೆನಾಡು ಜಿಲ್ಹೆಯ ಯಾವ ದಿಕ್ಕಿಗೆ ಇರುವದು.<br>ಅಲ್ಲಿ ಯಾವ ಪ್ರಕಾರದ ಭೂಮಿ ಇರುವದು ?<br>ಮಲೆ ನಾಡಿನಲ್ಲಿ ಮಳೆಯು ಎಷ್ಟು ಆಗುತ್ತಿರಬಹುದು ? | ಪಶ್ಚಿಮಕ್ಕೆ ಮಲೆನಾಡು<br>ಕೆಂಪು ಭೂಮಿ<br>ಬಹಳ ಮಳೆ |

| | | | |
|---|---|---|---|
| | | ಯಾವ ಬೆಳೆಗಳು ಬರುವವು ? ಇದನ್ನೆಲ್ಲ ಶಿಕ್ಷಕನು ತನ್ನ ನಕಾಶದಲ್ಲಿ ತುಂಬುವದು. | ಕಬ್ಬು |
| ೩ | ಗಡಿನಾಡು | ಮಲೆನಾಡಿನ ಪೂರ್ವಕ್ಕೆ ಯಾವ ಪ್ರಕಾರದ ಭೂಮಿ ಇರುವದು ?<br>ಮಲೆನಾಡಿಗಿಂತ ಇಲ್ಲಿ ಮಳೆಯು ಕಡಿಮೆಯಾಗುತ್ತದೋ ಹೆಚ್ಚು ಆಗುತ್ತದೋ<br>ಯಾಕೆ ?<br>ಯಾವ ಬೆಳೆಗಳು ಬರುತ್ತವೆ ?<br>ಮಲೆನಾಡು ಗಡಿನಾಡುಗಳಲ್ಲಿ ಮಳೆಯು ಯಾವಾಗ ಆಗುವದು ?<br>ಇದನ್ನೆಲ್ಲ ಶಿಕ್ಷಕನು ತನ್ನ ನಕಾಶದಲ್ಲಿ ತುಂಬುವನು ? | ಕೆಂಪು ಹಾಗು ಕಪ್ಪು ಭೂಮಿಯು<br>ಮಲೆನಾಡಿಗಿಂತ ಮಳೆ ಕಡಿಮೆ<br>ಜೋಳ, ಹತ್ತಿ, ಭೈಮೂಗು, ಅಕ್ಕಡಿಯ ಕಾಳು<br>ಜ್ಯೇಷ್ಠ, ಆಷಾಢ, ಶ್ರಾವಣ (ಜೂನ, ಜುಲೈ, ಅಗಸ್ಟ) ಎರಿ ಭೂಮಿಯು. |
| ೪ | ಬೆಳವಲನಾಡು (ಬೈಲುಸೀಮೆ) | ಗಡಿನಾಡಿನ ಪೂರ್ವಕ್ಕೆ ಯಾವ ಪ್ರಕಾರದ ಭೂಮಿ ಇರುವದು ?<br>ಮಳೆಯು ಎಷ್ಟು ಆಗುವದು ?<br>ಯಾವ ಬೆಳೆಗಳು ಬರುವವು ? | ಮಳೆ ಕಡಿಮೆ,<br>ಗಡಿನಾಡಿನ ಎಲ್ಲ ಬೆಳೆಗಳು ಮತ್ತು ಬಿಳಿಜೋಳ, ಗೋದಿ, ಕುಸುಬಿ |

| | | | |
|---|---|---|---|
| ೫ | ಬಣ್ಣಕೊಡುವದು, ಬೆಳೆಗಳ ಹೆಸರು ಬರೆಯುವದು. | ಹುಡುಗರ ಕೈಯಲ್ಲಿ ಬಾಹ್ಯರೇಷೆಯ ನಕಾಶವನ್ನು ಕೊಟ್ಟು ಮೂರೂ ಭಾಗಗಳ ಬಣ್ಣಕೊಡಿಸಿ ಬೆಳೆಗಳನ್ನು ತುಂಬಲಿಕ್ಕೆ ಹೇಳುವದು. | |

**ಉಪಸಂಹಾರ:**—೧. ಭತ್ತವು ಎಂಥ ಭೂಮಿಯಲ್ಲಿ ಬೆಳೆಯುವದು ? ೨. ಈ ಜಿಲ್ಹೆಯಲ್ಲಿ ಮಣ್ಣಿನ ಗುಣದಿಂದ ಎಷ್ಟು ಭಾಗಗಳಿವೆ ? ೩. ಅಯಾ ಭಾಗದಲ್ಲಿ ಯಾವ ಯಾವ ಬೆಳೆಗಳು ಬರುತ್ತವೆ ?

ಸಮಾಪ್ತ.